ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಲಸಿಕಾ ಕಾರ್ಯಕ್ರಮಗಳು

ಕರ್ನಾಟಕ ಸರ್ಕಾರ



## ಚುಚ್ಚುಮದ್ದು ವೇಳಾಪಟ್ಟಿ

**ಗರ್ಭಿಣಿ ಮಹಿಳೆಗೆ**

| | | | |
|---|---|---|---|
| 3 ತಿಂಗಳು ತುಂಬಿದ ನಂತರ | ಟಿ. ಟಿ. - 1 (ಚುಚ್ಚುಮದ್ದು) | ಟಿ. ಟಿ. -1 ಪಡೆದ 1 ತಿಂಗಳ ನಂತರ | ಟಿ. ಟಿ. - 2 (ಚುಚ್ಚುಮದ್ದು) |

**ಮಗುವಿಗೆ**

| | | | |
|---|---|---|---|
| ಮಗು ಜನಿಸಿದ ಕೂಡಲೆ | ಬಿ.ಸಿ.ಜಿ. ಮತ್ತು<br>'O' ಡೋಸ್<br>ಪೋಲಿಯೊ ಹನಿ | 3½ ತಿಂಗಳಲ್ಲಿ | ಡಿ.ಪಿ.ಟಿ. ಚುಚ್ಚುಮದ್ದು<br>ಪೋಲಿಯೊ ಹನಿ<br>ಹೆಪಟೈಟಿಸ್ - 'ಬಿ' ಚುಚ್ಚುಮದ್ದು } 3ನೇ ಸಲ |
| 1½ ತಿಂಗಳಲ್ಲಿ | ಡಿ.ಪಿ.ಟಿ. ಚುಚ್ಚುಮದ್ದು<br>ಪೋಲಿಯೊ ಹನಿ<br>ಹೆಪಟೈಟಿಸ್-'ಬಿ' ಚುಚ್ಚುಮದ್ದು } ಮೊದಲನೇ ಸಲ | 9–12 ತಿಂಗಳ ಒಳಗೆ | ದಢಾರ (ಚುಚ್ಚುಮದ್ದು) ಮತ್ತು<br>ವಿಟಮಿನ್'ಎ' ಅನ್ನಾಂಗ ಪಾಕ |
| | | 16–24 ತಿಂಗಳಲ್ಲಿ | ಡಿ.ಪಿ.ಟಿ. ಬೂಸ್ಟರ್ (ಚುಚ್ಚುಮದ್ದು)<br>ಮತ್ತು ಪೋಲಿಯೊ ಹನಿ |
| 2½ ತಿಂಗಳಲ್ಲಿ | ಡಿ.ಪಿ.ಟಿ. ಚುಚ್ಚುಮದ್ದು<br>ಪೋಲಿಯೊ ಹನಿ<br>ಹೆಪಟೈಟಿಸ್-'ಬಿ' ಚುಚ್ಚುಮದ್ದು } 2ನೇ ಸಲ | 5 ವರ್ಷ | ಟಿ.ಟಿ. ಬೂಸ್ಟರ್ |
| | | 10 ವರ್ಷ | ಟಿ.ಟಿ. ಬೂಸ್ಟರ್ |
| | | 16 ವರ್ಷ | ಟಿ.ಟಿ. ಬೂಸ್ಟರ್ |

(ಎಲ್ಲಾ ಲಸಿಕೆಗಳು/ಚುಚ್ಚುಮದ್ದುಗಳನ್ನು ಉಚಿತವಾಗಿ ಹಾಕಲಾಗುವುದು)

**5 ವರ್ಷದ ಒಳಗಿನ ಎಲ್ಲಾ ಮಕ್ಕಳಿಗೆ ಪೋಲಿಯೊ ಹನಿ ಹಾಕಿಸಿ**

ಪ್ರಕಟಣೆ : **ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಶ್ರೀಹರಿ, ಕಮಲಂ ಅರಸು
ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು

ಮುಖಚಿತ್ರ : ಜಿ. ಅದ್ವೈತ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಡಿ. ವಿ. ಶೈಲೇಂದ್ರಕುಮಾರ್ ಎಬ್ಬಿಸಿದ ಬಿರುಗಾಳಿಗೆ ನ್ಯಾಯಾಂಗ ವಿಭಾಗವು ತತ್ತರಿಸಿಹೋಗಿದೆ ಎಂದು ಕೆಲವರು ಭಾವಿಸಿದ್ದಾರೆ. ಸರ್ವೋಚ್ಚ ನ್ಯಾಯಾಧೀಶ ಶ್ರೀ ಕೆ. ಜಿ. ಬಾಲಕೃಷ್ಣನ್, ಅವರನ್ನು ''ಪ್ರಚಾರ ಪ್ರಿಯ'' ಎಂದು ಹಂಗಿಸಿ ಆಮೇಲೆ ಸ್ವಲ್ಪ ವಿವೇಕಯುತವಾಗಿ ಮಾತನಾಡಿದ್ದು ಸ್ವಂತದ ಅಭಿಲಾಷೆಯಿಂದಲ್ಲ, ಬದಲಾಗಿ ಎಲ್ಲ ಕಡೆಗಳಿಂದಲೂ ಬಂದ ಟೀಕೆಗಳಿಂದಾಗಿ ಮತ್ತು ಶೈಲೇಂದ್ರಕುಮಾರ್ ಅವರ ಪರವಾಗಿ ವ್ಯಕ್ತವಾದ ಸರ್ವಜನಾಭಿಪ್ರಾಯದಿಂದಾಗಿ. ನ್ಯಾಯಾಲಯಗಳ ಅಧಿಪತಿಗಳು ಮುಚ್ಚಿಟ್ಟುಕೊಳ್ಳಬೇಕಾದ್ದು ಏನೋ ಅಗಾಧವಾಗಿದೆ ಎಂಬ ನಂಬಿಕೆಯು ಬಾಲಕೃಷ್ಣನ್ ಅವರ ಹೇಳಿಕೆ ಮತ್ತು ಕ್ರಿಯೆಯಿಂದ ದೃಢಗೊಳ್ಳುತ್ತಿದೆ. ಅದರ ಪರಿಣಾಮವು ನ್ಯಾಯಾಲಯಗಳ ಶ್ರೇಷ್ಠತೆಯ ಬಗೆಗಿನ ಸಂಶಯ; ಆದರೆ ಅದು ಶ್ರೇಷ್ಠತೆಯ ರಕ್ಷಣೆಯೆಂದು ಮುಖ್ಯ ನ್ಯಾಯಾಧೀಶರು ಭ್ರಮಿಸುತ್ತಿದ್ದಾರೆ. ಮುಕ್ತವಾಗಿ ಆಸ್ತಿಯ ಘೋಷಣೆ ಮಾಡಲು ಅಂಜುವವರ ಬಗ್ಗೆ ಗುಮಾನಿ ಹೆಚ್ಚದಿರಲು ಸಾಧ್ಯವಿಲ್ಲ. ಅಂತಹ ಘೋಷಣೆಗೆ ಏನೇನೋ ಸಬೂಬು ಹೇಳುತ್ತಿರುವ ಬಾಲಕೃಷ್ಣನ್ ನ್ಯಾಯಾಂಗದ ಸಂವಿಧಾನಾತ್ಮಕ ಸ್ಥಾನಕ್ಕೆ ಚ್ಯುತಿ ಉಂಟುಮಾಡಿದರೆ ಆಶ್ಚರ್ಯವಿಲ್ಲ. ನ್ಯಾಯಮೂರ್ತಿ ಶೈಲೇಂದ್ರಕುಮಾರ್ ಅವರ ಆಸ್ತಿ ಘೋಷಣೆಯನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ಅಂತರಜಾಲದಲ್ಲಿ ಸೇರ್ಪಡೆಗೊಳಿಸಲು ಅಡ್ಡಿಯುಂಟಾದ್ದರಿಂದ ಅವರು ಸ್ವಂತದ ವೆಬ್‌ಸೈಟಿನಲ್ಲಿ ಅದನ್ನು ದಾಖಲಿಸಿದ್ದಾರೆ. ಎಲ್ಲ ನ್ಯಾಯಮೂರ್ತಿಗಳೂ ಶ್ರೀ ಶೈಲೇಂದ್ರಕುಮಾರ್ ಅವರಿಗೆ ಬೆಂಬಲ ನೀಡಿ ನ್ಯಾಯಾಲಯದ ವೆಬ್‌ಸೈಟಿನಲ್ಲಿ ತಮ್ಮೆಲ್ಲರ ಆಸ್ತಿ ಘೋಷಣೆ ಮಾಡಿಕೊಂಡಿದ್ದರೆ ಅವರ ಹಾಗೂ ನ್ಯಾಯಾಲಯದ ಗೌರವ ಉಳಿಯುತ್ತಿತ್ತು. ಹಾಗೆ ಮಾಡಲು ಸಿದ್ಧರಿಲ್ಲದಿದ್ದುದಕ್ಕೆ ಎರಡು ಕಾರಣಗಳನ್ನು ಊಹಿಸಬಹುದು : (ಅ) ಬಹಿರಂಗಗೊಳಿಸಲಾಗದ್ದೇನೋ ಅವರಲ್ಲಿದೆ, ಇಲ್ಲವೆ (ಆ) ಸರ್ವೋಚ್ಚ ನ್ಯಾಯಾಧೀಶರನ್ನು ಸಂಪ್ರೀತಗೊಳಿಸಲು ಅವರು ಹಾತೊರೆಯುತ್ತಿದ್ದಾರೆ. ಎರಡೂ ಪ್ರಶ್ನಾರ್ಹ ನಡವಳಿಕೆಯ ಚಿಹ್ನೆಗಳೇ ಆಗಿವೆ. ಕರ್ನಾಟಕದ ಉಚ್ಚ ನ್ಯಾಯಾಧೀಶ ಶ್ರೀ ದಿನಕರನ್ ಅವರ ಬಗೆಗೆ ಕೇಳಿಬಂದಿರುವ ಆರೋಪಗಳು ಯಾರಿಗೂ ಮರ್ಯಾದೆ ತರುವುದಿಲ್ಲ. ನ್ಯಾಯಾಂಗದ ಹಿರಿಮೆಗೆ ಇದರಿಂದ ಉಂಟಾಗಿರುವ ಹಾನಿಯನ್ನು ಯಾರೂ ತೊಡೆದುಹಾಕಲಾಗುವುದಿಲ್ಲ. ದೆಹಲಿಯಲ್ಲಿ ನ್ಯಾಯಮೂರ್ತಿಗಳ ಮಂಡಲಿಯ ಮುಂದೆ ಹಾಜರಾಗಿ ತಮ್ಮ ವಿರುದ್ಧದ ಆಪಾದನೆಗಳಿಗೆ ದಿನಕರನ್ ಸಮಜಾಯಿಷಿ ನೀಡಿದ್ದಾರೆಂದೂ ಮಂಡಲಿಯು ಅದನ್ನು ಅಂಗೀಕರಿಸಿದೆಯೆಂದೂ ಹೇಳಲಾಗಿದೆ. ಅನುಮಾನಗಳ ಗೂಡು ಇದರಿಂದ ಇನ್ನಷ್ಟು ಗಾಢವಾಗಿದೆ. ತಮ್ಮ ಆಸ್ತಿಯ ಘೋಷಣೆ ಮಾಡಲು ಹಿಂಜರಿಯುವ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಮಾತನ್ನು ಯಥಾವತ್ತಾಗಿ ಸ್ವೀಕರಿಸಲಾದೀತೇ ಎಂಬ ಪ್ರಶ್ನೆ ಮುಂದೆ ಬಂದಿದೆ. ಮಾನ್ಯ ದಿನಕರನ್ ಅವರು ಮಂಡಲಿಗೆ ನೀಡಿರುವ ಸಮಜಾಯಿಷಿ ಬಹಿರಂಗಗೊಂಡಿಲ್ಲ. ಅವರು ಮಂಡಲಿಯ ಮುಂದೆ ವಿವರಣೆ ನೀಡುವ ಬದಲು ರಾಜಿನಾಮೆ ನೀಡಿ ಮನೆಗೆ ಹೋಗಿದ್ದಿದ್ದರೆ ಅದು ಹೆಚ್ಚು ಶ್ರೇಯಸ್ಕರವಾಗುತ್ತಿತ್ತು. ಮತ್ತು ನ್ಯಾಯಾಲಯದ ಘನತೆಗೆ ಒಳ್ಳೆಯ ಸೂಜಿಮದ್ದು ನೀಡಿದಂತಾಗುತ್ತಿತ್ತು. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳೆಲ್ಲಾ ಸಭೆ ಸೇರಿ ಒಂದು ಒಮ್ಮತದ ತೀರ್ಮಾನ ಕೈಗೊಂಡಿದ್ದರು. ಅದು ಶ್ರೀ ಶೈಲೇಂದ್ರಕುಮಾರ್ ಅವರ ಲೇಖನದ ನಂತರದ ಘಟನೆ. ಅದಾಗಿ ತಿಂಗಳು ಕಳೆದಿದ್ದರೂ ನ್ಯಾಯಮೂರ್ತಿಗಳು ತಮ್ಮ ಸ್ವಂತದ ಆಸ್ತಿಯನ್ನು ಬಹಿರಂಗವಾಗಿ ಘೋಷಿಸಿಲ್ಲ. ವಿವರಗಳನ್ನು ತಮಗೆ ನೀಡಿದ್ದಾರೆಂದು ಶ್ರೇಷ್ಠ ನ್ಯಾಯಮೂರ್ತಿಗಳು ಹೇಳಿದ್ದಾರಂತೆ. ಅವರ ಬಳಿ ಗೂಢವಾಗಿ ಉಳಿದರೆ ಏನು ಪ್ರಯೋಜನ ? ಅದು ಸಾರ್ವಜನಿಕರ ತಿಳುವಳಿಕೆಯ ವಲಯಕ್ಕೆ ಬರಬೇಕು. ಮಾಧ್ಯಮಗಳು ಇಂತಹ ಇರಾದೆಯನ್ನು ಮುಂದಿರಿಸುವ ಬದಲು ತಟಸ್ಥವಾಗಿರುವುದು ಪ್ರಜಾಪ್ರಭುತ್ವಕ್ಕೆ ಮಾರಕವಾದುದು. ಕೆಲವು ರಾಜ್ಯಗಳ ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳು ತಮ್ಮ ಆಸ್ತಿ ಘೋಷಿಸಿಕೊಂಡಿದ್ದಾರೆ. ಆದರೆ ಕರ್ನಾಟಕದಲ್ಲಿ ಈ ಪ್ರಕ್ರಿಯೆ ಆರಂಭವಾಗಿಲ್ಲದಿರುವುದು ಶುಭಸೂಚನೆಯಲ್ಲ. ನ್ಯಾಯಮೂರ್ತಿ ಶ್ರೀ ಶೈಲೇಂದ್ರಕುಮಾರ್ ಅವರಂತೆ ನಮ್ಮ ರಾಜ್ಯದ ಬೇರೆಲ್ಲ ನ್ಯಾಯಮೂರ್ತಿಗಳೂ ಮುಕ್ತವಾಗಿ ಸ್ಪಂದಿಸುವುದು ಅಗತ್ಯ ಮತ್ತು ಆರೋಗ್ಯಕರ. ಶ್ರೇಷ್ಠ ನ್ಯಾಯಾಧೀಶರು ಶ್ರೀ ಶೈಲೇಂದ್ರಕುಮಾರ್ ಅವರನ್ನು 'ಪ್ರಚಾರಪ್ರಿಯ' ಎನ್ನಲು ಅವರಿಗೆ ತಮ್ಮದೇ ಗಹನ ಕಾರಣಗಳಿರಬಹುದು. ಆದರೆ ಸಾರ್ವಜನಿಕರ ದೃಷ್ಟಿಯಲ್ಲಿ ಇದು ಪ್ರಚಾರವಲ್ಲ,

(೭ನೇ ಪುಟಕ್ಕೆ)




ಸಂಪುಟ-೧೧ ಸಂಚಿಕೆ - ೩ ಅಕ್ಟೋಬರ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@dataone.in**
**hosathu@gmail.com**
**website : www.navakarnataka.com**
**http://navakarnataka.blogspot.com**
**http://hosathu.blogspot.com**

**ಸಂಪಾದಕೀಯ**

# ಬಂಡವಾಳಶಾಹಿಯಡಿ ಆರೋಗ್ಯದ ರಾಜಕೀಯ

ಅಮೆರಿಕಾ ಎಂದ ಕೂಡಲೇ ಇದು ಜಗತ್ತಿನ ಅತ್ಯಂತ ಶ್ರೀಮಂತ ರಾಷ್ಟ್ರ, ಇಲ್ಲಿನ ಸರ್ಕಾರ ತನ್ನ ಪ್ರಜೆಗಳ ಯೋಗಕ್ಷೇಮವನ್ನು ಅತ್ಯಂತ ಕಾಳಜಿಯಿಂದ ಕಾಪಾಡಿಕೊಂಡು ಬರುತ್ತಿದೆ; ಹಾಗಾಗಿ ಅಮೆರಿಕಾದ ಪ್ರಜೆಗಳು ಸುಖ ಸಂಪತ್ತಿನಲ್ಲಿ ತೇಲಾಡುತ್ತಿದ್ದಾರೆ; ಈ ರಾಷ್ಟ್ರದ ಸರ್ಕಾರಕ್ಕೆ ಪ್ರಪಂಚದ ಎಲ್ಲ ಆಗುಹೋಗುಗಳಲ್ಲಿ ತನ್ನ ಮೂಗುತೂರಿಸಿ ತಾನು ಹೇಳಿದಂತೆ ಮಾಡದ ದೇಶಗಳನ್ನು ಪುಂಡುದೇಶಗಳೆಂದು ಘೋಷಿಸಿ, ಪ್ರಜಾತಂತ್ರಕ್ಕಾಗಿ ಯುದ್ಧ, ನಾಗರಿಕತೆಗಾಗಿ ಯುದ್ಧ, ಪ್ರಗತಿಗಾಗಿ ಯುದ್ಧ, ಶಾಂತಿಗಾಗಿ ಯುದ್ಧ ಇತ್ಯಾದಿ ಮಂತ್ರಗಳನ್ನು ಉಚ್ಚರಿಸಿ, ಅವುಗಳನ್ನು ಥಳಿಸಿ ಮಣಿಸುವ ಅಧಿಕಾರ ದೈವದತ್ತವಾದದ್ದೆಂದು ಭ್ರಮಿಸುವವರ ಸಂಖ್ಯೆ ಸಾಕಷ್ಟಿತ್ತು. ಆದರೆ ಈಗ ಪರಿಸ್ಥಿತಿ ಬದಲಾಗುತ್ತಿದೆ. ಅಮೆರಿಕಾದ ವರ್ಚಸ್ಸು ದಿನೇ ದಿನೇ ಕುಗ್ಗುತ್ತಿದೆ. ಅಮೆರಿಕಾ ಸರ್ಕಾರದ ರೀತಿ ನೀತಿಗಳಿಂದ ದೂರ ಸರಿಯುತ್ತಿರುವ ರಾಷ್ಟ್ರಗಳ ಸಂಖ್ಯೆ ಹೆಚ್ಚುತ್ತಿದೆ.

ಈ ವರ್ಷದ ಆದಿಯಲ್ಲಿ ಅಮೆರಿಕಾದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಬರಾಕ್ ಒಬಾಮಾ ನಿರಂತರ ಒತ್ತಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ೨೦೦೭ರಿಂದ ಇಲ್ಲಿಯವರೆಗೆ ಅಮೆರಿಕಾದಲ್ಲಿ ನಿರುದ್ಯೋಗಿಗಳ ಸಂಖ್ಯೆ ೬೯ ಲಕ್ಷಕ್ಕೇರಿದೆ. ಒಟ್ಟು ನಿರುದ್ಯೋಗ ೧ ಕೋಟಿ ೪೭ ಲಕ್ಷದಷ್ಟಿದೆ. ಒಟ್ಟು ಸಾಲದ ಹೊರೆ ೧೧.೪ ಟ್ರಿಲಿಯನ್ ಡಾಲರ್ಸ್; ಅಂದರೆ ಅಮೆರಿಕಾದ ಪ್ರತಿ ಪ್ರಜೆಯ ಮೇಲಿರುವ ಸಾಲದ ಮೊತ್ತ ೩೭೦೦೦ ಡಾಲರ್ಸ್ (ಸುಮಾರು ೧೮ ಲಕ್ಷ ರೂಪಾಯಿಗಳು !). ಅಮೆರಿಕಾದ ಆರ್ಥಿಕ ದುಃಸ್ಥಿತಿ ಒಬಾಮಾಗೆ ವರ ಹಾಗೂ ಶಾಪವಾಗಿ ಪರಿಣಮಿಸಿದೆ. ಈ ದೇಶದ ಆರ್ಥಿಕ ನೀತಿಗಳನ್ನು ರೂಪಿಸುವವರು ಇಲ್ಲಿನ ಕಾರ್ಪೊರೇಟ್ ಧಣಿಗಳು ಮತ್ತು ಸರ್ಕಾರದಲ್ಲಿರುವ ಇವರ ದಳ್ಳಾಳಿಗಳು. ಅದರಲ್ಲೂ ಖಾಸಗಿ ವಾಹನ ತಯಾರಿಕೆಯ ಕಂಪನಿಗಳು ಮತ್ತು ಖಾಸಗಿ ವಿಮಾ ಕಂಪನಿಗಳು ಈ ದೇಶದ ಆಕ್ಟೋಪಸ್‌ಗಳು.

ಕುಸಿದ ಜಾಗತಿಕ ಮಾರುಕಟ್ಟೆಯು ಅಮೆರಿಕಾದ ವಾಹನ ತಯಾರಿಕೆಯ ಕಂಪನಿಗಳಾದ ಜನರಲ್ ಮೋಟಾರ್ಸ್, ಕ್ರೈಸ್ಲರ್‌ಗಳನ್ನು ದಿವಾಳಿಯಾಗಿಸಿದೆ. ಅದರ ಮಾಲಿಕರು ಈಗ ಮಂಡಿಯೂರಿ ಕುಳಿತಿದ್ದಾರೆ. ಸರ್ಕಾರದ ಹಣಹೂಡುವಿಕೆಯಿಂದ ಈಗ ಸ್ವಲ್ಪಮಟ್ಟಿಗೆ ಪುನರ್ಜೀವ ಹೊಂದಿವೆ. ಈ ಪರಿಸ್ಥಿತಿಯ ಲಾಭ ಪಡೆದು ಒಬಾಮಾ ರಾಷ್ಟ್ರೀಯ ವಾಹನ ನೀತಿಯನ್ನು ತರುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಆರೋಗ್ಯ ರಕ್ಷಣಾ ವ್ಯವಸ್ಥೆಯ ಸುಧಾರಣೆ ಮಾತ್ರ ಗಜಗರ್ಭವಾಗಿಬಿಟ್ಟಿದೆ. ಚುನಾವಣೆಯ ಪೂರ್ವ ಮತ್ತು ಚುನಾವಣೆಯ ನಂತರದ ದಿನಗಳಲ್ಲಿ ಒಬಾಮಾನ ಜನಪ್ರಿಯತೆ ಉತ್ತುಂಗಕ್ಕೇರಿತ್ತು. ಚುನಾವಣೆಗೆ ಮುನ್ನ ತಾನು ಅಧಿಕಾರಕ್ಕೆ ಬಂದಲ್ಲಿ ರಾಷ್ಟ್ರದ ಜನತೆಯನ್ನು ತೀವ್ರ ಆತಂಕಕ್ಕೊಳಗೊಳಿಸಿರುವ ಮತ್ತು ಕುಸಿಯುತ್ತಿರುವ ಆರೋಗ್ಯ ರಕ್ಷಣಾ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಸುಧಾರಿಸುತ್ತೇನೆಂದು ಕೊಟ್ಟ ಇವರ ಚುನಾವಣಾ ಆಶ್ವಾಸನೆ ಜನಮನವನ್ನು ಸೆಳೆದಿತ್ತು. ಚುನಾವಣೆ ನಡೆದು ಒಬಾಮಾ ಅಧಿಕಾರದ ಗದ್ದುಗೆ ಏರಿ ಈಗ ಸುಮಾರು ಎಂಟು ತಿಂಗಳು ಕಳೆದರೂ, ರಾಷ್ಟ್ರೀಯ ಆರೋಗ್ಯ ವ್ಯವಸ್ಥೆಗೆ ಯಾವ ಸುಧಾರಣೆಯನ್ನೂ ತರಲಾಗಿಲ್ಲ. ಇವರು ಜನತೆಗೆ ನೀಡಿದ ಚುನಾವಣೆಯ ಆಶ್ವಾಸನೆಯನ್ನು ಈಡೇರಿಸಿಲ್ಲವೆಂದು ಹಲವಾರು ಜನರು ಬೇಸತ್ತಿದ್ದಾರೆ. ಇನ್ನು ಹಲವಾರು ಜನರು ಇವರು ತರಬಹುದಾದ ಆರೋಗ್ಯ ವ್ಯವಸ್ಥೆಯ ಸುಧಾರಣೆಗಳು ಈಗಿರುವ ಸೌಲಭ್ಯಗಳನ್ನು ಕಡಿಮೆಮಾಡಬಹುದೆಂಬ ಪ್ರಚಾರಕ್ಕೆ ಬಲಿಯಾಗಿ ಗಾಬರಿಯಾಗಿದ್ದಾರೆ. ಒಟ್ಟಾರೆ ಒಬಾಮಾರವರ ಜನಪ್ರಿಯತೆ ದಿನೇ ದಿನೇ ಕುಸಿಯುತ್ತಿದೆ. ಇದರಿಂದ ಒಬಾಮಾ ವಿಚಲಿತಗೊಂಡಂತೆ ಕಾಣುತ್ತಿದೆ.

ಅಮೆರಿಕಾದ ಜನತೆಯನ್ನು ತೀವ್ರವಾಗಿ ಕಾಡುತ್ತಿರುವ ಸಮಸ್ಯೆಯೆಂದರೆ ವಿಷದಂತೆ ಏರುತ್ತಿರುವ ಮತ್ತು ದುಬಾರಿಯಾಗುತ್ತಿರುವ ಆರೋಗ್ಯ ವ್ಯವಸ್ಥೆ. ಖಾಸಗಿ ಔಷಧ ತಯಾರಿಕೆಯ ಕಂಪನಿಗಳು, ಖಾಸಗಿ ಆರೋಗ್ಯ ವಿಮಾ ಸಂಸ್ಥೆಗಳು, ಖಾಸಗಿ ಆಸ್ಪತ್ರೆಗಳು, ವೈದ್ಯರು ಮತ್ತು ವಕೀಲರು ಇವರು ಬಹು ದೊಡ್ಡ ಲೂಟಿಯ ಜಾಲವನ್ನು ಹಲವಾರು ದಶಕಗಳಿಂದ ನಿರ್ಮಿಸಿಕೊಂಡಿದ್ದಾರೆ. ಅಮೆರಿಕಾದ ಸೆನೆಟ್‌ನಲ್ಲಿ ಈ ದುಷ್ಟಕೂಟವನ್ನು ಬೆಂಬಲಿಸುವ ಅಸಂಖ್ಯಾತ ರಿಪಬ್ಲಿಕನ್ ಹಾಗೂ ಡೆಮಾಕ್ರೆಟಿಕ್ ಪಕ್ಷಗಳ ಚುನಾಯಿತ ಜನತಾ ಪ್ರತಿನಿಧಿಗಳಿದ್ದಾರೆ. ತಮ್ಮ ಚುನಾವಣೆಗೆ ಈ ದುಷ್ಟಕೂಟದಿಂದ ಹಣ ಪಡೆಯುತ್ತಾರೆ. ಅಧಿಕಾರಕ್ಕೆ ಬಂದ ನಂತರ ಶಕ್ತಿಮೀರಿ ಈ ದುಷ್ಟಕೂಟದ ಋಣ ತೀರಿಸುತ್ತಾರೆ. ಈ ವಿಷವೃತ್ತ ತಿರುಗುತ್ತಲೇ ಇದೆ. ಪರಸ್ಪರ ಬೆನ್ನು ಕೆರೆದುಕೊಳ್ಳುವ ಈ ಮೈತ್ರಿಕೂಟ ಆರೋಗ್ಯ ರಕ್ಷಣಾ ವ್ಯವಸ್ಥೆಗೆ ಸುಧಾರಣೆ ತರುವಲ್ಲಿ ಒಬಾಮಾನ ಯೋಜನೆಗಳಿಗೆ ಅಡ್ಡಗಾಲು ಹಾಕುವಲ್ಲಿ ತನ್ನೆಲ್ಲ ಸಾಮರ್ಥ್ಯವನ್ನು ಬಳಸುತ್ತಿದೆ. ಈ ಕ್ಷೇತ್ರದಲ್ಲಿ ಸುಧಾರಣೆ ತರಲು ಸಂಬಂಧಪಟ್ಟವರೆಲ್ಲರ ಸಹಕಾರ ಅತ್ಯಗತ್ಯ. ಎಲ್ಲರನ್ನೂ ಸೇರಿಸಿ ಒಮ್ಮತ ಮೂಡಿಸುವ ಒಬಾಮಾನ ಪ್ರಯತ್ನ ವಿಫಲಗೊಂಡಿದೆ. ಸುಧಾರಣೆಗೆ ಪ್ರಮುಖವಾಗಿ ಔಷಧಗಳ ಬೆಲೆ ಇಳಿಯಬೇಕು, ಆರೋಗ್ಯ ವಿಮೆಯ ಬೆಲೆ ಕಡಿಮೆಯಾಗಬೇಕು, ಆಸ್ಪತ್ರೆಗಳು ತಮ್ಮ ದರವನ್ನು ಇಳಿಸಬೇಕು, ವೈದ್ಯರು ಸಹಕರಿಸಬೇಕು, ವಕೀಲರ ವೆಚ್ಚ ಕಡಿಮೆಯಾಗಬೇಕು ಇತ್ಯಾದಿ. ಮೊದಲು ಸರ್ಕಾರ ಸೇರಿಸಿದ್ದ ಸಭೆಯಲ್ಲಿ ಸುಧಾರಣೆಗಳಿಗೆ ಕಂಪನಿಗಳು ಒಪ್ಪಿಕೊಂಡಂತೆ ಕಂಡರೂ ಹೊರನಡೆಯುತ್ತಿದ್ದಂತೆಯೇ ಸುಧಾರಣೆಗಳ ವಿರುದ್ಧ ಹೇಳಿಕೆ ನೀಡಲಾರಂಭಿಸಿವೆ. ಖಾಸಗಿ ವಿಮಾ ಕಂಪನಿಗಳ ಹಿಡಿತ ಕಡಿಮೆ ಮಾಡಲು ಒಬಾಮಾ ಸರ್ಕಾರಿ ವಿಮಾ ಯೋಜನೆಯನ್ನು ಜಾರಿಗೊಳಿಸಲು ಸಿದ್ಧತೆ ನಡೆಸಿದ್ದಾರೆ. ಸರ್ಕಾರ ವಿಮಾಕ್ಷೇತ್ರ ನಡೆಸುವ ಪರಿಶ್ರಮ ಹೊಂದಿಲ್ಲವೆಂದು, ಸರ್ಕಾರಿ ಆರೋಗ್ಯದಿಂದ ವಿಮೆ ಕೊಳ್ಳುವವರಿಗೆ ಚಿಕಿತ್ಸೆಗಳು ಸಮರ್ಪಕವಾಗಿ ದೊರೆಯುವುದಿಲ್ಲವೆಂದೂ, ಖಾಸಗಿ ವಿಮಾ ಕಂಪನಿಗಳು ಪ್ರಚಾರದಲ್ಲಿ ತೊಡಗಿ ಜನರನ್ನು ಗಾಬರಿಗೊಳಿಸುತ್ತಿವೆ. ಬ್ಲೂಕ್ರಾಸ್-ಬ್ಲೂಶೀಲ್ಡ್ ವಿಮಾ ಕಂಪನಿ ಸರ್ಕಾರಿ ವಿಮಾ ಯೋಜನೆಯ ಬಗ್ಗೆ ದೊಡ್ಡ ಪ್ರಮಾಣದ ಅಪಪ್ರಚಾರದಲ್ಲಿ ತೊಡಗಿದೆ. ಖಾಸಗಿ ವಿಮಾ ಕಂಪನಿಗಳ ಜೊತೆ ಶಾಮೀಲಾಗಿರುವ ಅಮೆರಿಕನ್ ಮೆಡಿಕಲ್ ಅಸೋಸಿಯೇಶನ್ ಈ ಅಪಪ್ರಚಾರಕ್ಕೆ ತನ್ನ ದನಿಯನ್ನು ಸೇರಿಸಿದೆ. ಸರ್ಕಾರಿ ವಿಮಾ ಯೋಜನೆ ರೋಗಿಗಳಿಗೆ ಆಸ್ಪತ್ರೆ ಮತ್ತು ವೈದ್ಯರ ಆಯ್ಕೆಯನ್ನು ಸೀಮಿತಗೊಳಿಸುತ್ತದೆಂದು ಅಪಸ್ವರವೆತ್ತಿದ್ದಾರೆ.

ಸರ್ಕಾರ ಆರೋಗ್ಯ ವಿಮೆ ಉದ್ದಿಮೆಯಲ್ಲಿ ತೊಡಗಿಸಿಕೊಳ್ಳುವುದನ್ನು ರಿಪಬ್ಲಿಕನ್ ಪಕ್ಷ ಹೀಗಳೆಯುತ್ತಿದೆ. ಒಬಾಮಾ ಅಮೆರಿಕಾದಲ್ಲಿ ಸಮಾಜವಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದ್ದಾರೆಂದು ಬೊಬ್ಬೆ ಹೊಡೆಯುತ್ತಿದೆ. ಒಬಾಮಾನ ಡೆಮಾಕ್ರೆಟಿಕ್ ಪಕ್ಷದಲ್ಲೂ ಹಲವಾರು ಸೆನೆಟರುಗಳು ತಮ್ಮ ವಿರೋಧ ವ್ಯಕ್ತಪಡಿಸಿದ್ದಾರೆ. ಈಗಿರುವ ಆರೋಗ್ಯ ವ್ಯವಸ್ಥೆ ಬದಲಾದರೆ

ಸರ್ವನಾಶವೆಂದು ಜನರನ್ನು ಧೃತಿಗೆಡಿಸುತ್ತಿದ್ದಾರೆ. ಒಬಾಮಾಗೆ ಇದೊಂದು ಅಗ್ನಿಪರೀಕ್ಷೆ. ಒಬಾಮಾರ ಪ್ರಕಾರ ಸರ್ಕಾರಿ ಆರೋಗ್ಯ ವಿಮಾ ಯೋಜನೆ ಖಾಸಗಿ ವಿಮಾ ಕಂಪನಿಗಳನ್ನು ಹಿಡಿತದಲ್ಲಿಡಲು ಒಂದು ಪ್ರಮುಖ ಸಾಧನ. ಈ ಯೋಜನೆ ಏರುತ್ತಿರುವ ಆರೋಗ್ಯ ವೆಚ್ಚಕ್ಕೆ ಕಡಿವಾಣ ಹಾಕುತ್ತದೆ ಮತ್ತು ವಿಮಾಕ್ಷೇತ್ರದಲ್ಲಿ ಹೆಚ್ಚು ಪೈಪೋಟಿ ತರುತ್ತದೆ. ಇನ್ನೊಂದೆಡೆ ಸರ್ಕಾರಕ್ಕೆ ಆರೋಗ್ಯ ವಿಮಾ ಉದ್ದಿಮೆಯಲ್ಲಿ ಅನುಭವವಿಲ್ಲವೆಂದು ಹೀಯಾಳಿಸಿದವರು ಈಗ ಸರ್ಕಾರ ನಡೆಸುವ ವಿಮಾ ಯೋಜನೆ ತನ್ನದೇ ಆದ ಅನುಕೂಲ ಹೊಂದಿರುವುದರಿಂದ ಅಸಮಾನ ಆಟದ ಮೈದಾನ ಸೃಷ್ಟಿಯಾಗುತ್ತದೆಂದೂ, ಖಾಸಗಿ ಸಂಸ್ಥೆಗಳು ಸಮಾನ ಅವಕಾಶಗಳಿಂದ ವಂಚಿತರಾಗುತ್ತಾರೆಂದೂ ಗೋಳಿಡುತ್ತಿದ್ದಾರೆ. ಅಂದರೆ, ಈ ಜನರು ಆರೋಗ್ಯ ವ್ಯವಸ್ಥೆಯಲ್ಲಿ ಖರ್ಚನ್ನು ತಗ್ಗಿಸಲೂ ತಯಾರಿಲ್ಲ, ಕಡಿಮೆ ಬೆಲೆಯ ಆರೋಗ್ಯ ವಿಮಾ ಯೋಜನೆಯನ್ನು ತರಲು ಬಿಡುವುದೂ ಇಲ್ಲ.

ಒಬಾಮಾನ ಮುಂದಿರುವ ಆಯ್ಕೆಯೆಂದರೆ ಈ ದುಷ್ಟಕೂಟಕ್ಕೆ ಮಣಿದು ಈಗಿರುವ ಆರೋಗ್ಯ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗಬೇಕು; ಇಲ್ಲದಿದ್ದಲ್ಲಿ ಆರೋಗ್ಯ ವ್ಯವಸ್ಥೆಯನ್ನು ಸುಧಾರಿಸಿ ಜನರಿಗೆ ಕಡಿಮೆ ಖರ್ಚಿನಲ್ಲಿ ಚಿಕಿತ್ಸೆ ದೊರೆಯುವಂತೆ ಮಾಡಬೇಕು. ಎರಡನೇ ಆಯ್ಕೆ ಕಷ್ಟವಾದದ್ದು. ಇದೇ ಸೆಪ್ಟೆಂಬರ್ ೯ರಂದು ನಡೆದ ಅಮೆರಿಕಾದ ಕಾಂಗ್ರೆಸ್‌ನ ಶೃಂಗಸಭೆಯಲ್ಲಿ ಒಬಾಮಾ ನೇರನುಡಿಗಳನ್ನಾಡಿ ಇನ್ನು ಒಳಜಗಳ ಸಾಕು, ಆಡಿದ ಆಟವೂ ಸಾಕು, ಈಗ ಕಾರ್ಯ ಸಾಧನೆಯ ಸಮಯ ಬಂದಿದೆ ಎಂದು ಜನ ಪ್ರತಿನಿಧಿಗಳನ್ನು ಎಚ್ಚರಿಸಿದ್ದಾರೆ. ಹಾಗೆಯೇ ರಾಷ್ಟ್ರೀಯ ಆರೋಗ್ಯ ರಕ್ಷಣಾ ಯೋಜನೆಗೆ ಮುಂದಿನ ಹತ್ತು ವರ್ಷಗಳಿಗೆ ೯೦೦ ಬಿಲಿಯನ್ ಡಾಲರ್ಸ್ ಖರ್ಚಿನ ನೀಲನಕ್ಷೆಯನ್ನು ಮುಂದಿಟ್ಟಿದ್ದಾರೆ. ಇದು ಅಮೆರಿಕಾ ಇರಾಕ್ ಮತ್ತು ಆಫ್ಘಾನಿಸ್ತಾನದ ಯುದ್ಧಗಳಲ್ಲಿ ತೊಡಗಿಸಿರುವ ಹಣಕ್ಕಿಂತ ಕಡಿಮೆಯೆಂದು ನುಡಿದಿದ್ದಾರೆ. ಆರೋಗ್ಯ ರಕ್ಷಣೆಯ ಸುಧಾರಣೆಯ ಬಗ್ಗೆ ಮಾತನಾಡಿದ ಅಧ್ಯಕ್ಷರುಗಳಲ್ಲಿ ನಾನು ಮೊದಲಿಗನಲ್ಲ; ಆದರೆ ನಾನು ಈ ಬಗ್ಗೆ ಮಾತನಾಡಿದ ಕೊನೆಯ ಅಧ್ಯಕ್ಷನಾಗಲು ನಿಶ್ಚಯಿಸಿದ್ದೇನೆಂದು ಸಭೆಗೆ ತಿಳಿಸಿದ್ದಾರೆ. ಒಬಾಮಾನ ಪ್ರಯತ್ನಕ್ಕೆ ಅಮೆರಿಕಾದ ವೈದ್ಯಕೀಯ ವಿದ್ಯಾರ್ಥಿಗಳ ಸಂಘ ಮತ್ತು ಅಮೆರಿಕನ್ ಫಿಜಿಶಿಯನ್ಸ್ ಫಾರ್ ನ್ಯಾಷನಲ್ ಹೆಲ್ತ್ ಪ್ರೋಗ್ರಾಂ ಎಂಬ ವೈದ್ಯರ ಒಕ್ಕೂಟ ತಮ್ಮ ಬೆಂಬಲ ನೀಡಿವೆ. ಈಗಾಗಲೇ ಆರ್ಥಿಕ ಹಿಂಜರಿತದಿಂದ ನರಳುತ್ತಿರುವ ಅಮೆರಿಕಾದ ಜನತೆ ಆಸ್ಪತ್ರೆಗಳಿಗೇ ಹೋಗದಂತಾಗಬಹುದೆಂಬ ಆತಂಕ ಹೆಚ್ಚುತ್ತಿದೆ. ಬಂಡವಾಳಶಾಹಿಯ ಅನಿವಾರ್ಯ ಅವ್ಯವಸ್ಥೆಗೆ ಇದೊಂದು ನಿದರ್ಶನ.

ಒಂದೆಡೆ ಶ್ರೀಮಂತ ರಾಷ್ಟ್ರವೆನಿಸಿಕೊಂಡ ಅಮೆರಿಕಾ ತನ್ನ ಜನತೆಗೆ ದುಬಾರಿಯಲ್ಲದ ಆರೋಗ್ಯ ವ್ಯವಸ್ಥೆಯನ್ನು ಕೊಡುವಲ್ಲಿ ಎಡವಿಬೀಳುತ್ತಿದೆ. ಇನ್ನೊಂದೆಡೆ ಐವತ್ತು ತುಂಬಿದ ಸಮಾಜವಾದಿ ಕ್ಯೂಬಾ ಪ್ರಪಂಚವೇ ಕೊಂಡಾಡಿರುವಂತಹ ಶ್ರೇಷ್ಠ ಆರೋಗ್ಯ ಯೋಜನೆಯನ್ನು ತನ್ನ ಜನರಿಗೆ ಮಾತ್ರವಲ್ಲ, ಇನ್ನಿತರರಿಗೂ ಕಲ್ಪಿಸಿದೆ.

ಇತ್ತೀಚೆಗೆ ತಮ್ಮ ಲೇಖನದಲ್ಲಿ ಕ್ಯೂಬಾದ ನಾಯಕ ಫಿಡೆಲ್ ಕ್ಯಾಸ್ಟ್ರೋ ೨೦೦೮ರ ಹೊತ್ತಿಗೆ ಶಸ್ತ್ರಾಸ್ತ್ರಗಳಿಗೋಸ್ಕರ ಸುಮಾರು ೧.೫ ಟ್ರಿಲಿಯನ್ ಡಾಲರ್‌ಗಳನ್ನು ತೊಡಗಿಸಿರುವ ಅಮೆರಿಕಾ (ಯುದ್ಧಗಳ ಖರ್ಚನ್ನು ಬಿಟ್ಟು) ತನ್ನ ಜನರಿಗೆ ಅತ್ಯಗತ್ಯವಾದ ಆರೋಗ್ಯ ಸುಧಾರಣೆಗಾಗಿ, ಅದರ ವೆಚ್ಚಕ್ಕಾಗಿ ದೊಡ್ಡ ಸಾಹಸವನ್ನು ಮಾಡುತ್ತಿರುವುದು ದುರದೃಷ್ಟಕರವೆಂದು ಬಣ್ಣಿಸಿದ್ದಾರೆ. ಆರೋಗ್ಯ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಒಬಾಮಾ ನಿಶ್ಚಯಿಸಿದ್ದಲ್ಲಿ ತನ್ನ ದೇಶದಲ್ಲಿರುವ ಪುಂಡರನ್ನು ಬಲಿಹಾಕಬೇಕು.

## ಸಂಸ್ಕೃತ – ಮುಸ್ಲಿಂ ವಿಶ್ವವಿದ್ಯಾನಿಲಯಗಳು

ನಮ್ಮ ರಾಜ್ಯ ಸರ್ಕಾರದೊಡನೆ ಕೇಂದ್ರವು ಸ್ಪರ್ಧೆಗಿಳಿದಿದೆ. ಯಾರು ಹೆಚ್ಚು ಸಮಾಜ ಮತ್ತು ಸಂಸ್ಕೃತಿಯ ಕಾಳಜಿಯುಳ್ಳವರು ಎಂಬುದನ್ನು ಜನರ ಮುಂದಿಡುವ ವಿಧಾನ ಇದು! ಆದರೆ ನಿಜವಾದ ಕಾಳಜಿ ಸೊನ್ನೆ; ಇರುವುದೆಲ್ಲಾ ರಾಜಕೀಯ; ತಮ್ಮ ತಮ್ಮ ಸಮರ್ಥಕರ ಗುಂಪಿಗೆ ಸಾಂತ್ವನ ನೀಡುವ ಯತ್ನ. ಮಾನ್ಯ ಯಡಿಯೂರಪ್ಪನವರು ಸಂಸ್ಕೃತ ವಿಶ್ವವಿದ್ಯಾನಿಲಯ ಸ್ಥಾಪಿಸಲು ಈಗಾಗಲೇ ಹೊಸಕೋಟೆಯ ಬಳಿ ಜಮೀನನ್ನು ಗುರುತಿಸಿದ್ದಾರೆ. ಕೇಂದ್ರವು ಮೈಸೂರಿನಲ್ಲಿ ಮುಸ್ಲಿಂ ವಿಶ್ವವಿದ್ಯಾನಿಲಯ ಸ್ಥಾಪಿಸಲು ಇನ್ನಾವ ಭೂಮಿಯನ್ನು ರೈತರಿಂದ ಕಿತ್ತುಕೊಳ್ಳುತ್ತದೋ ಇನ್ನೂ ತಿಳಿಯದು. ಸಂಸ್ಕೃತ ವಿಶ್ವವಿದ್ಯಾನಿಲಯ ಸ್ಥಾಪನೆಯಾಗಲೇಬೇಕೆಂದು ಸಾರ್ವಜನಿಕರ ಒತ್ತಾಯ, ವಿದ್ವಾಂಸರ ಬೆಂಬಲ ಮತ್ತು ಶೈಕ್ಷಣಿಕ ಅಗತ್ಯ ಇವೆಯೆಂಬುದನ್ನು ಬಹಳ ನಾಟಕೀಯವಾಗಿ ತೋರ್ಪಡಿಸಲಾಗುತ್ತಿದೆ. ಅದರ ಭಾಗವಾಗಿ ಒಂದು ದಿನಪತ್ರಿಕೆಯಲ್ಲಿ ಅನೇಕ ಲೇಖನಗಳು ಪ್ರಕಟವಾದುವು. ಸಂಸ್ಕೃತ ಬಲ್ಲವರು ಮತ್ತು ಅದು ಬರದ ಬಲ್ಲಿದರು ಭಾರತೀಯ ಸಂಸ್ಕೃತಿ ಬಲವಾಗಿ ಉಳಿಯಬೇಕಾದರೆ ಸಂಸ್ಕೃತ ವಿಶ್ವವಿದ್ಯಾನಿಲಯ ಅತ್ಯಗತ್ಯವೆಂದು ವಾದಿಸಿದರು. ಅದನ್ನು ವಿರೋಧಿಸಿದವರೆಲ್ಲಾ ಸಂಸ್ಕೃತಿಯ ವಿರೋಧಿಗಳೆಂಬ ಹಣೆಪಟ್ಟಿ ಪಡೆದದ್ದೂ ಆಯಿತು. ಕೆಲವು ವಿದ್ವನ್ಮಣಿಗಳು ಸಂಸ್ಕೃತದಲ್ಲಿರುವ ಗ್ರಂಥಗಳ ದೊಡ್ಡ ಪಟ್ಟಿಯನ್ನು ತಯಾರಿಸಿ, ಅದೇ ವಿಶ್ವವಿದ್ಯಾಲಯದ ಅಗತ್ಯಕ್ಕೆ ಪುರಾವೆಯೆಂದು ಬಾಲಿಶವಾಗಿ ನುಡಿದು ಶ್ಲಾಘನೆ ಪಡೆದರು. ಇದು ನಮ್ಮ ಶೋಚನೀಯ ಸಾಂಸ್ಕೃತಿಕ ವಾತಾವರಣ. ಒಂದು ಒಳ್ಳೆಯ ಗ್ರಂಥ ಭಂಡಾರಕ್ಕೆ ಹೋದರೆ ಸಂಸ್ಕೃತ ಗ್ರಂಥಗಳ ಹೆಸರುಗಳನ್ನು ದಾಖಲಿಸುವುದು ಸುಲಭ; ಅದಕ್ಕೆ ಪಾಂಡಿತ್ಯ ಬೇಕಿಲ್ಲ. ಗ್ರಂಥಗಳಿವೆ ಮತ್ತು ಅವುಗಳ ಅಧ್ಯಯನ ಅಗತ್ಯ, ಸರಿ; ಆದರೆ ಅದು ಒಂದು ವಿಶ್ವವಿದ್ಯಾಲಯದ ಸ್ಥಾಪನೆಗೆ ಸಮರ್ಥ ಕಾರಣವಾಗಬಲ್ಲುದೆ? ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳಲ್ಲೂ ಅನೇಕ ಪ್ರಾಚೀನ ಗ್ರಂಥಗಳಿವೆ, ಅವನ್ನು ಅಧ್ಯಯನ ಮಾಡುವವರಿದ್ದಾರೆ. ಆದರೆ ಲ್ಯಾಟಿನ್ ಮತ್ತು ಗ್ರೀಕ್ ವಿಶ್ವವಿದ್ಯಾನಿಲಯಗಳ ಅಗತ್ಯವನ್ನು ಯೂರೋಪಿನ ಯಾವ ಸರ್ಕಾರವೂ ಎತ್ತಿಹಿಡಿದಿಲ್ಲ. ಸಮಾಜದ ಒಂದು ಬಣಕ್ಕೆ (ಅಂದರೆ, ಒಂದು ಜಾತಿಯವರಿಗೆ ಎಂದರ್ಥವಲ್ಲ) ಕಿರೀಟ ತೊಡಿಸುವ ಹುನ್ನಾರ ಸಂಸ್ಕೃತ ವಿಶ್ವವಿದ್ಯಾಲಯದ ಸ್ಥಾಪನೆಯ ಹಿಂದಿದೆಯೆಂಬ ಶಂಕೆಗೆ ಆಧಾರವಿದೆ. ಸಂಸ್ಕೃತವನ್ನು ಉಚ್ಚಮಟ್ಟದಲ್ಲಿ ಅಧ್ಯಯನ ಮಾಡಲು ಅವಕಾಶಗಳಿವೆ, ಸಂಸ್ಥೆಗಳಿವೆ. ಅಧ್ಯಯನವು ಸಾಂಪ್ರದಾಯಿಕವಾಗಿರಬಹುದು ಅಥವಾ ತೌಲನಿಕ ಮಾರ್ಗದ್ದಿರಬಹುದು, ಆಧುನಿಕವಿರಬಹುದು, ಚಾರಿತ್ರಿಕ ಕ್ರಮಕ್ಕೆ ಬದ್ಧವಾಗಿರಬಹುದು. ಅವುಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಂಡರೂ ಆ ವಿಧಾನದಲ್ಲಿ ಅಧ್ಯಯನ ಮಾಡಲು ಸೌಲಭ್ಯಗಳಿವೆ. ಅವು ಸಾಲದಾದರೆ ತಿರುಪತಿ, ವಾರಾಣಸಿ, ದೆಹಲಿ, ಕಾಲಟಿ ಹೀಗೆ ಬೇರೆಡೆಗಳಿಗೆ ವಿಪುಲವಾದ ವಿದ್ಯಾರ್ಥಿವೇತನ ನೀಡಿ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ನಮ್ಮ ರಾಜ್ಯದ ವಿದ್ಯಾರ್ಥಿಗಳನ್ನು ಸಂಸ್ಕೃತದಲ್ಲಿ ಉನ್ನತ ಶಿಕ್ಷಣ ಪಡೆಯಲು ಕಳಿಸಬಹುದು. ಶೈಕ್ಷಣಿಕ ಅವಶ್ಯಕತೆಗಳಿಗಿಂತಲೂ ರಾಜಕೀಯ ಆಕಾಂಕ್ಷೆಗಳು ಪ್ರಬಲವಾದಾಗ, ಆದ್ಯತೆ ಪಡೆದಾಗ, 'ಹೇಳಿದ್ದೇ ಹೇಳೋ ಕಿಸಬಾಯಿ ದಾಸ' ಎಂಬಂತಹ ಹೊಸ ಸಂಸ್ಥೆಗಳ ಪ್ರಾಣಪ್ರತಿಷ್ಠಾಪನೆಯಾಗುತ್ತದೆ. ಶ್ರೀರಾಮಚಂದ್ರನ ಕೈಂಕರ್ಯ ನಡೆಸುವುದಾಗಿ ಹೇಳಿ ಅನಪೇಕ್ಷಣೀಯ ರಾಜಕೀಯ ನಡೆದದ್ದು, ನಡೆಯುತ್ತಿರುವುದು ತಿಳಿದೇ ಇದೆ. ಬಜರಂಗ ಸೇನೆ, ಶ್ರೀ ರಾಮ ಸೇನೆ, ಇವೆಲ್ಲಾ ಅದರ ಉತ್ಪನ್ನಗಳು. ಅಂತಹುದೇ ರಾಜಕೀಯವು ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯ ಹಿನ್ನೆಲೆಯಲ್ಲಿದೆ. ಅದು ತಪ್ಪು ಗ್ರಹಿಕೆಯೆಂಬ ನಂಬಿಕೆ ಬರುವಂತೆ ಸಂಸ್ಕೃತ ವಿಶ್ವವಿದ್ಯಾನಿಲಯದ ಸಮರ್ಥಕರು ವರ್ತಿಸಿಲ್ಲ. ಕನ್ನಡ ಚಳುವಳಿಯ ಅಧ್ವರ್ಯುಗಳೂ ಇದಕ್ಕೆ ಹೊರತಾಗಿಲ್ಲ. ಇಷ್ಟಾಗಿಯೂ ಅದು ಅಸ್ತಿತ್ವಕ್ಕೆ ಬಂದರೆ ಕನ್ನಡಕ್ಕೆ ಅನಾಹುತವೇನೂ ಇಲ್ಲ, ಆದರೆ ಅಧ್ಯಯನದಲ್ಲಿ ಯಾವುದಕ್ಕೆ ಒತ್ತುಕೊಡಲಾಗುತ್ತದೆ ಎಂಬುದು ಅದರ ಉಪಯುಕ್ತತೆ ಅಥವಾ ಅನುಪಯುಕ್ತತೆಗೆ ಮಾಪನಸಾಧನವಾಗುತ್ತದೆ. ಕೇಶವನ ಕೃಪೆ ಇದ್ದಂತೆ ನಡೆಯಲೆಂದು ಸಮಾಧಾನ ತಂದುಕೊಳ್ಳುವುದು ಆಗದ ಮಾತು.

ಕೇಂದ್ರ ಸರ್ಕಾರದ ರಾಜಕೀಯವು ರಾಜ್ಯ ಸರ್ಕಾರದ ಕೆಟ್ಟ ರಾಜಕೀಯವನ್ನು ಮೀರಿಸುತ್ತದೆ. ಕೇಂದ್ರವು ಮೈಸೂರಿನಲ್ಲಿ ಮುಸ್ಲಿಂ ವಿಶ್ವವಿದ್ಯಾನಿಲಯ ಸ್ಥಾಪಿಸಲು ಮೂರ್ಖತನದಿಂದ ತವಕಿಸುತ್ತಿದೆಯೆಂಬ ವರದಿ ಬಂದಿದೆ. ಮುಸ್ಲಿಂ-ಹಿಂದು-ಕ್ರೈಸ್ತ-ಸಿಖ್-ಜೈನ-ಬೌದ್ಧ ಹೀಗೆ ಜನರ ವಿಂಗಡಣೆಯು ಅಪ್ರಸ್ತುತವಾಗಬೇಕಾದ ಸಂದರ್ಭದಲ್ಲಿ ಕೇಂದ್ರವು 'ಮುಸ್ಲಿಂ' ವಿಶ್ವವಿದ್ಯಾನಿಲಯ ಸ್ಥಾಪಿಸುತ್ತದೆಂದರೆ ಅದು ಅಂಗೀಕಾರಕ್ಕೆ ಸರ್ವಥಾ ಯೋಗ್ಯವಲ್ಲ. ಇರುವ ವಿಶ್ವವಿದ್ಯಾಲಯಗಳಲ್ಲಿ ಮುಸ್ಲಿಂ ವಿದ್ಯಾರ್ಥಿಗಳಿಗೆ ಪ್ರವೇಶದ ನಿರಾಕರಣೆ ಎಲ್ಲೂ, ಯಾವಾಗಲೂ, ಆಗಿಲ್ಲದಿರುವಾಗ ಅವರಿಗಾಗಿ ಪ್ರತ್ಯೇಕ ವಿಶ್ವವಿದ್ಯಾನಿಲಯ ಏಕೆ ಬೇಕಾಗಿದೆ? ಅದರ ಸ್ಥಾಪನೆಗೆ ಯೋಚಿಸುವ ಮೊದಲು ವಾಸ್ತವಿಕ ಅಂಕಿ-ಸಂಖ್ಯೆಗಳನ್ನು ಕಲೆಹಾಕಬೇಕು. ಪದವಿ ಮಟ್ಟದಲ್ಲಿ ವ್ಯಾಸಂಗ ಮಾಡಲು ಅರ್ಹತೆಯಿರುವ ಮುಸಲ್ಮಾನ ವಿದ್ಯಾರ್ಥಿಗಳು ಯಾರಾದರೂ, ಅವರಿಗಾಗಿ ಪ್ರತ್ಯೇಕ ವಿಶ್ವವಿದ್ಯಾನಿಲಯ ಇಲ್ಲವೆಂಬ ಒಂದೇ ಕಾರಣದಿಂದ, ಪದವಿ ಶಿಕ್ಷಣ ಪಡೆಯಲು ಸೋತಿದ್ದಾರೆಯೇ? ಹಾಗಿದ್ದರೆ, ಅವರು ಎಷ್ಟು ಮಂದಿ ಇದ್ದಾರೆ? ಈಗಾಗಲೇ ಅಸ್ತಿತ್ವದಲ್ಲಿರುವ ವಿಶ್ವವಿದ್ಯಾನಿಲಯಗಳಲ್ಲಿ ಅವರಿಗೆ ಪ್ರವೇಶ ಏಕೆ ದೊರೆಯಲಿಲ್ಲ ಮತ್ತು ದೊರೆಯುವಂತೆ ಮಾಡಲು ಸಾಧ್ಯವಿಲ್ಲವೆ? ಹೊಸ ವಿಶ್ವವಿದ್ಯಾನಿಲಯ ಸ್ಥಾಪಿಸುವುದು ಬೇರೆ, ಹೊಸ ''ಮುಸ್ಲಿಂ'' ವಿಶ್ವವಿದ್ಯಾನಿಲಯ ಸ್ಥಾಪಿಸುವುದು ಬೇರೆ. ಪದವಿ ಮಟ್ಟದ ಶಿಕ್ಷಣಕ್ಕೆ ಪ್ರವೇಶ ದೊರಕಲು ಬೇಕಾದ ಅರ್ಹತೆ ಪಡೆಯುವ ಮೊದಲೇ ವ್ಯಾಸಂಗದಿಂದ ನಿರ್ಗಮಿಸುವ ಮುಸಲ್ಮಾನ ವಿದ್ಯಾರ್ಥಿಗಳಿಗೆ ಇಂತಹ ''ಮುಸ್ಲಿಂ'' ವಿಶ್ವವಿದ್ಯಾನಿಲಯಗಳಿಂದ ಏನು ಪ್ರಯೋಜನ? ಸಾಚಾರ್ ಸಮಿತಿಯ ವರದಿಯು ಹೇಳಿದಂತೆ ಪ್ರಾಥಮಿಕ ಹಂತದ ಶಿಕ್ಷಣವನ್ನು ಆಯೋಜಿಸುವ ಬದಲು ಮೇಲ್ಪದರದವರಿಗೆ ಮಾತ್ರ ಸೀಮಿತವಾಗುವಂತಹ ಮುಸ್ಲಿಂ ವಿಶ್ವವಿದ್ಯಾನಿಲಯ ಸ್ಥಾಪಿಸಹೊರಡುವುದು ಒಂದು ಕುಹಕ ಮತ್ತು ಮೋಸ. ಈ ಹೊಸ ಮುಸ್ಲಿಂ ವಿಶ್ವವಿದ್ಯಾನಿಲಯ ಅಸ್ತಿತ್ವಕ್ಕೆ ಬಂದರೆ, ರಾಜ್ಯದ ಕಾಲೇಜುಗಳ ಮುಸ್ಲಿಂ ವಿದ್ಯಾರ್ಥಿಗಳನ್ನೆಲ್ಲಾ ಅಲ್ಲಿ ದಾಖಲು ಮಾಡಿಕೊಂಡು ಪ್ರತ್ಯೇಕತೆಯ ಬೆಂಕಿಯನ್ನು ಇನ್ನೂ ಹೆಚ್ಚಿಸಬೇಕೆಂಬ ಉದ್ದೇಶವಿದೆಯೆ? ಇಲ್ಲದಿದ್ದರೆ, ಹೊಸ ವಿಶ್ವವಿದ್ಯಾನಿಲಯದಲ್ಲಿ ಶೇ. ೫೦ರಷ್ಟು ಮುಸ್ಲಿಂ ವಿದ್ಯಾರ್ಥಿಗಳನ್ನು ಎಲ್ಲಿಂದ ಆಮದು ಮಾಡಿಕೊಳ್ಳಬೇಕು? ದೇಶದ ಇಡೀ ವಿದ್ಯಾರ್ಥಿ ಸಮುದಾಯಕ್ಕೆ ಉನ್ನತ ಶಿಕ್ಷಣದ ಅವಕಾಶ ಮತ್ತು ಸೌಲಭ್ಯ ಉತ್ತಮಗೊಳ್ಳಬೇಕು; ಆದರೆ ಮುಸ್ಲಿಂ ವಿಶ್ವವಿದ್ಯಾನಿಲಯ ಸ್ಥಾಪನೆಗೊಳ್ಳುವುದು ಅದಕ್ಕೆ ಸಾಧನವಲ್ಲ. ''ಮುಸ್ಲಿಂ'' ಅಥವಾ ''ಹಿಂದು'' ಮುಂತಾದ ಮತಧರ್ಮಗಳ ಶಿರೋನಾಮವು ಯಾವುದೇ ವಿಶ್ವವಿದ್ಯಾನಿಲಯಕ್ಕೂ ೨೧ನೆಯ ಶತಮಾನದಲ್ಲಿ ಯೋಗ್ಯವಲ್ಲ. ದಕ್ಷಿಣ ಆಫ್ರಿಕಾದಲ್ಲಿದ್ದ ವರ್ಣ ವಿಂಗಡನೆಯನ್ನು ನಾವು ಶಿಕ್ಷಣ ಕ್ಷೇತ್ರದಲ್ಲಿ ಮರುಕಳಿಸುವಂತೆ ಮಾಡುವುದು ಅನಾಗರಿಕ ಕ್ರಮವಾಗುತ್ತದೆ, ಪ್ರತ್ಯೇಕತೆಗೆ ಸೊಪ್ಪುಹಾಕಿದಂತಾಗುತ್ತದೆ. ಅದನ್ನು ಧರ್ಮನಿರಪೇಕ್ಷ ಸಮಾಜದ ಒಂದು ಅಸಹ್ಯ ಕೊಳಕು ಎಂದೇ ಭಾವಿಸಬೇಕು.

ಹಾಗಿದ್ದರೆ ಮುಸ್ಲಿಂ ವಿಶ್ವವಿದ್ಯಾನಿಲಯ ಎಂಬ ಕಲ್ಪನೆ ಬಂದಿರುವುದಾದರೂ ಏಕೆ? ಶಿಕ್ಷಣದ ವಿಸ್ತರಣೆಯ ಉದ್ದೇಶದಿಂದಲೋ ಅಥವಾ ಒಂದು ಬಣವನ್ನು ಸಂತೈಸಬಹುದೆಂಬ ದುರುದ್ದೇಶದಿಂದಲೋ? ಅಲ್ಪಸಂಖ್ಯಾತ ಮುಸಲ್ಮಾನರ ಏಳಿಗೆಯನ್ನು ಸಹಿಸದಿರುವವರ ಪ್ರಶ್ನೆಗಳಿವು ಎಂಬ ಸಬೂಬು ಹೇಳಿ ತಪ್ಪಿಸಿಕೊಳ್ಳುವಂತಿಲ್ಲ. ಏಕೆಂದರೆ, ನಾವು ದೇಶದ ಎಲ್ಲ ಸಮುದಾಯಗಳ ಏಳಿಗೆಗೆ ಬದ್ಧರಾಗಿರುವವರು. ನಮ್ಮ ಸಮಾಜದಲ್ಲಿ ಅಲ್ಪಸಂಖ್ಯಾತರ ಮೇಲೆ ದ್ವೇಷದ ಕಿಡಿ ಕಾರುವವರು ಈಗಾಗಲೇ ಸಾಕಷ್ಟಿದ್ದಾರೆ; ಅವರನ್ನು ಹೆಚ್ಚಿಸುವುದು ಬೇಡ ಮತ್ತು ಅವರನ್ನು ಎದುರಿಸಬೇಕಾದವರಿಗೆ ಹಾಗೂ ಎದುರಿಸುತ್ತಿರುವವರಿಗೆ ಕಳಂಕ ತರುವುದೂ ಬೇಡ. ದಲಿತ ವಿಶ್ವವಿದ್ಯಾನಿಲಯ, ಲಿಂಗಾಯತ ವಿಶ್ವವಿದ್ಯಾನಿಲಯ, ಬ್ರಾಹ್ಮಣ ವಿಶ್ವವಿದ್ಯಾನಿಲಯ, ಎಂಬಿತ್ಯಾದಿ ಹೆಸರುಗಳಿಲ್ಲದ ವಿಶ್ವವಿದ್ಯಾನಿಲಯಗಳಲ್ಲಿ ಅವರಿಗೆಲ್ಲಾ ಪ್ರವೇಶವಿರುವಂತೆ ಮುಸಲ್ಮಾನರಿಗೂ ಇದೆ. ಆದರೂ ಹೆಚ್ಚು ಮಂದಿ ಹೊರಗೇ ಉಳಿದಿದ್ದಾರೆನ್ನುವುದು ನಿಜವಾದರೆ, ಅವರನ್ನೆಲ್ಲಾ ಯಾವುದೇ ವಿಶ್ವವಿದ್ಯಾನಿಲಯದಲ್ಲಾದರೂ ಸೇರಿಸಿಕೊಳ್ಳಬೇಕು. ''ಮುಸ್ಲಿಂ'' ವಿಶ್ವವಿದ್ಯಾನಿಲಯ ಎಂದು ಕರೆಸಿಕೊಳ್ಳದೆ ಹೊಸ ವಿಶ್ವವಿದ್ಯಾಲಯಗಳು ಕಳೆದ ಐವತ್ತು ವರ್ಷಗಳಲ್ಲಿ ಎಷ್ಟು ಬಂದಿಲ್ಲ! ಹಾಗಿರುವಾಗ ಈಗೇಕೆ ಆ ನಾಮಧೇಯ ಬೇಕು? ಮಂದಿರ-ಮಸೀದಿ ರಾಜಕೀಯದ ಹೊಲಸನ್ನು ಉನ್ನತ ಶಿಕ್ಷಣ ಕ್ಷೇತ್ರದಲ್ಲಿಯೂ ಹರಡಬೇಕೆಂಬ ಲಾಲಸೆಯು ಕೇಂದ್ರ ಸರ್ಕಾರಕ್ಕೆ ಮರ್ಯಾದೆ ತರುವಂಥದಲ್ಲ. ಮನಮೋಹನ ಸಿಂಗ್ ಮತ್ತು ಕಪಿಲ್ ಸಿಬಲ್ ಇದನ್ನು ಅರಿತುಕೊಳ್ಳಬೇಕು.




ತಿಂಗಳ ಪತ್ರಿಕೆ

ಹೊಸತು

ನವಕರ್ನಾಟಕ ಪ್ರಕಾಶನ

**ವಿಶೇಷ ಸಂಚಿಕೆ – ೨೦೧೦**

ಜನವರಿ ೨೦೧೦ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿ ಪ್ರಕಟವಾಗುತ್ತದೆ.

ಸಮಕಾಲೀನ ವಿದ್ಯಮಾನಗಳ ಮೇಲೆ ಬೆಳಕು ಬೀರುವ ವಿಚಾರಪೂರ್ಣ ಲೇಖನಗಳು

ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆ ಗುರುತು ಮೂಡಿಸಿರುವ ಮಹನೀಯರೊಂದಿಗೆ ಸಂದರ್ಶನಗಳು

ಜೊತೆಗೆ ಖ್ಯಾತ ಹಿರಿಯ ಹಾಗೂ ಕಿರಿಯ ಲೇಖಕರ ಕಥೆಗಳು, ಕವಿತೆಗಳು, ಪ್ರಬಂಧಗಳು, ಸಚಿತ್ರ ಪ್ರವಾಸ ಲೇಖನಗಳು

ಅಲ್ಲದೆ,

ಓದುಗರ ವೇದಿಕೆ (ವಿಷಯ : ದೇಶದ ಸಂಪನ್ಮೂಲಗಳ ಲೂಟಿ – ಸಾರ್ವಜನಿಕ ಮತ್ತು ಖಾಸಗಿ ಭಾಗವಹಿಸುವಿಕೆಯ ಮುಸುಕು)

ಇವೆಲ್ಲಾ ಸೇರ್ಪಡೆಗೊಳ್ಳುತ್ತವೆ.

ಇನ್ನೂ ಹಲವಾರು ವೈಶಿಷ್ಟ್ಯಗಳೊಂದಿಗೆ ಪ್ರಕಟವಾಗಲಿದೆ.

'ಹೊಸತು' ಚಂದಾದಾರರಿಗೆ ವಾರ್ಷಿಕ ವಿಶೇಷ ಸಂಚಿಕೆ ಉಚಿತ!

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ

ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೪, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೨೦೩೫೮೦, ೩೦೫೭೮೦೨೨

ಫ್ಯಾಕ್ಸ್ : ೩೦೫೭೮೦೨೩

e-mail : navakarnataka@dataone.in

hosathu@gmail.com

ಜವಾಬ್ದಾರಿಯುತವಾದ ಸ್ವಾಗತಾರ್ಹ ಮುಂದಾಳತ್ವ. ಅವರು ಅಭಿನಂದನೆಗಳ ಸುರಿಮಳೆಗೆ ಕಾತುರರಾಗಿಲ್ಲವೆಂದು ತೋರುತ್ತದೆ, ಆದರೆ ನಿಜಕ್ಕೂ ಅವರ ಸಕಾಲಿಕ ಕ್ರಮವು ಅಭಿನಂದನಾರ್ಹವಾದ್ದು. ಸಂವಿಧಾನದಲ್ಲಿ ನ್ಯಾಯಾಂಗದ ಬಗೆಗಿನ ನಿರೀಕ್ಷೆಗಳೇನಿವೆಯೋ ಅವು ನಿಚ್ಚಳವಾಗಿ ಫಲಕಾರಿಯಾಗಲು, ನ್ಯಾಯಾಂಗದ ಪ್ರತಿಷ್ಠೆ ಅಂಗೀಕೃತವಾಗಲು, ಶ್ರೀ ಡಿ. ವಿ. ಶೈಲೇಂದ್ರಕುಮಾರ್ ಅನುಸರಿಸಿದ ಕ್ರಮವು ಅನುಕರಣೀಯವಾಗಿದೆ. ಈ ದಿಕ್ಕಿನಲ್ಲಿ ತಮ್ಮ ಚಿಂತನೆ ಮತ್ತು ಕ್ರಿಯೆಗಳನ್ನು ಯಾವ ಆಡಂಬರ ಮತ್ತು ಅಳುಕೂ ಇಲ್ಲದೆ ಸಾರ್ವಜನಿಕರ ಮುಂದಿಟ್ಟು ಒಂದು ಒಳ್ಳೆಯ ಸಂಪ್ರದಾಯಕ್ಕೆ ಅವರು ಅಡಿಪಾಯ ಹಾಕಿದ್ದಾರೆ.

* * *

ಭಾರತೀಯ ಜನತಾ ಪಕ್ಷವು ನಮ್ಮ ರಾಜ್ಯದ ಸರ್ಕಾರ ಹಾಗೂ ಖಜಾನೆಯನ್ನು ತನ್ನ ಖಾಸಗಿ ಆಸ್ತಿಯನ್ನಾಗಿ ಪರಿವರ್ತಿಸಿಕೊಳ್ಳುತ್ತಿದೆ. ಮಠಗಳಿಗೆ ಮತ್ತು ಸ್ವಾಮಿಗಳಿಗೆ ಬೊಕ್ಕಸದ ಹಣವನ್ನು ಹಂಚಿ ತನ್ನ ಚುನಾವಣಾ ಗೆಲುವಿಗೆ ರಸ್ತೆ ನಿರ್ಮಿಸಿಕೊಳ್ಳುವ ಅಪರಾಧವು ಸಾಲದೆಂಬಂತೆ ಈಗ ತನ್ನ ಕೆಲವು ಅಂಗಸಂಸ್ಥೆಗಳಿಗೆ ಸರ್ಕಾರದ ಹಣವನ್ನು ಹರಿಸಲು ಶ್ರೀ ಯಡಿಯೂರಪ್ಪನವರ ಸರ್ಕಾರವು ಆಜ್ಞೆ ಹೊರಡಿಸಿದೆ. ಸಾಂಸ್ಕೃತಿಕ ಔನ್ನತ್ಯ ಮತ್ತು ನೈತಿಕತೆಯ ಬಗ್ಗೆ ದಿನಬೆಳಗಾದರೆ ಉಪನ್ಯಾಸ ನೀಡುವ ಪಕ್ಷ, ಅದನ್ನು ಪೋಷಿಸುವ ಸಂಘಪರಿವಾರ, ಅದರ ಬೆಂಬಲಕ್ಕೆ ನಿಲ್ಲುವ ''ಶ್ರೇಷ್ಠ ಚಿಂತಕರು, ಸಾಹಿತಿಗಳು ಮತ್ತು ತತ್ತ್ವಜ್ಞಾನಿಗಳು'' ಎಲ್ಲರೂ ಒಟ್ಟಾಗಿ ಇಂತಹ ದಾನಶೂರತ್ವದಲ್ಲಿ ಭಾಗಿಗಳಾಗಿ ಇರುವುದು ಶೋಚನೀಯ. ಸಾರ್ವಜನಿಕರ ಹಣವನ್ನು ಹೀಗೆ ಹಂಚಿಕೊಳ್ಳುವುದು ಅವಮರ್ಯಾದೆಯೆಂದು ಭಾವಿಸದವರು ಈಚಿನ ದಿನಗಳಲ್ಲಿ ಗಾಂಧೀಜಿ ಬಗ್ಗೆ ಉದಾತ್ತವಾದ ಮಾತುಗಳನ್ನು ಬೇರೆ ಆಡಲು ಉಪಕ್ರಮಿಸಿದ್ದಾರೆ. ಇತ್ತೀಚಿನ ಒಂದು ಅವ್ಯವಹಾರವು ಇದಕ್ಕೆ ನಿದರ್ಶನವಾಗಿದೆ. ನಮ್ಮ ರಾಜ್ಯದ ಎಲ್ಲ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಿಗೆ ರಾಷ್ಟ್ರೋತ್ಥಾನ ಪ್ರಕಾಶನದ ಎಲ್ಲ ಪುಸ್ತಕಗಳನ್ನೂ ತುಂಬುವಂತೆ ಸರ್ಕಾರವು ಹೊರಡಿಸಿರುವ ಸುತ್ತೋಲೆಯ ಸ್ವರೂಪದ ಆಜ್ಞೆ ಸರ್ವಥಾ ಅನೀತಿಯುತ. ಮಕ್ಕಳ ಬೌದ್ಧಿಕ ಉತ್ಥಾನಕ್ಕಿಂತಲೂ ರಾಷ್ಟ್ರೋತ್ಥಾನ ಪ್ರಕಾಶನದ ಉತ್ಥಾನವು ಸರ್ಕಾರಕ್ಕೆ ಆದ್ಯತೆಯ ವಿಷಯವಾಗಿರುವುದು ಶೋಚನೀಯ, ಖಂಡನೀಯ. ಶಾಲೆಗಳಿಗೆ ಪುಸ್ತಕಗಳನ್ನು ಖರೀದಿಸಲು ಆಯಾ ಕ್ಷೇತ್ರಗಳ ಶಾಸಕರು ತಮ್ಮ ಪಾಲಿನ ಕ್ಷೇತ್ರ ಸಂವರ್ಧನೆಗಾಗಿ ಮೀಸಲಿರುವ ಹಣದಿಂದ ಅನುಕೂಲ ಕಲ್ಪಿಸಬೇಕೆಂದು ಆಜ್ಞೆ ತಿಳಿಸುತ್ತದೆ. ಅಂದರೆ, ಕ್ಷೇತ್ರ ಸಂವರ್ಧನೆಯ ನೆಪದಲ್ಲಿ ರಾಷ್ಟ್ರೋತ್ಥಾನ ಪ್ರೆಸ್ ಮತ್ತು ಪ್ರಕಾಶನಕ್ಕೆ ದೇಣಿಗೆ ನೀಡಬೇಕೆಂದು ಅರ್ಥ. ಶಾಸಕರು ತಮ್ಮ ಮೂಲಕ ಸಂದಾಯವಾಗಬೇಕಾದ ಹಣವನ್ನು ಒಂದೇ ಪ್ರಕಾಶನ ಸಂಸ್ಥೆಯ ಪುಸ್ತಕಗಳನ್ನು ಕೊಳ್ಳಲು ಬಿಡುಗಡೆ ಮಾಡದಿರಬೇಕಾದ್ದು ಅವರ ಕರ್ತವ್ಯ ಮತ್ತು ನೈತಿಕ-ಸಾಂಸ್ಕೃತಿಕ ಜವಾಬ್ದಾರಿ. ಧರ್ಮ ನಿರಪೇಕ್ಷತೆಗೆ ಬದ್ಧರಾದವರು ಯಾರೂ ಸರ್ಕಾರದ ಆಜ್ಞೆಯನ್ನು ಪುರಸ್ಕರಿಸಬಾರದು.

ಮಕ್ಕಳಿಗೆ ಏಕಮುಖ ಚಿಂತನೆಯನ್ನು ಬೋಧಿಸುವುದು ಒಂದು ಶೈಕ್ಷಣಿಕ ಅಪರಾಧ. ವಿಶ್ವದ ಆಗುಹೋಗುಗಳನ್ನು, ಇತಿಹಾಸ-ಪುರಾಣಗಳನ್ನು, ಐತಿಹಾಸಿಕ ವ್ಯಕ್ತಿಗಳನ್ನು, ಮಕ್ಕಳಿಗೆ ಪರಿಚಯಿಸುವಾಗ ವ್ಯಾಪಕತೆ ಮತ್ತು ಸರ್ವತೋಮುಖತೆ ಅತ್ಯಂತ ಪ್ರಮುಖವಾಗಿ ಗಣನೆಗೆ ಬರಬೇಕು. ಯಾರನ್ನೋ ಅಥವಾ ಯಾವುದನ್ನೋ ವೈಭವೀಕರಿಸಿ ಬೇರೆಯವನ್ನು ಅವಗಣನೆಗೆ ಗುರಿಮಾಡುವುದು ಇಲ್ಲವೆ ತುಚ್ಛೀಕರಿಸುವುದು ಮಕ್ಕಳ ಬೌದ್ಧಿಕ ಆರೋಗ್ಯಕ್ಕೆ ಮಾರಕವಾದುದು. ರಾಷ್ಟ್ರೋತ್ಥಾನ ಪ್ರಕಾಶನವು ಹೊರತಂದಿರುವ ಕೆಲವು ಪುಸ್ತಕಗಳು ಮೌಲಿಕವಾಗಿದ್ದರೂ ಅಲ್ಲಿಯ ಅನೇಕ ಪ್ರಕಟಣೆಗಳಲ್ಲಿ ವಸ್ತುನಿಷ್ಠತೆಯ ಕೊರತೆಯಿದೆ, ಚಾರಿತ್ರಿಕ ಪ್ರಜ್ಞೆಯ ಅಭಾವವಿದೆ ಮತ್ತು ಅವೈಜ್ಞಾನಿಕತೆಯ ಹೊರೆ ಇದೆ. ಅವರು ಹೊರತಂದಿರುವ ಎಷ್ಟೋ ಜೀವನಚರಿತ್ರೆಗಳು ಚರಿತ್ರೆಯಾಗುವ ಬದಲು ಐತಿಹ್ಯವಾಗಿವೆ. ಅದು ಶಿಕ್ಷಣದಲ್ಲಿ ಅನಾರೋಗ್ಯಕರ. ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ಜೀವನಚರಿತ್ರೆಗಳ ಪುಸ್ತಕಗಳು ಸರ್ಕಾರದ ಗಮನಕ್ಕೆ ಬರಲಿಲ್ಲವೇಕೆ ? ಹದಿನೇಳು ಕೋಟಿ ರೂಪಾಯಿಗಳ ಅವ್ಯವಹಾರಕ್ಕೆ ತಡೆಯೊಡ್ಡಿ, ವಿಭಿನ್ನ ಪ್ರಕಾಶಕರು ಹೊರತಂದಿರುವ ಪುಸ್ತಕಗಳನ್ನು ಆಯ್ದುಕೊಳ್ಳಬೇಕಾದ ಕನಿಷ್ಠ ಮಟ್ಟದ ಪರಿಜ್ಞಾನ ಸರ್ಕಾರಕ್ಕಿರುವಂತೆ ಮಾಡಬೇಕಾದ್ದು ಶಾಸಕರ ಹಾಗೂ ಜನತೆಯ ಮುಂದಿರುವ ಮುಖ್ಯ ಸವಾಲು. ಮಕ್ಕಳ ವ್ಯಕ್ತಿತ್ವಕ್ಕೆ ಬಲೆ ಬೀಸುವುದು ಬೇಡ.

ಈ ಸಂದರ್ಭದಲ್ಲಿ೧೯೭೭ರ ಒಂದು ಪ್ರಸಂಗವು ನೆನಪಿಗೆ ಬರುತ್ತದೆ. ಮೇ ೪, ೧೯೭೭ರ ''ಉಜ್ವಲ ರಾಷ್ಟ್ರೀಯ ಕನ್ನಡ ವಾರಪತ್ರಿಕೆ'' ಎಂದು ಕರೆದುಕೊಳ್ಳುವ ''ವಿಕ್ರಮ'' ಒಂದು ''ಅದ್ಭುತ ಅಕ್ರಮ''ದ ಪ್ರಸ್ತಾಪ ಮಾಡಿತ್ತು. ಅದು ಸರ್ವಥಾ ಸುಳ್ಳುಗಳ ಕಂತೆಯಾಗಿತ್ತು: ''ಕಮ್ಯುನಿಸ್ಟ್ ಸಾಹಿತ್ಯದ ಪ್ರಚಾರಕ್ಕೆ ರಾಜ್ಯದ ಬೊಕ್ಕಸದಿಂದ ಭಾರಿ ಪ್ರಮಾಣದಲ್ಲಿ ಹಣ ವೆಚ್ಚ ಮಾಡುವ ಫಿತೂರಿಯೊಂದು ('ಫಿ' ಎಂದೇ ಅಚ್ಚಾಗಿತ್ತು. ಇದು ನಮ್ಮ ಮುದ್ರಣದೋಷವಲ್ಲ – ಸಂ.) ನಡೆದಿದೆ ಎಂದು ತಿಳಿದುಬಂದಿದೆ. ಇತ್ತೀಚೆಗೆ ರಾಜ್ಯ ಕಮ್ಯುನಿಸ್ಟ್ ಪಕ್ಷದ ನಿರ್ಣಯವನ್ನು ಸರ್ಕಾರಿ ವೆಚ್ಚದಲ್ಲಿ ಶಾಲೆಗಳಿಗೆ ಪ್ರಚುರಪಡಿಸಿದ ಕುಖ್ಯಾತ ಶಿಕ್ಷಣ ಇಲಾಖೆಯಲ್ಲಿಯೇ ಈ ಫಿತೂರಿ ನಡೆದಿದ್ದು ರಶ್ಯದಲ್ಲಿ ಮುದ್ರಿತ ಪ್ರಚಾರ ಸಾಹಿತ್ಯವಿಷವನ್ನು ನೇರವಾಗಿ ಶಾಲಾ ಮಕ್ಕಳಿಗೂ, ರಾಜ್ಯದ ಜನತೆಗೂ ಉಣಿಸಲು 'ಸಗಟು ಖರೀದಿ' ವ್ಯವಹಾರಕ್ಕೆ ಇಲಾಖೆ ಒಪ್ಪಿದೆ ಎನ್ನಲಾಗಿದೆ. ಇಲ್ಲಿಗೆ ಬಂದಿರುವ ವರದಿಗಳಂತೆ ಕಮ್ಯುನಿಸ್ಟ್ ಪ್ರಚಾರವನ್ನು ನಾನಾದೇಶಗಳಲ್ಲಿ ನಡೆಸಲು ರಷ್ಯದ ಸರ್ಕಾರ ಇಂಗ್ಲಿಷ್‌ನಲ್ಲಿ ಪ್ರಕಟಿಸಿರುವ ಸಾಹಿತ್ಯವನ್ನು 'ಕಮ್ಯುನಿಸ್ಟ್ ಸಾಹಿತಿಗಳು' ಕನ್ನಡಿಸಿ, 'ವಿಶ್ವ ಸಾಹಿತ್ಯ ಕೋಶ' ಎಂಬ ಆಕರ್ಷಕ ನಾಮಕರಣದ ಹೊದಿಕೆಯಲ್ಲಿ ಸಾರ್ವಜನಿಕ ಜೀವನದಲ್ಲಿ ತೂರಿಸುವ 'ಆಳವಾದ ಯೋಜನೆ'ಯೊಂದು ಸಿದ್ಧವಾಗಿದೆ''. – ಈ ''ಚರಿತ್ರಾರ್ಹ'' ವರದಿಯು ''ವಿಕ್ರಮ''ದ ಮುಖಪುಟದಲ್ಲಿತ್ತು. ಅದು ಇಡೀ ಪುಟವನ್ನು ತುಂಬಿತ್ತು, 'ಸ್ವಯಮೇವ ಮೃಗೇಂದ್ರತಾ' ಎಂಬ ತನ್ನ ಧ್ಯೇಯವಾಕ್ಯವನ್ನು ಪತ್ರಿಕೆಯು ತಪ್ಪಾಗಿ ಅರ್ಥೈಸಿಕೊಂಡು ಮೃಗತ್ವದ ಲಕ್ಷಣಗಳನ್ನು ಪ್ರಕಟಿಸಿತು. (ಅದೇ ಸಂಸ್ಥೆಯ ರಾಷ್ಟ್ರೋತ್ಥಾನ ಸೋದರ ಇಂದು ಸಾರ್ವಜನಿಕರ ಕೋಟಿಗಟ್ಟಲೆ ಹಣವನ್ನು ಗಿಟ್ಟಿಸಿಕೊಳ್ಳಲು ಹವಣಿಸಿದೆ.)

ನವಕರ್ನಾಟಕದ ಮೇಲಿನ ಸುಳ್ಳು ಆಪಾದನೆಯನ್ನು ರಾಜ್ಯದ ವಿಧಾನ ಪರಿಷತ್ತಿನಲ್ಲಿ ಒಬ್ಬ ಭಾರತೀಯ ಜನಸಂಘದ ಸದಸ್ಯರು (ಬಹುಶಃ ಮಲ್ಲೂರು ಆನಂದರಾವ್ ಇರಬಹುದು) ಪ್ರಸ್ತಾಪಿಸಿದ್ದು, ಅಂದಿನ ಶಿಕ್ಷಣ ಸಚಿವ ಶ್ರೀ ಬಿ. ಸುಬ್ಬಯ್ಯ ಶೆಟ್ಟಿಯವರು ನೀಡಿದ್ದ ಸವಿವರವಾದ ಉತ್ತರಕ್ಕೆ ತಲೆತಗ್ಗಿಸಿದ್ದರೆಂದು ನೆನಪು. ''ವಿಶ್ವಕಥಾ ಕೋಶ'' (ವಿಶ್ವ ಸಾಹಿತ್ಯ ಕೋಶ ಅಲ್ಲ)ವನ್ನು ಹೊರತಂದಿದ್ದು ಪ್ರಸ್ತುತ ಪತ್ರಿಕೆಯ ಪ್ರಕಾಶಕರಾದ ನವಕರ್ನಾಟಕ ಪ್ರಕಾಶನ ಸಂಸ್ಥೆಯವರು. ಅದು ೨೫ ಸಂಪುಟಗಳಲ್ಲಿತ್ತು. ಇಂಗ್ಲೆಂಡ್, ಅಮೇರಿಕಾ, ಆಸ್ಟ್ರೇಲಿಯಾ, ಐರ್ಲೆಂಡ್, ದಕ್ಷಿಣ ಆಫ್ರಿಕಾ, ನಾರ್ವೆ, ಫ್ರಾನ್ಸ್, ಹೀಗೆ ಅನೇಕ ರಾಷ್ಟ್ರಗಳ ಭಾಷೆಗಳಿಂದ ಬಂದಿದ್ದ ಕತೆಗಳು ಇಲ್ಲಿ ಅಡಕಗೊಂಡಿದ್ದುವು – ವಿಯೆಟ್ನಾಂ, ಸೋವಿಯೆತ್ ಒಕ್ಕೂಟ, ಪೋಲೆಂಡ್, ಮುಂತಾದ ದೇಶಗಳ ಕತೆಗಳೂ ಇದ್ದುವು, ಚಿಲಿ ಮುಂತಾದ ದಕ್ಷಿಣ ಅಮೆರಿಕಾ ದೇಶಗಳ ಕತೆಗಳೂ ಇಲ್ಲಿ ಸೇರ್ಪಡೆಗೊಂಡಿದ್ದುವು. ''ವಿಕ್ರಮ''ದ ದೃಷ್ಟಿಯಲ್ಲಿ ಅದೆಲ್ಲಾ ''ಕಮ್ಯುನಿಸ್ಟ್ ಸಾಹಿತ್ಯ''; ಆದರೆ ಓದುಗರು ಅವನ್ನು ಒಳ್ಳೆಯ ಸಾಹಿತ್ಯವೆಂದು ಮೆಚ್ಚಿಕೊಂಡಿದ್ದು ಈಗ ಇತಿಹಾಸ. ಸರ್ಕಾರವು ಆ ಮಾಲೆಯ ಪುಸ್ತಕಗಳನ್ನು ಶಾಲೆಗಳ ಪುಸ್ತಕ ಭಂಡಾರಗಳಿಗೆ ತುಂಬಲಿಲ್ಲ, ಕೆಲವು ಪ್ರತಿಗಳನ್ನು ಸಾರ್ವಜನಿಕ ಗ್ರಂಥಾಲಯಗಳಿಗಾಗಿ ಖರೀದಿಸಿತ್ತು, ಅಷ್ಟೆ. ಅದರಲ್ಲಿ ಏನಾದರೂ ಅವ್ಯವಹಾರವಿತ್ತೇ ಎಂಬುದನ್ನು ಇಂದು ಸಹ ಯಡಿಯೂರಪ್ಪನವರ ಸರ್ಕಾರವು ತನಿಖೆ ಮಾಡಲು ಯಾರದ್ದೂ ಆಕ್ಷೇಪವಿರಲಾರದು. ''ಶಿಕ್ಷಣ ಇಲಾಖೆಯಲ್ಲಿ ಕಮ್ಯುನಿಸ್ಟ್ ಭೂತದ ಬಾಧೆ''ಯನ್ನು ''ವಿಕ್ರಮ'' ಪತ್ರಿಕೆಯು ಅಂದು ಕಲ್ಪಿಸಿಕೊಂಡಿತ್ತು. ಇಂದು ಅದೇ ಪತ್ರಿಕೆಯ ಪ್ರಕಾಶಕರು ಕಲ್ಪನೆಗಳಲ್ಲಿ ವಿಹರಿಸುತ್ತಿಲ್ಲ; ವಾಸ್ತವದಲ್ಲಿ ಅವ್ಯವಹಾರಗಳ ಹೊಳೆಯಲ್ಲಿ ಮೀಯುತ್ತಿದ್ದಾರೆ. ಬೆಂಗಳೂರಿನ ಮಿಥಿಕ್ ಸೊಸೈಟಿಯನ್ನು ''ಮಿಥಿಕಲ್'' ಸೊಸೈಟಿಯನ್ನಾಗಿ ಪರಿವರ್ತಿಸಿ, ಅಲ್ಲಿಯ ಮಹಡಿಯಲ್ಲಿ ಸರ್ಕಾರದ ಆದೇಶಗಳು ಸಿದ್ಧವಾಗುವಂತೆ ಸಂಘಪರಿವಾರದ ನೇತಾರರು ನಿರ್ದೇಶಿಸುತ್ತಿದ್ದಾರೆ. ''ಮಿಥಿಕಲ್'' ಏಕೆಂದರೆ ಅದು ಎಲ್ಲರನ್ನೂ ಒಳಗೊಳ್ಳುವ ಸೊಸೈಟಿ ಆಗುವ ಬದಲು ಒಂದು ಆಸಿಕ್ತೋರ ಕೂಟದ ಗುಹೆಯಾಗಿಬಿಟ್ಟಿದೆ. ಹಿಂದೆ ಸಂಜಯ ಗಾಂಧಿ ಸಂವಿಧಾನೇತರ ಅಧಿಕಾರ ಕೇಂದ್ರವಾಗಿದ್ದುದನ್ನು ಆರೆಸ್ಸೆಸ್ ನಾಯಕರು ನೆನಪಿಸಿಕೊಳ್ಳಲಿ, ಆ ಬಗ್ಗೆ ಅವರು ಆಗ್ಗೆ ನೀಡುತ್ತಿದ್ದ ವಿಮರ್ಶೆ-ಟೀಕೆಗಳನ್ನು ಮನನ ಮಾಡಿಕೊಳ್ಳಲಿ. ಅದರಿಂದ ಚಾರಿತ್ರ್ಯಶುದ್ಧಿ ಆಗದಿದ್ದರೂ

ಮನಶ್ಶುದ್ಧಿಯಾದರೂ ಆದೀತೇನೊ! ಆಗ ರಾಷ್ಟ್ರೋತ್ಥಾನ ಸಾಹಿತ್ಯವನ್ನು ಸರ್ಕಾರದ ಬೆಂಬಲದಿಂದ ಶಾಲೆಗಳಲ್ಲಿ ತುಂಬುವ ಬದಲು, ಈವರೆಗೆ ಮಾಡುತ್ತಾ ಬಂದಿರುವಂತೆ ನೇರವಾಗಿ ಸಾರ್ವಜನಿಕರಿಗೆ ಮುಟ್ಟಿಸುವ ಕಾಯಕವನ್ನು ಇನ್ನೂ ಹೆಚ್ಚಿನ ಶ್ರದ್ಧೆಯಿಂದ ಮುಂದುವರಿಸಲು ಪ್ರೇರಣೆ ದೊರಕೀತು. ಆತ್ಮಾವಲೋಕನವನ್ನು ಬೋಧಿಸುವ ಮಂದಿ ಪ್ರಾಯೋಗಿಕವಾಗಿ ಅದನ್ನು ಕೈಗೊಂಡರೆ ನೈತಿಕ ಆರೋಗ್ಯಕ್ಕೆ ಹಾದಿ ಕಂಡುಕೊಳ್ಳಬಹುದು.

*   *   *

ಜಸ್ವಂತ್ ಸಿಂಗ್ ಮತ್ತು ಅರುಣ್ ಶೌರಿ ಪ್ರಸಿದ್ಧರು : ಕಾಂದಾಹಾರ್ ಮತ್ತು ಭಾರತ್ ಅಲ್ಯುಮಿನಿಯಂ ಖ್ಯಾತಿಯವರು. ಅಧಿಕಾರದಲ್ಲಿರುವಾಗ ಅವರಿಗೆ ನೈತಿಕತೆಯ ಬಾಧೆಯಿಲ್ಲ, ಆದರೆ ಮಂತ್ರಿಗಳಲ್ಲದಿದ್ದಾಗ ಎಲ್ಲಿಲ್ಲದ ಸೈದ್ಧಾಂತಿಕ ಬದ್ಧತೆ ಅವರನ್ನು ಮುತ್ತಿಕೊಳ್ಳುತ್ತದೆ. ಜಸ್ವಂತ್ ಸಿಂಗ್ ಜಿನ್ನಾ-ಪಟೇಲ್ ಬಗ್ಗೆ ಬರೆದು ಇತಿಹಾಸ ಕಟ್ಟಿಕೊಟ್ಟರೆ, ಶೌರಿ ತನ್ನ ಪಕ್ಷದ ನೇತೃತ್ವವನ್ನು ಆರೆಸ್ಸೆಸ್‌ಗೆ ವಹಿಸಿಕೊಡಬೇಕೆಂದು ಕಳಕಳಿ ವ್ಯಕ್ತಪಡಿಸುತ್ತಾರೆ. ಅಂದರೆ, ಈಗಾಗಲೇ ಆರೆಸ್ಸೆಸ್ ಬ್ರಹ್ಮಸ್ಥಾನದಲ್ಲಿ ಕೂತು ಪಕ್ಷವನ್ನು ನಿಯಂತ್ರಿಸುತ್ತಿಲ್ಲವೆಂದ? ಬಿಸಿಬಾಣಲೆಯಿಂದ ಬೆಂಕಿಗೆ ಸಿಡಿದು ಬೀಳುವಂತಹ ಪರ್ಯಾಯ ಸೂಚಿಸುವ ಶೌರಿ ಇತಿಹಾಸದ ಸೋಂಕೂ ಇಲ್ಲದಂತೆ ಉಪನಿಷತ್ತುಗಳ ಬಗ್ಗೆ, ಹಿಂದುಧರ್ಮದ ಬಗ್ಗೆ ಬರೆದಿರುವ ನಿಕೃಷ್ಟ ವಿದ್ವಾಂಸ. ಜಸ್ವಂತ್ ಸಿಂಗ್ ಪಕ್ಷಿಪ್ರಿಯ, ಆದ್ದರಿಂದ ಸಿಕ್ಕಿದ ಅಪರೂಪದ ಹಕ್ಕಿಗಳನ್ನು ಹುರಿದು ತಿಂದುಬಿಡುತ್ತಾರೆ. ಸೈನ್ಯಾಧಿಕಾರಿಯಾಗಿದ್ದ ರಾಜಕುಲಪ್ರಸೂತ ಬೇರೆ. ಆದ್ದರಿಂದ ಮದ್ಯದ ಅಮಲಿಲ್ಲದಿದ್ದಾಗಲೂ ಇದ್ದವರಂತೆ ಮಾತನಾಡುತ್ತಾರೆ. ಜಿನ್ನಾ-ಪಟೇಲ್-ನೆಹರು ಮುಂತಾದವರ ಒಳಹೊಕ್ಕು ೬೦೦ ಪುಟಗಳ ಪುಸ್ತಕ ಬರೆದಿದ್ದಾರೆ ಇವರು. ಅದರಲ್ಲಿ ಬಹಳ ಕೆಟ್ಟ ಇಂಗ್ಲಿಷ್ ಇದೆಯೆಂದು ಕೆಲವು ವಿಮರ್ಶಕರ ಅಭಿಪ್ರಾಯ. ಅವರ ೬೦೦ ಪುಟಗಳನ್ನೋದಿ ಕಣ್ಣಿಗೆ ಮಂಜು ತರಿಸಿಕೊಳ್ಳಲು ಇಚ್ಛಿಸದವರು ಅದನ್ನೆಲ್ಲಾ ಓದಿದ್ದಾರೇನೋ ಎಂಬಂತೆ ವ್ಯಾಖ್ಯಾನಿಸಿದ್ದು ಅಡ್ವಾನಿಯವರ ಪಕ್ಷದ ನಾಯಕರು. ವಲ್ಲಭಭಾಯಿ ಪಟೇಲರನ್ನು ಕುರಿತು ಶ್ಲಾಘನೆಯ ಮಾತುಗಳನ್ನು ಜಸ್ವಂತ್ ಬರೆಯಲಿಲ್ಲವೆಂದು ಒಂದು ಆಕ್ಷೇಪ; ಜಿನ್ನಾ ಬಗ್ಗೆ ಔದಾರ್ಯದ ಮಾತುಗಳನ್ನು ಸುಳ್ಳು-ಸುಳ್ಳೇ ಆಡಿದ್ದಾರೆಂಬುದು ಇನ್ನೊಂದು. ''ಇತಿಹಾಸದಲ್ಲಿ ಹೀಗಾಗುವ ಬದಲು ಹಾಗಾಗಿದ್ದಿದ್ದರೆ...'' ಎಂದು ನಿಟ್ಟುಸಿರಿಡುವವರಿರುವಂತೆ ಅತ್ಯುತ್ಸಾಹದಿಂದ ಅದನ್ನು ಚರ್ಚಿಸುವವರೂ ಇದ್ದಾರೆ. ಜಸ್ವಂತ್ ಮತ್ತು ಅವರ (ಹಿಂದಿನ) ಪಕ್ಷ ಎರಡನೆಯ ಬಗೆ. ಒಬ್ಬ ವ್ಯಕ್ತಿ ಧೀರೋದಾತ್ತನಾಗಿ ಇತಿಹಾಸವನ್ನು ಅವತಾರಪುರುಷನಂತೆ ನಿಯಂತ್ರಿಸಬಲ್ಲ ಅಥವಾ ಬಲ್ಲಳು ಎಂಬ ಪುರಾವೆರಹಿತ ಅಸಂಬದ್ಧ ಪ್ರಲಾಪ ಇದರ ವೈಶಿಷ್ಟ್ಯ. ಜನ, ಸನ್ನಿವೇಶ, ಪರಸ್ಪರ ಸಂಬಂಧ, ಭೌಗೋಳಿಕ ಅಂಶ, ಹೋರಾಟಗಳ ಸ್ವರೂಪ, ಆಕಾಂಕ್ಷೆ ಯಾವುವೂ ಇದರಲ್ಲಿ ಪ್ರಸ್ತುತವಲ್ಲ. ಹೀಗೆ ಅವೈಜ್ಞಾನಿಕವಾಗಿ ಜಿನ್ನಾ ಮತ್ತು ಪಟೇಲರನ್ನು ಜಸ್ವಂತ್ ಸಿಂಗ್ ಚಿತ್ರಿಸಿದ್ದಾರೆಂದು ವಿದಿತವಾಗಿದೆ. ಪಟೇಲ್ ಪರವಾಗಿರುವವರು ಅವರ ಮತೀಯ ಪೂರ್ವಗ್ರಹಗಳನ್ನು ಮನ್ನಿಸಿ, ೬೦೦ ರಾಜ್ಯಗಳನ್ನು ಭಾರತದಲ್ಲಿ ಐಕ್ಯಗೊಳಿಸಿದ ಉಕ್ಕಿನ ಮನುಷ್ಯ (ನಿಜಕ್ಕೂ, ತುಕ್ಕು ಹಿಡಿಯುವ ಕಬ್ಬಿಣ ಮನುಷ್ಯ) ಎಂದು ಹೇಳುತ್ತಾ ಭಾವುಕರಾಗುತ್ತಾರೆ. ಆದರೆ ಯೋಚನೆ ಮಾಡಿದರೆ ಎರಡಂಶಗಳು ಸ್ಪಷ್ಟ: (ಅ) ಜಮಖಂಡಿ, ಸಂಡೂರು, ಸಾಂಗ್ಲಿ, ಸತಾರಾ, ಕೊಲ್ಹಾಪುರ ಮುಂತಾದ ಪ್ರದೇಶಗಳ ''ರಾಜ''ರಿಗೆ ಭಾರತದೊಳಗೆ ಸಮ್ಮಿಳಿತರಾಗದೆ ಬೇರಾವ ಪರ್ಯಾಯವೂ ಇರಲಿಲ್ಲ. ಅವರನ್ನೆಲ್ಲಾ ಬಗ್ಗಿಸುವ, ಜಗ್ಗುವ, ಒಪ್ಪಿಸುವ ಪ್ರಮೇಯವೇ ಬರಲಿಲ್ಲ. ಉಕ್ಕಿನ ಮನುಷ್ಯನ ಜಾಗದಲ್ಲಿ ಬಿದುರಿನ ಮನುಷ್ಯ ಇದ್ದಿದ್ದರೂ ''ರಾಜ''ರೆಲ್ಲಾ ಗಂಟು-ಮೂಟೆ ಕಟ್ಟಲೇಬೇಕಾಗಿತ್ತು. ಇಲ್ಲದಿದ್ದರೆ ಸಿ. ಪಿ. ರಾಮಸ್ವಾಮಿ ಅಯ್ಯರ್‌ಗೆ ತಿರುವಾಂಕೂರು-ಕೊಚ್ಚಿನ್‌ನಲ್ಲಿ ಜನರಿಂದ ಆದ ಶಾಸ್ತಿ ಇವರಿಗೂ ಆಗುತ್ತಿತ್ತು. ಜನಾಭಿಪ್ರಾಯದ ವಿರುದ್ಧ ಹೋದ ಅಲ್ಲಿನ ''ರಾಜ'' ವಿಶ್ವಸಂಸ್ಥೆಗೆ ಹೋಗಬೇಕೆಂದಿದ್ದ, ಜನ ಆತನನ್ನು ಪದ್ಮನಾಭನ ಪಕ್ಕದ ಕಟ್ಟಡಕ್ಕೆ ತಳ್ಳಿ ಅರಮನೆಯಲ್ಲೇ ಸುಖವಾಗಿರು ಎಂದರು. ಹಾಗಿದ್ದರೆ ಪಟೇಲ್ ಮಾಡಿದ್ದೇನು?

ಹೈದರಾಬಾದ್ ನಿಜಾಮನನ್ನು ಮಣಿಸಿದ್ದೆ? ಕಮ್ಯುನಿಸ್ಟರು, ರಮಾನಂದ ತೀರ್ಥರ ಚಳುವಳಿ, ಆಂಧ್ರ ಮಹಾಸಭಾ, ಎಲ್ಲರೂ ಒಟ್ಟಾಗಿ ಆಗಲೆ ನಿಜಾಮನನ್ನು ಸಾಕಷ್ಟು ಮರ್ದಿಸಿದ್ದರು. ರಜಾಕಾರರನ್ನು ಜನ ಎದುರಿಸಿದ್ದು ಈ ಸಂಸ್ಥೆಗಳ ನೇತೃತ್ವದಲ್ಲಿ. ಪಟೇಲರು ಕಳುಹಿದ ಸೈನ್ಯಕ್ಕೆ ರಹದಾರಿ ಮೊದಲೇ ಕಲ್ಪಿಸಿ ಕೊಡಲಾಗಿತ್ತು, ನಿಜಾಮನ ರಾಜ್ಯದ ಜನರಿಂದ. ಪಟೇಲ್ ಇಲ್ಲದಿದ್ದರೆ ಸೈನ್ಯ ಬರುತ್ತಿರಲಿಲ್ಲವೆ? ಒಟ್ಟಿನಲ್ಲಿ ಜಸ್ವಂತ್ ಆಗಲಿ, ಪಟೇಲ್-ಅಭಿಮಾನಿಗಳಾಗಲಿ ಪಟೇಲರ ಪಾತ್ರವನ್ನು ಪೂರ್ಣವಾಗಿ ಗ್ರಹಿಸುವುದಿಲ್ಲ, ಗ್ರಹಿಸಲು ಇಚ್ಛಿಸುವುದಿಲ್ಲ. ಇನ್ನು ಜಿನ್ನಾ ಮಾತು ಅನಗತ್ಯ. ಹೇಳಿ ಕೇಳಿ, ಆತ ಸ್ವಯಂಪ್ರೀತಿಗೆ ಶರಣಾಗಿದ್ದ ನಾರ್ಸಿಸಸ್. ಮತೀಯತೆಯು ಅಧಿಕಾರಕ್ಕೆ ಹಾದಿಯೆಂದು ಕಂಡುಬಂದಾಗ ಅದನ್ನು ಅಂಗೀಕರಿಸಲು ಕ್ಷಣಕಾಲವೂ ಆತನಿಗೆ ಬೇಕಾಗಲಿಲ್ಲ. ಊಟ-ಉಡುಪು-ಜೀವನಶೈಲಿಯಲ್ಲಿ ಆತ ಧರ್ಮನಿರಪೇಕ್ಷತೆಯ ವಕ್ತಾರ; ಅಧಿಕಾರದ ಲಾಲಸೆ ಉಂಟಾದಾಗ ಕಟ್ಟಾ ಮತೀಯವಾದಿ. ಜಸ್ವಂತ್ ಸಿಂಗ್‌ಗೆ ಜಿನ್ನಾ ರೋಚಕವಾಗಿ ಕಾಣುವುದು ಅದೇ ಕಾರಣದಿಂದ. ಜಿನ್ನಾ ಪ್ರತಿಫಲನವನ್ನು ಜಸ್ವಂತ್ ತಮ್ಮಲ್ಲಿ ಕಾಣುತ್ತಾರೆ. ಅಷ್ಟರಮಟ್ಟಿಗೆ ಅವರು ಪ್ರಾಮಾಣಿಕರು.

*   *   *

ಕನ್ನಡ ಭಾಷೆ, ಕನ್ನಡ ಮಾಧ್ಯಮ ಇತ್ಯಾದಿ ಚರ್ಚೆಗಳ ಸಂದರ್ಭದಲ್ಲಿ ಇತ್ತೀಚೆಗೆ ಒಬ್ಬರು ವ್ಯಕ್ತಪಡಿಸಿದ ಅಭಿಪ್ರಾಯ ಹೀಗಿತ್ತು: ರಾಷ್ಟ್ರೀಕೃತ ಬ್ಯಾಂಕುಗಳು ಸಾಲ ನೀಡಲು ನಿಗದಿಗೊಳಿಸಿಕೊಂಡಿರುವ ಆದ್ಯತೆಗಳಲ್ಲಿ ಶಿಕ್ಷಣವೂ ಸೇರಿದೆ. ಶಿಕ್ಷಣದ ವ್ಯಾಪಾರೀಕರಣದಲ್ಲಿ ತೊಡಗುವ ಖದೀಮರು ಇದರ ಅನುಕೂಲ ಪಡೆಯುತ್ತಾರೆ. ಒಂದು ತುಂಡು ಜಮೀನನ್ನು ತೋರಿಸಿ ಶಾಲಾ-ಕಾಲೇಜು ಕಟ್ಟಡಗಳಿಗೆಂದು ಲಕ್ಷಗಟ್ಟಲೆ ಸಾಲ ಪಡೆದುಬಿಡುತ್ತಾರೆ. ಯಾವ ಬಂಡವಾಳ ಹೂಡಿಕೆಯೂ ಇಲ್ಲದೆ ಲಾಭ ತರುವ ವ್ಯಾಪಾರವಾಗಿ ಶಿಕ್ಷಣವು ಮಾರ್ಪಡಲು ಇದೂ ಒಂದು ಕಾರಣ. ಆಮೇಲೆ ಅವರು ರಾಜ್ಯದ ನಿಯಂತ್ರಣವಿರದ ಸಿಬಿಎಸ್‌ಇ, ಐಸಿಎಸ್‌ಇ, ಮುಂತಾದುವನ್ನು ಆರಂಭಿಸಿ ಒಂದೆರಡು ವರ್ಷಗಳಲ್ಲಿ ಕೋಟಿಗಳ ಸರದಾರರಾಗುತ್ತಾರೆ. ಬ್ಯಾಂಕುಗಳು ಇದನ್ನು ತಡೆಯಬೇಕು, 'ಆದ್ಯತೆ'ಯ ಹೆಸರಿನಲ್ಲಿ ಶಿಕ್ಷಣವನ್ನು ವ್ಯಾಪಾರದ ಸರಕನ್ನಾಗಿಸು ವವರಿಗೆ ಸಾಲ ಕೊಡಕೂಡದು. ಮಠಗಳು, ಖಾಸಗಿ ವ್ಯಕ್ತಿ-ಸಂಸ್ಥೆಗಳು, ಮತ್ತು ಬ್ಯಾಂಕಿನಿಂದ ಸಾಲ ಪಡೆಯುವವರು, ಇವರೇ ಶಿಕ್ಷಣ ಕ್ಷೇತ್ರದ ಪಾಳೆಯಗಾರರು. ಬ್ಯಾಂಕುಗಳ ನಿರ್ದೇಶಕರು ಇದನ್ನು ತಡೆಯದಿರಬಹುದು, ಆದರೆ ನೌಕರರು ಮತ್ತು ಅವರ ಸಂಘಗಳು ಈ ಕೆಲಸ ಮಾಡಬೇಕು. ಅವರ ಇನ್ನೊಂದು ಅಭಿಪ್ರಾಯದ ಮಂಡನೆಯಲ್ಲಿ ಪ್ರಸ್ತಾಪಿಸಲಾದ ಒಂದು ಅಂಶ ಇದು : ಕರ್ನಾಟಕ ಸರ್ಕಾರವು ಕನ್ನಡ ಮಾಧ್ಯಮವನ್ನು ಕಡ್ಡಾಯಗೊಳಿಸುವ ಪ್ರಸಂಗದಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗಬೇಕಾಗಿ ಬಂದಿದೆ. ಖಾಸಗಿ ಬಂಡವಾಳದ ಪ್ರಭಾವ ಅಷ್ಟು ಬಿಸಿಯಾಗಿದೆ. ನ್ಯಾಯಾಲಯದಲ್ಲಿ ವಾದ ಮಂಡಿಸುತ್ತಿದ್ದ ಸರ್ಕಾರದ ವಕೀಲರು ಮಾಧ್ಯಮವು ಪ್ರಾಥಮಿಕ ಹಂತದಲ್ಲಿ ಎಷ್ಟು ಮಹತ್ವದ್ದೆಂಬುದನ್ನು ಒತ್ತುಕೊಟ್ಟು ಹೇಳಲು ಗಾಂಧೀಜಿ ಮತ್ತು ಟಾಗೋರರ ಅಭಿಪ್ರಾಯಗಳನ್ನು ಉದ್ಧರಿಸಿದರು. ಆಗ ಒಬ್ಬ ನ್ಯಾಯಮೂರ್ತಿ ಈ ಮುತ್ತಿನ ಮಾತನ್ನು ಸುರಿಸಿದರಂತೆ : ''ಗಾಂಧಿ, ಟಾಗೋರ್, ಎಲ್ಲಾ ಇಲ್ಲಿ ಬೇಡ. ಅವರು ಬರೀ ತತ್ವಗಳನ್ನು ಹೇಳುತ್ತಾರೆ. ಅವು ಪ್ರಾಯೋಗಿಕವಲ್ಲ. ನೀವೇ ಹೇಳಿ, ಇಂಗ್ಲಿಷ್ ತಿಳಿಯದವರಿಗೆ ಎಲ್ಲಿಯಾದರೂ ನೌಕರಿ ದೊರೆಯುತ್ತದೆಯೆ?'' ಮೊಕದ್ದಮೆ ಮುಂದುವರಿದಿದೆ, ಆದರೆ ತೀರ್ಪು ಹೇಗಿರುತ್ತದೆಂದು ಊಹಿಸಬಹುದು.

– ಇದರರ್ಥವೇನು? ನ್ಯಾಯಾಲಯವು ಹೊಸ ಶಾಸನಗಳನ್ನು ಮಾಡಲು ಅರ್ಹವಾಗಿದೆಯೆಂದೆ? ಹಾಗಿದ್ದರೆ ಶಾಸನಸಭೆಗಳೇಕೆ ಬೇಕು? ಅಥವಾ ಮಾನ್ಯ ನ್ಯಾಯಮೂರ್ತಿಗಳಿಗೆ ಒಂದು ಪ್ರಶ್ನೆ ಹಾಕಬಹುದು : ''ಸ್ವಾಮಿ, ಇಂಗ್ಲಿಷ್ ತಿಳಿದವರಿಗೆಲ್ಲಾ ಇನ್ನೂ ನೌಕರಿ ದೊರೆತಿಲ್ಲವಲ್ಲಾ, ದಯವಿಟ್ಟು ತಾವು ನೌಕರಿ ದೊರಕಿಸಿಕೊಡುವ ಕೃಪೆ ತೋರುವಿರಾ?'' ಶಿಕ್ಷಣ ಮಾಧ್ಯಮದ ಬಗೆಗಿನ ವಿಚಾರಣೆಯು ನ್ಯಾಯಾಲಯದಲ್ಲಿ ಒಂದು ಸಾಮಾನ್ಯ ಶಾಲಾ ಚರ್ಚಾಕೂಟದ ಮಾದರಿಯಲ್ಲಿ ನಡೆಯುತ್ತಿದೆಯೆಂದು ನಂಬಬೇಕೆ?

*   *   *

ನ್ಯಾಯಾಲಯದ ಪ್ರಸ್ತಾಪ ಬಂದಾಗ ಉತ್ತರ ಪ್ರದೇಶದ ಮುಖ್ಯಮಂತ್ರಿ ಶ್ರೀಮತಿ ಮಾಯಾವತಿಯವರನ್ನು ಮರೆಯಬಾರದು. ಸಾರ್ವಜನಿಕ ಹಿತಾಸಕ್ತಿ ಅರ್ಜಿಯೊಂದರ, ಮತ್ತು ನಂತರ ಒಂದು ಪತ್ರಿಕೆಯ ವರದಿಯ, ಆಧಾರದ ಮೇಲೆ ಸರ್ವೋಚ್ಚ ನ್ಯಾಯಾಲಯವು ದುಂದುವೆಚ್ಚ ಮುಂತಾಗಿ ಕಾರಣ ಕೊಟ್ಟು ಅವರ ಕೆಲವು ಕಾರ್ಯಕ್ರಮಗಳ ಮೇಲೆ ನಿರ್ಬಂಧ ಹೇರಿದೆ. ಬೇರೆಷ್ಟೋ ಸ್ಮಾರಕಗಳ ನಿರ್ಮಾಣ

ವಾಗುವಾಗ, ಅದ್ದೂರಿ ಉದ್ಘಾಟನೆಗಳಾಗುವಾಗ, ಶಾಸಕರು ಮೋಜಿಗೆ ವಿದೇಶಗಳಿಗೆ ತೆರಳುವಾಗ, 'ದುಂದುವೆಚ್ಚ' ಆಗುವುದಿಲ್ಲ, ಸಾರ್ವಜನಿಕ ಹಿತಾಸಕ್ತಿ ಅರ್ಜಿ ಇರುವುದಿಲ್ಲ, ನ್ಯಾಯಾಲಯದ ನಿರ್ಬಂಧಗಳಿರುವುದಿಲ್ಲ. ಮಾಯಾವತಿಯವರ ಆರ್ಥಿಕ ನೀತಿ, ಸಾಮಾಜಿಕ ಸುಧಾರಣೆ, ರಾಜಕೀಯ ವಿಚಕ್ಷಣೆ, ಇವುಗಳ ಬಗ್ಗೆ ಎಷ್ಟೇ ತಕರಾರುಗಳಿದ್ದರೂ, ಅವರ ಕೈ ಕಟ್ಟಿಹಾಕಲು ನ್ಯಾಯಾಲಯದ ಬಾಗಿಲು ತಟ್ಟಿದವರು ಬೇರೆ ಸಂದರ್ಭಗಳಲ್ಲಿ ಮೌನಿಗಳಾಗುವುದರ ಹಿಂದಿನ ಮರ್ಮವೇನೆಂಬ ಪ್ರಶ್ನೆ ನಮ್ಮನ್ನು ಕಾಡಬೇಕು. ಬಾಬಾಬುಡನ್‌ಗಿರಿಯಲ್ಲಿ ಇತ್ತೀಚೆಗೆ ಕರ್ನಾಟಕದ ಸರ್ಕಾರವು ನೇರವಾಗಿ ಸರ್ವೋಚ್ಚ ನ್ಯಾಯಾಲಯದ ಆಜ್ಞೆಯೊಂದನ್ನು ಧಿಕ್ಕರಿಸಿ ಕೆಲವು ಮತೀಯ ಪೂಜಾವಿಧಿಗಳಲ್ಲಿ ಭಾಗಿಯಾಯಿತು, ಅದನ್ನು ಆಯೋಜಿಸಿತು. ನ್ಯಾಯಾಲಯವು ಸ್ವಯಂ ಪ್ರೇರಣೆಯಿಂದ ಜಾಗೃತವಾಗಿ ಕಾರ್ಯಪ್ರವೃತ್ತವಾಗಬಹುದಿತ್ತು. ಆದರೆ ಭಾಜಪವು ಬಹುಜನ ಸಮಾಜ ಪಕ್ಷವಲ್ಲವಲ್ಲ! ಅದಿರಲಿ, ಇನ್ನು ಮುಂದೆ ದುಂದುವೆಚ್ಚಗಳಿಗೆಲ್ಲಾ ಕಡಿವಾಣ ಹಾಕಲಾಗುತ್ತದೆಂದು ಆಶಿಸೋಣ.

ಮಧ್ಯಪ್ರದೇಶದ ಒಂದು ಕಾಲೇಜಿನ ಪ್ರಾಚಾರ್ಯರ ಹತ್ಯೆ ಮಾಡಿದ್ದವರೆಲ್ಲಾ ನಿರ್ದೋಷಿಗಳು. ಹಾಗೆಂದು ನ್ಯಾಯಾಲಯ ಹೇಳಿದೆ. ನಿಜವೇ ಇರಬೇಕು, ಯಾರೋ ಯಃಕಶ್ಚಿತ್ ಪ್ರಾಚಾರ್ಯನನ್ನು ಕೊಂದರೇನಂತೆ. ನಮ್ಮ ಕಂಬಾಲಪಲ್ಲಿ ಕತೆಯೂ ಅದೇ. ಎರಡೂ ಕಡೆ ಸಾಕ್ಷಿಗಳೆಲ್ಲಾ ತಮ್ಮ ಹೇಳಿಕೆಗಳನ್ನು ಬದಲಾಯಿಸಿದರು. ಅದಕ್ಕೆ ತೀವ್ರವಾದ ಒತ್ತಡ ಹೇರಲಾಗಿತ್ತು. ಜಾತಿ- ಗೂಂಡಾಗಿರಿ- ಪೊಲೀಸರ ಪಕ್ಷಪಾತ-ರಾಜಕೀಯ ಒತ್ತಾಸೆ, ಇವೆಲ್ಲಾ ನ್ಯಾಯಾಲಯಗಳನ್ನು ಗೌಣ ವಾಗಿಸುವುದಕ್ಕೆ ಪ್ರಬಲ ಅಸ್ತ್ರಗಳು. ಕಂಚಿಸ್ವಾಮಿಯಂಥವರಾದರೆ ಸಾಕ್ಷಿಗಳನ್ನು ಬೆದರಿಸುವುದು ಮತ್ತೂ ಸುಲಭ. ಅವರೆಲ್ಲಾ ಜೈಲುಗಳನ್ನು ಕಟ್ಟುತ್ತಾರೆ, ಅದರೊಳಕ್ಕೆ ಅವರು ಹೋಗುವುದಿಲ್ಲ. ನ್ಯಾಯಾಲಯವನ್ನು ಮೀರಿದ ನ್ಯಾಯ ಅವರ ಬತ್ತಳಿಕೆಯಲ್ಲಿರುತ್ತದೆ.

* * *

ಸ್ವಿಟ್ಸರ್ಲೆಂಡಿನಲ್ಲಿ ಮಸೀದಿಯೊಂದರ ಸ್ತಂಭ ಗೋಪುರವು ಕೆಲವು ನಾಗರಿಕರಿಗೆ ಕಣ್ಣು ಕುಕ್ಕುತ್ತದಂತೆ. ಅದನ್ನು ಉರುಳಿಸಬೇಕೆಂಬುದು ಅವರ ತಗಾದೆ. ಪಶ್ಚಿಮ ಏಷ್ಯಾದ ದೇಶಗಳ ಸಂಪತ್ತನ್ನು ಲೂಟಿ ಮಾಡಲು ಅಲ್ಲಿಗೆ ಹೋದಾಗ ಇವೇ ಗೋಪುರಗಳು ಅವರಿಗೆ ಕಾಣಿಸುವುದಿಲ್ಲ. ಹಾಗೇ ವಿಸ್ತರಿಸಿದರೆ, ನಮ್ಮ ದೇಶದ ಬುಡಕಟ್ಟಿನ ಜನ ಸ್ವದೇಶ-ವಿದೇಶಗಳ ಬಾಬೂಗಳನ್ನು ನೋಡಿದಾಗ ಅವರಿಗೂ ಕಣ್ಣು ಕುಕ್ಕುತ್ತದೆಯೆಂದು ಭಾವಿಸಬೇಕು. ಆಗ ಅವರೇನು ಮಾಡಬೇಕು? ಬಾಬುಗಳನ್ನು ಹೇಗೆ ಉರುಳಿಸಬೇಕೆಂದು ಲೆಕ್ಕ ಹಾಕಬೇಕು. ವಸಾಹತುಗಳನ್ನು ಆಕ್ರಮಿಸಿಕೊಂಡು ನೂರಾರು ವರ್ಷ ಬೇರೆ ದೇಶಗಳಲ್ಲಿದ್ದ ಯೂರೋಪಿನ ''ನಾಗರಿಕ''ರಿಗೆ ಯಾವ ಗೋಪುರವೂ ಕಣ್ಣುಕುಕ್ಕಲಿಲ್ಲವೆಂಬುದು ಸೋಜಿಗದ ಸಂಗತಿ.

* * *

ಮಹಾರಾಷ್ಟ್ರದ ಚುನಾವಣೆಗೆ ಸಿದ್ಧತೆ ನಡೆಸುವಾಗ ಕೆಲವು ಪಕ್ಷಗಳು ಮೂರನೆಯ ರಂಗ ಸ್ಥಾಪಿಸಿಕೊಂಡಿವೆ. ಈ ರಂಗದ ಹಿಂದಿನ ಅನುಭವದ ಪುನರಾವರ್ತನೆಗೂ ಸಿದ್ಧತೆ ನಡೆದಿರಬೇಕು. ಎಡಪಕ್ಷಗಳು ಹೇಗೆ ಚುನಾವಣಾ ಹೊಂದಾಣಿಕೆ ಮಾಡಿಕೊಳ್ಳುತ್ತವೆಂಬುದು ಆಶ್ಚರ್ಯ ಮತ್ತು ಆತಂಕಕ್ಕೆ ಎಡೆಮಾಡಿಕೊಡುತ್ತದೆ. ಒಂದು ಉದಾಹರಣೆ ಸಾಕು: ಮಹಾರಾಷ್ಟ್ರದ ಮೂರನೆಯ ರಂಗದಲ್ಲಿ ಎಡಪಕ್ಷಗಳಿವೆ ಮತ್ತು ಮುಲಾಯಂ ಸಿಂಗ್ ಪಕ್ಷವೂ ಇದೆ. ಈ ಪಕ್ಷ ಕೇಂದ್ರ ಸರ್ಕಾರಕ್ಕೆ ಬೆಂಬಲ ನೀಡುತ್ತಿದೆ, ಎಡಪಕ್ಷಗಳು ಹಾಗೆ ಮಾಡುತ್ತಿಲ್ಲ. ಆದರೂ ಮಹಾರಾಷ್ಟ್ರದಲ್ಲಿ ಅವು ಜೊತೆಯಾಗಿವೆ. ಇನ್ನೂ ಹೆಚ್ಚಿಗೆ ಪ್ರಶ್ನಾರ್ಹವಾದದ್ದು ಸಂಜಯ್ ದತ್ ಜೊತೆ ಯೆಚೂರಿ ಮತ್ತು ಬರ್ಧನ್ ಕೈ ಜೋಡಿಸುವುದು. ಜೈಲಿನಲ್ಲಿರಬೇಕಾದ ಸಂಜಯನೊಡನೆ ಎಂತಹ ಮೈತ್ರಿ, ಏನು ಚುನಾವಣೆ ಮತ್ತು ಯಾವ ಜನಪರ ಹೋರಾಟ?

* * *

ಕ್ರಿಕೆಟ್ ಮೋಹವು ಜನರಲ್ಲಿದೆಯೋ ಮಾಧ್ಯಮಗಳಲ್ಲಿದೆಯೋ ತಿಳಿಯುತ್ತಿಲ್ಲ. ಆದರೆ ಆಕಾಶವಾಣಿ - ದೂರದರ್ಶನಗಳು ಕ್ಷಮಾರ್ಹವಲ್ಲ. ಗಂಟೆಗಟ್ಟಲೆ ಸಮಯ ವ್ಯರ್ಥ ಮಾಡಿ ಹಣ ಸಂಪಾದಿಸಿಕೊಳ್ಳುವುದು ಅನೀತಿಯುತವಾದ್ದು, ಅಸಾಂಸ್ಕೃತಿಕವಾದ್ದು. ಇತ್ತೀಚೆಗೆ ಒಂದು ದಿನ ರಾತ್ರಿ ೯-೩೦ರ ರಾಷ್ಟ್ರೀಯ ಸಂಗೀತ ಕಾರ್ಯಕ್ರಮ ರದ್ದು ಮಾಡಿ ಅಸಹ್ಯವಾದ ಕ್ರಿಕೆಟ್ ವೀಕ್ಷಕ ವಿವರಣೆಯನ್ನು ಆಕಾಶವಾಣಿ ಪ್ರಸಾರ ಮಾಡಿತು. ಜನರಿಗೆ ಸಂಸ್ಕೃತಿ ಕೊಡುತ್ತೀರೋ ಅಥವಾ ಮಾದಕ ದ್ರವ್ಯದಂತಹ ಕ್ರಿಕೆಟ್ ಅಫೀಮು ಕೊಟ್ಟು ಮತ್ತು ಬರಿಸುತ್ತೀರೋ ಎಂಬುದು ಪ್ರಶ್ನೆ. ಮಾರನೆಯ ದಿನ ವೃತ್ತಪತ್ರಿಕೆಗಳು ಸಮಾಚಾರ ನೀಡುತ್ತಿದ್ದುವಲ್ಲ! ಆಕಾಶವಾಣಿಯ ನೀತಿಯಿಂದ ಬೇಸತ್ತವರು ಧೋನಿ ಪಡೆ ಸೋಲಲೆಂದು ಬಯಸಿದರೆ ಕ್ಷಮಾರ್ಹರು.

* * *

ರಾಷ್ಟ್ರೋತ್ಥಾನ ಪ್ರಕಾಶನದ ಏಳಿಗೆಗೆ ಸರ್ಕಾರದ ಹಣವನ್ನು ದುರ್ವಿನಿಯೋಗ ಮಾಡಿರುವ ಮುಖ್ಯಮಂತ್ರಿಯವರಿಗೆ ವಿಶಾಲ ಹೃದಯವಿರುವಂತೆ ಕಂಡುಬರುತ್ತದೆ. ಆದರೆ ಈ ವೈಶಾಲ್ಯವು ಮಿಥಿಕ್ ಸೊಸೈಟಿ ಮಹಡಿಯಲ್ಲಿ ಕೈಗೊಳ್ಳಲಾಗುವ ಸಂವಿಧಾನೇತರ ಕೂಟದ ತೀರ್ಮಾನಕ್ಕೆ ಅನುಗುಣವಾಗಿರುತ್ತದೆ. ಭಾರತೀಯ ಜನತಾ ಪಕ್ಷವು ಸಾರ್ವಜನಿಕರ ಸಂಪತ್ತನ್ನು ಇಷ್ಟು ನಿರಾಳವಾಗಿ ದೋಚಲು ಹೇಸದಿರುವುದಕ್ಕೆ ಆ ಪಕ್ಷದಲ್ಲಿ ನೈತಿಕತೆಯ ಕೊರತೆ ಒಂದು ಕಾರಣವಾದರೆ, ಬೇರೆ ಪಕ್ಷಗಳು ಈ ಅನೈತಿಕತೆಯನ್ನು ಕ್ರಮಬದ್ಧವಾಗಿ ಪ್ರಶ್ನಿಸಲು ಅನಾಸಕ್ತವಾಗಿರುವುದು ಇನ್ನೊಂದು ಕಾರಣ. ಪ್ರಧಾನಿ ಪಟ್ಟವನ್ನು ಮನಸ್ಸಿನಲ್ಲಾಗಲೇ ಏರಿಬಿಟ್ಟಿದ್ದ ಮಾನ್ಯ ಅಡ್ವಾನಿಯವರ ಆತ್ಮಕತೆ ಕನ್ನಡದಲ್ಲಿ ಪ್ರಕಟವಾಗಿದೆ. ಇಂಗ್ಲಿಷ್ ಆವೃತ್ತಿ ಹೊರಬಂದ ಕೆಲವೇ ದಿನಗಳಲ್ಲಿ ಇದು ಬಿಸಿಬಿಸಿಯಾಗಿ ಹೊರಬಂತು. ಅದರ ಸಾವಿರಾರು ಪ್ರತಿಗಳನ್ನು ಮಾರಾಟ ಮಾಡಲು ಯಡಿಯೂರಪ್ಪನವರು ಏಜೆನ್ಸಿ ಪಡೆದಿದ್ದಾರೇನೋ ಗೊತ್ತಿಲ್ಲ, ಆದರೆ ರಾಜ್ಯದ ಎಲ್ಲ ಪಂಚಾಯತಿಗಳು ಆ ''ವಿದ್ವತ್ಪೂರ್ಣ ಪುಸ್ತಕ''ದ ಪ್ರತಿಗಳನ್ನು ಕೊಳ್ಳಬೇಕೆಂದು ಕಡ್ಡಾಯಗೊಳಿಸಲಾಗಿದೆ. ಗಾಂಧೀಜಿ ಆತ್ಮಕತೆಗೆ ಇಲ್ಲದ ಆದರ ಅಡ್ವಾನಿಯವರ ಕತೆಗಿದೆ; ಏಕೆಂದರೆ ಗಾಂಧೀಜಿ ವಾರಸುದಾರರು ಯಾರೂ ಇಲ್ಲ, ಅಡ್ವಾನಿಯವರಿಗೆ ಹಲವರಿದ್ದಾರೆ. ''ನಿಮ್ಮ ಕತೆಯನ್ನು ಹಳ್ಳಿಹಳ್ಳಿಗೂ ಮುಟ್ಟಿಸಿದ್ದೇವೆ'' ಎಂದು ಅವರಿಗೆ ಕರ್ನಾಟಕದ ಭಾಜಪ ನಾಯಕರು ಹೇಳಿದರೆ ಮುಂದೆ ಅವರ ಗ್ರಹಗತಿ ಬದಲಾಗುತ್ತದೆಂದು ಸ್ವಯಂ-ಜ್ಯೋತಿಷ್ಯದಿಂದ ತಿಳಿದುಕೊಂಡಿದ್ದಾರೆ. ರಾಷ್ಟ್ರೋತ್ಥಾನ ಮತ್ತು ಅಡ್ವಾನಿ ಪ್ರಕಾಶಕರಿಗೆ ನೀಡಿರುವ ದೇಣಿಗೆಗಿಂತಲೂ ಹೆಚ್ಚಿನ ಧಾರಾಳತನ ''ಸಾವಯವ ಕೃಷಿ''ಯ ಸಂಬಂಧದಲ್ಲಿ ವ್ಯಕ್ತವಾಗಿದೆ. ಇಲ್ಲಿ ಸುಮಾರು ೨೦೦ ಕೋಟಿ ಲಪಟಾಯಿಸಲಾಗುತ್ತಿದೆಯೆಂದು ಅಧಿಕೃತ ವರದಿಗಳು ತಿಳಿಸಿವೆ. ಹಠಾತ್ತನೆ ಭಾಜಪದ ಕಾರ್ಯಕರ್ತರು ಸಾವಯವ ಕೃಷಿ ತಜ್ಞರಾಗಿಬಿಟ್ಟಿದ್ದಾರೆ. ಅದರ ಮಹತ್ವ ಅರಿತು ಅದನ್ನು ಎಲ್ಲೆಲ್ಲೂ ಪ್ರಚಾರಕ್ಕೆ ತರಲು ಶ್ರದ್ಧೆ ವಹಿಸಿದ್ದಾರೆ ಮತ್ತು ಅದಕ್ಕಾಗಿ ಹತ್ತಾರೆಡೆಗಳಲ್ಲಿ (ಆರೆಸ್ಸೆಸ್ ಶಾಖೆಯ ಮಾದರಿಯಲ್ಲಿ?) ಸಾವಯವ ಕೃಷಿ ತರಬೇತಿ ಶಿಬಿರಗಳನ್ನು ಆಯೋಜಿಸುವ ದೊಡ್ಡ ಮನಸ್ಸು ಮಾಡಿದ್ದಾರೆ. ಸಾವಯವ ಕೃಷಿಯ ಅದೃಷ್ಟ ಖುಲಾಯಿಸುವುದು ಅಷ್ಟರಲ್ಲೇ ಇದೆ. ಆದರೆ ಯಡಿಯೂರಪ್ಪನವರ ಪರಿವಾರದ ಅದೃಷ್ಟ ಬಹುಬೇಗ ಕುದುರುತ್ತಿದೆ. ಇದು ಅತ್ಯಂತ ನಾಚಿಕೆಗೇಡಿನ ಪ್ರಸಂಗ, ಸಾರ್ವಜನಿಕರ ಹಣವನ್ನು ದೋಚುವ ವಿಚಾರ. ಇದನ್ನು ಸಾಮೂಹಿಕವಾಗಿ ಪ್ರತಿಭಟಿಸಲು ಎಲ್ಲ ಭ್ರಷ್ಟಾಚಾರ ವಿರೋಧಿ ವ್ಯಕ್ತಿಗಳು ಮತ್ತು ಸಂಸ್ಥೆಗಳು ಒಂದಾಗಬೇಕು, ಸಾರ್ವಜನಿಕ ಹಣದ ಲೂಟಿಯಾಗದಂತೆ ತಡೆಯಬೇಕು. ಇನ್ನೂ ಎಷ್ಟು ಗಳ ಹಿರಿದುಕೊಳ್ಳುವ ಯೋಜನೆಗಳು ಸಿದ್ಧವಾಗಿವೆಯೋ ತಿಳಿದಿಲ್ಲ. ಆದರೆ ಕರ್ನಾಟಕವೆಂಬ ಗುಡಿಸಿಲಿಗೆ ಬೆಂಕಿಯನ್ನಂತೂ ಹಚ್ಚಿದ್ದಾಗಿದೆ. ನೀರು-ಮರಳು ಸಂಗ್ರಹಿಸಿ ಗುಡಿಸಿಲಿನ ಬೆಂಕಿಯನ್ನು ನಂದಿಸುವುದು, ಗುಡಿಸಿಲನ್ನು ವಾಸಯೋಗ್ಯವನ್ನಾಗಿ ಮಾಡಿಕೊಳ್ಳುವುದು ರಾಜ್ಯದ ಜನದ ಜವಾಬ್ದಾರಿ.

* * *

'ಹೊಸತು' ಸಹ ಸಂಪಾದಕರಾದ ಶ್ರೀ ಕೆ. ಎಸ್. ಪಾರ್ಥಸಾರಥಿಯವರು ೧೨-೯-೨೦೦೯ರಂದು ಅಮೆರಿಕಾದ ಬಾಸ್ಟನ್ನಿನಲ್ಲಿ ಮ್ಯಾಸೆಚ್ಯುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಗೆ ತೆರಳಿ ಅಲ್ಲಿ ಒಂದು ಗಂಟೆಗೂ ಹೆಚ್ಚು ಕಾಲ ಖ್ಯಾತ ಚಿಂತಕ - ಕ್ರಿಯಾಶಾಲಿ ನೋಮ್ ಚಾಮ್‌ಸ್ಕಿ ಅವರನ್ನು ಭೇಟಿಯಾಗಿ ಸಂದರ್ಶಿಸಿದ್ದಾರೆ. ಅಮೆರಿಕಾಕ್ಕೆ ಹೋದ ಪ್ರವಾಸಿಗರಲ್ಲಿ ಇಂತಹ ಕಾರ್ಯಕ್ರಮ ಇಟ್ಟುಕೊಂಡವರು ಬಹುಶಃ ವಿರಳವಿರಬೇಕು. ಸಮಯಾಭಾವವಿದ್ದಾಗಲೂ ಚಾಮ್‌ಸ್ಕಿ 'ಹೊಸತು' ಬರೆದ ಪತ್ರವನ್ನು ಮಾನ್ಯಮಾಡಿದ್ದಾರೆ, ಸಂದರ್ಶನ ನೀಡಿದ್ದಾರೆ. ಸಂದರ್ಶನದ ಪೂರ್ಣಪಾಠವನ್ನು 'ಹೊಸತು' ಜನವರಿ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲು ಹರ್ಷಿಸುತ್ತೇವೆ.




### ಪಡ್ನೂರಿನ ಪಾತಗಳು

'ಸಾಯ್ಯಿಬ್ಬರ ಪಡಿ', 'ಬಪ್ಪನಾಡಿನ ದೇಗುಲ'ಗಳಂಥ ಸಾಂಸ್ಕೃತಿಕ-ಸಾಮಾಜಿಕವಾದ ಸುಮಧುರ ಸಾಮರಸ್ಯದ ಬೀಡಾದ, ನಿಜಾರ್ಥದಲ್ಲಿ 'ಸರ್ವಜನಾಂಗದ ಶಾಂತಿಯ ತೋಟ'ವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯನ್ನು ಈಗ ನೆನೆಸಿಕೊಂಡಾಗೆಲ್ಲ ವಿಷಾದ ಕವಿಯುತ್ತದೆ. ಎಸ್. ಆರ್. ವಿಜಯಶಂಕರ ಅವರ ಲೇಖನ 'ಪಡ್ನೂರಿನ ಪಾತಗಳು' (ಹೊಸತು: ಆಗಸ್ಟ್ ೨೦೦೮) ನೀಡಿದ ಕಾಣ್ಕೆಯು ಧರ್ಮ-ಸಂಸ್ಕೃತಿ ರಕ್ಷಕರಿಗೆ ಪಾಠವಾಗಬಲ್ಲುದೆ? ಉಹುಂ! ಆಗಲಾರದೆನಿಸುತ್ತದೆ. ಏಕೆಂದರೆ ಆ ಜಿಲ್ಲೆಯಲ್ಲಿ ತಾಂಡವವಾಡುವ ವಿಷ ನಮ್ಮ ರಾಜಧಾನಿಯ ಬೀದಿಗಳಿಗೂ ಬೇರೆ ರೀತಿಯಲ್ಲಿ ಹಬ್ಬುತ್ತಿರುವ ಉದಾಹರಣೆಯಾಗಿ, ಮೊನ್ನಿನ ನನ್ನ ಅನುಭವವೊಂದು ಅತ್ತಲೇ ಬೆರಳು ಮಾಡುತ್ತದೆ –

ಮೊನ್ನೆ, ನನ್ನ ಬಡಾವಣೆಯ ಹತ್ತಿರದ ಬಸ್‌ಸ್ಟಾಪ್ ಕಡೆಗೆ ಧಾವಿಸುತ್ತಿದ್ದ. ಮಳೆ ಬಿಸಿಲ ಕಣ್ಣುಮುಚ್ಚಾಲೆಯ ಮಳೆ ಇದ್ದಕ್ಕಿದ್ದಂತೆ ಪಟಪಟನೆ ಉದುರತೊಡಗಿತು. ಬೀದಿ ಬದಿಯಲ್ಲಿದ್ದ ಚಿಲ್ಲರೆ ಅಂಗಡಿ ಮುಂದಿನ ಮಾಡಿನಡಿ ಆಶ್ರಯಕ್ಕೆ ಧಾವಿಸಿ ನಿಂತುಕೊಂಡೆ. ಅದಾಗಲೆ ನಾಲ್ಕೈದು ಪ್ರಾಯದ ಹುಡುಗರು ಅಲ್ಲಿ ಪರಸ್ಪರ ಕಿಚಾಯಿಸುತ್ತ ತಮಾಷೆಯಲ್ಲಿ ಮುಳುಗಿದ್ದರು. ಮಾತಿನ ಮಧ್ಯೆ, ಒಂದಿಬ್ಬರು ಸ್ವಾಮಿಗಳು, ಒಬ್ಬ ಬಲಿಷ್ಠ ರಾಜಕೀಯ ನಾಯಕ ಮತ್ತು ಆತನ ಮಾಜಿ ಶಿಷ್ಯ (ಅದೆಂತದೊ ಆಪರೇಷನ್ ಮಲದಾಟಕ್ಕೆ ನುಗ್ಗಿ ನುಗ್ಗಾಗಿ ಹೋದವನು) ಇವರೆಲ್ಲರ ಪರಸ್ಪರ ಮೋಸ ದಗಾಗಳೆಲ್ಲ ಹಾರಾಡಿದವು. ಹಾಗೆಯೇ ಆಗತಾನೆ ಹೆಲಿಕಾಪ್ಟರ್ ಅಪಘಾತದಲ್ಲಿ ಮಡಿದ ಆಂಧ್ರದ ರಾಜಶೇಖರ ರೆಡ್ಡಿಯೂ ಪ್ರತ್ಯಕ್ಷರಾಗಿ ಅವರ ದುರಂತ ಅಂತ್ಯಕ್ಕೆ, ಆತ ತಿರುಪತಿಯಲ್ಲಿ ಚರ್ಚ್ ಕಟ್ಟಲು ಹೋಗಿದ್ದೇ ಕಾರಣ ಅಂತ ಒಬ್ಬ ಪಡ್ಡೆ ಹೇಳಿದರೆ, ಮತ್ತೊಬ್ಬ, ತಿರುಪತಿ ಲಾಡು ಮಾಡುವವರೆಲ್ಲಾ ಕ್ರಿಶ್ಚಿಯನ್ನರೇ ಅಂತೆ, ಅಂತ ತಾಳಹಾಕಿದ. ಅದುವರೆಗೂ ಸುಮ್ಮನೇ ಅವರ ಮಾತುಗಳನ್ನು ಕಿವಿಗೆ ಹಾಕಿಕೊಳ್ಳುತ್ತಿದ್ದವನು ತಡೆಯಲಾರದೆ, ಯಾರ್ರಿ ಹೇಳಿದ್ದು ಹಂಗಂತ, ಅದೆಲ್ಲ ಬರೀ ಬುರುಡೆ... ಇಂಥವನ್ನೆಲ್ಲ ಹಬ್ಬಿಸುತ್ತಿರುವವರು ಒಂದು ಪಕ್ಷದ ಬಾಲಂಗೋಚಿ ಪರಿವಾರದವರು... ಎಂದು ಹೇಳುತ್ತಿದ್ದಂತೆ, ನನ್ನ ದನಿಯಲ್ಲಿನ ಸ್ವಲ್ಪ ಗಡಸುತನವನ್ನು ಗುರುತಿಸಿದ ಮೊದಲಿನ ಪಡ್ಡೆ ತಕ್ಷಣವೇ ಜಾಗ ಖಾಲಿ ಮಾಡಿದ, ಏನನ್ನೋ ತನ್ನಲ್ಲೇ ಗೊಣಗಿಕೊಂಡು. ಬೀದಿಮಾರಿಯನ್ನು ಮನಸ್ಸಿನೊಳಕ್ಕೆ ಹೊಕ್ಕಿಸಿಕೊಂಡಿದ್ದಕ್ಕೆ, ಆ ಹಿಂಡಿನ ನಡುವೆ ನನಗೂ ಒಳಗೊಳಗೇ ಒಂದು ಬಗೆ ಅಳುಕು. ಅಷ್ಟೊತ್ತಿಗೆ ಮಳೆಯೂ ಸ್ತಬ್ಧವಾಯಿತು. ಅದೇ ನೆವದಲ್ಲಿ ಅಲ್ಲಿಂದ ಕದಲಿದೆ, ಅಲ್ಲೇ ಉಳಿದ ಹುಡುಗರ ಮುಂದುವರಿದ ಕಲಾಪಕ್ಕೆ ತಲೆಕೆಡಿಸಿಕೊಳ್ಳದೆ.

ಬೆಂಗಳೂರು - ೭೯ **ಬಿ. ರಾಜಣ್ಣ**

'ಹೊಸತು'ವಿನಿಂದ ಸಾಂಪ್ರದಾಯಿಕ ಪೂಜಾ ವಿಧಿ, ವಿಧಾನಗಳ ಚಿತ್ರವೊಂದನ್ನು ನಾನಂತೂ ನಿರೀಕ್ಷಿಸಿರಲಿಲ್ಲ! ಗೆಳೆಯ ಸಾಗ್ಗೆರೆ ರಾಮಸ್ವಾಮಿ ಅವರ 'ಗಂಗೂಬಾಯಿ ಬಿಸ್ಮಿಲ್ಲಾಖಾನ್'ರವರ ಚಿತ್ರ ಸಂತಸ ನೀಡಿತೆಂದು ನಾನು ಹೇಳುವುದೇ ಬೇಡ! ಚಿತ್ರವೇ ಹೇಳುತ್ತದೆ.

ಇನ್ನು ಬಿ. ಶ್ರೀನಿವಾಸ ಅವರ 'ಆಟ ಮುಗಿದು ಹೋಗಿದೆ' ಗೋಲೀಬಾರ್‌ಗಳಲ್ಲಿ ಸತ್ತ ರೈತರನ್ನು ನೆನಪಿಸಿದರೂ ಮಕ್ಕಳಲ್ಲಿನ ಅಪಾಯಕಾರಿ ಸುಪ್ತಪ್ರಜ್ಞೆ ಯಾವ ದಿಕ್ಕಿನಲ್ಲಿ ಹರಿಯುತ್ತಿದೆ ಎನ್ನುವುದನ್ನು ಚೆನ್ನಾಗಿ ರೂಪಿಸಿದೆ. ಸನ್ಮಾನಗಳನ್ನು ಮಾಡಿಸಿಕೊಳ್ಳುವವರೇ ಹಣ ಕೊಟ್ಟು ಮಾಡಿಸಿಕೊಳ್ಳುವವರು ಒಂದೆಡೆಯಾದರೆ, ಸನ್ಮಾನ ಕಾರ್ಯಕ್ರಮದ




ಹೆಸರಲ್ಲಿ ತಮ್ಮ ಜೇಬನ್ನು ದಪ್ಪ ಮಾಡಿಕೊಳ್ಳುವವರದ್ದೇ ಅಧಿಕ ಸಂಖ್ಯೆ. ಡಾ|| ರುದ್ರಯ್ಯ ಬಿ. ಗದಗ ಅವರ 'ಸನ್ಮಾನ ಹೀಗೂ ಆದೀತಾ?' ನಿಜಕ್ಕೂ ಖುಷಿಕೊಟ್ಟಿತು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

*ಕಾಶಿಯಲ್ಲಿ ದಿನನಿತ್ಯದ ಗಂಗೆಯ ಪೂಜೆ 'ಸಾಂಪ್ರದಾಯಿಕ ವಿಧಿ'ಯಾಗಿಲ್ಲ. ಅದು ಕಲಾತ್ಮಕವಾಗಿ ದೇಶದ ರೈತರ ಜೀವನದಿಗೆ ಗೌರವಾರ್ಪಣೆ ಸ್ವರೂಪದ್ದು. - ಸಂ.*

### ಆಸ್ಟ್ರೇಲಿಯಾ – ಒಂದು ನೋಟ

ಹುತ್ತವನ್ನು ಪರ್ವತವಾಗಿ, ಇಲಿಯನ್ನು ಹುಲಿಯಾಗಿ ಚಿತ್ರಿಸಿ ಸುದ್ದಿ ಮಾಡುವ ಮಾಧ್ಯಮಗಳು ಶಿಸ್ತು, ಸಂಯಮಗಳನ್ನು ಅಳವಡಿಸಿಕೊಳ್ಳದೆ ಕಲಿಯಲು, ಗಳಿಸಲು ಹಾಗೂ ನಲಿಯಲು ವಲಸೆ ಹೋಗಿ ಆ ನಾಡಿನ ಕಾನೂನು ಮತ್ತು ವ್ಯವಹಾರಗಳನ್ನು ಗೌರವಿಸಿ ರೂಢಿಸಿಕೊಳ್ಳದೆ ಗೊಂದಲಗಳಲ್ಲಿ ಸಿಕ್ಕಿಕೊಂಡು ನರಳಿದ ವರದಿಗಳಿಂದ ಆಸ್ಟ್ರೇಲಿಯಾದ ಬಗ್ಗೆ ಸಂಶಯಿಸುತ್ತಿರುವಾಗ ಮೂಡಿಬಂದಿರುವ ಮಹಾಂತಯ್ಯ ಎಂ. ಹಿರೇಮಠರವರ ಲೇಖನ ಹಲವಾರು ಅನುಮಾನಗಳನ್ನು ಪರಿಹರಿಸಿದೆ. ಯೂರೋಪ್ ಹಾಗೂ ಏಷ್ಯಾಖಂಡಗಳಿಂದ ಗುಳೆ ಹೋಗಿ ನೆಲೆಸಿದ ಜನರ ಶ್ರಮದ ಫಲವಾಗಿ ಶ್ರೀಮಂತ ದೇಶಗಳ ಸಾಲಿನಲ್ಲಿ ಗುರುತಿಸಿಕೊಂಡಿರುವ ಈ ದ್ವೀಪ ದೇಶವು ಭಾರತೀಯರಿಗೆ ಉತ್ತಮ ಶಿಕ್ಷಣವನ್ನು ಹಾಗೂ ಉದ್ಯೋಗವನ್ನು ನೀಡುತ್ತಿದೆ. ಅವರು ನೀಡಿರುವ ಅವಕಾಶ ಮತ್ತು ಸವಲತ್ತುಗಳನ್ನು ಬಳಸಿಕೊಂಡು ಉತ್ತಮ ನಾಗರಿಕರಾಗಿ ಎರಡೂ ದೇಶಗಳಿಗೆ ಗೌರವ ತರುವುದು ನಮ್ಮ ದೇಶದ ವಿದ್ಯಾರ್ಥಿಗಳಿಗೆ ಮುಖ್ಯವಾಗುತ್ತದೆ ಹೊರತು ಅನಾವಶ್ಯಕ ವ್ಯವಹಾರಗಳಲ್ಲಿ ಅನೈತಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡು ತಂದುಕೊಂಡ ತೊಂದರೆಗಳಿಗೆ ಅನುಕಂಪ ಗಳಿಸುವ ತಂತ್ರಗಳಲ್ಲಿ ಭಾಗಿಯಾಗುವುದು ಹಿತವಾದ ನಡವಳಿಕೆಗಳಲ್ಲ.

ಮೈಸೂರು **ನರೇಂದ್ರ ಸಿರಕಜೆ**

### ಪ್ರತಿಕ್ರಿಯೆ

ಜಿ. ಕೆ. ಗೋವಿಂದರಾಯರ ಲೇಖನ ಈ ರಾಜ್ಯದ ಪ್ರಾಜ್ಞರ ಪ್ರಾತಿನಿಧಿಕ ಆಶಯವಾಗಿದೆ. ಎಲ್ಲಾ ವಿ.ವಿ.ಗಳ ಅಧ್ಯಾಪಕರ ಸಂಘಗಳೂ ವಿಶ್ವವಿದ್ಯಾನಿಲಯಗಳೂ ಇಂಥ ವಿಪರೀತ ನಡೆವಳಿಕೆಗಳಿಗೆ ಪ್ರತಿಕ್ರಿಯಿಸಬೇಕಾಗಿತ್ತು. ಪ್ರಭುತ್ವದ ಆಶಯಗಳಿಗೆ ತಕ್ಕಂತೆ ನಡೆದುಕೊಳ್ಳದವರ ಹೇಳಿಕೆಗಳನ್ನು 'ಉದ್ರೇಕಕಾರಿ' ಎಂದು ವ್ಯಾಖ್ಯಾನಿಸುವುದೇ ಒಂದು ಫ್ಯಾಸಿಸ್ಟ್ ಧೋರಣೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ವಿಶ್ವ ಮಾರುಕಟ್ಟೆಗೆ ಗ್ರಾಹಕ ಮತ್ತು ಪೂರೈಕೆದಾರ ಎರಡೂ ಆಗಲು ಹವಣಿಸುತ್ತಿರುವ ನಮ್ಮ ಶಿಕ್ಷಣ ಕ್ಷೇತ್ರವು, ಪೋಷಣೆಗಾಗಿ ಪ್ರಭುತ್ವದ ಹಂಗಿನಲ್ಲಿ ಇರುವ ದಿನಗಳಿವು. ಪ್ರಜ್ಞಾವಂತ ಅಧ್ಯಾಪಕರ ಸಾಂವಿಧಾನಿಕ ಹಕ್ಕುಗಳನ್ನು ಹತ್ತಿಕ್ಕಿ, ತನ್ನ ಅಘೋಷಿತ ಆಶಯಗಳಿಗೆ ಶಿಕ್ಷಣ ಸಮುದಾಯದ ಮತ್ತು ಸಮಾಜದ ಮೌನ ಒಪ್ಪಿಗೆಯನ್ನು ಪಡೆದುಕೊಳ್ಳಲು ವಿಶ್ವವಿದ್ಯಾನಿಲಯ ಹೊರಟಿರುವಂತೆ ಕಾಣುತ್ತದೆ. ಅಷ್ಟಕ್ಕೂ ಮಹಿಳೆಯರ ಮೇಲಿನ ಹಲ್ಲೆಯನ್ನು ಪ್ರತಿಭಟಿಸುವುದು ನಾಗರಿಕನ ಸಾಂವಿಧಾನಿಕ ಕರ್ತವ್ಯವಷ್ಟೇ...! ಸರ್ಕಾರದ ಸೈದ್ಧಾಂತಿಕ ಆಶಯಗಳಿಗೆ ತಕ್ಕಂತೆ ವರ್ತಿಸುತ್ತಿರುವ ವಿಶ್ವವಿದ್ಯಾನಿಲಯದ ವರ್ತನೆ, ತನ್ನ ಸ್ವಾಯತ್ತತೆಯನ್ನು ಅಡವಿಡುವ ದೈನೇಸಿ ಸ್ಥಿತಿಯನ್ನೂ ಅಧ್ಯಾಪಕ ವರ್ಗದ ಅಸ್ಮಿತೆಯ ಕೊರತೆಯನ್ನೂ ಅನಾವರಣಗೊಳಿಸಿದೆ.

ಮೈಸೂರು **ಸುಮಾ ಎಂಬಾರ್**

### ಚುನಾವಣೆ ಮತ್ತು ಪ್ರಜಾಪ್ರಭುತ್ವ

ಚುನಾವಣೆ, ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ನಿಗದಿತ ಅವಧಿಗೆ ನಡೆಯುವ ಒಂದು ಮುಖ್ಯ ಪ್ರಕ್ರಿಯೆ. ೧೯೭೭ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆ ದೇಶದ ರಾಜಕೀಯ ಇತಿಹಾಸದಲ್ಲಿ ಒಂದು ಮೈಲಿಗಲ್ಲು ಎಂದು ಪರಿಗಣಿಸಬಹುದು. ತುರ್ತು ಪರಿಸ್ಥಿತಿ ಹಿಂತೆಗೆದ ಹಿನ್ನೆಲೆಯಲ್ಲಿ ನಡೆದ ಆ ಚುನಾವಣೆ ವಿರೋಧ ಪಕ್ಷಗಳಿಗೆ ಅಧಿಕಾರ ಚಲಾಯಿಸುವ ಅವಕಾಶವನ್ನು ನೀಡಿತು. ಒಂದು ಆದರ್ಶದ ನೆಲೆಯಲ್ಲಿ ಚುನಾವಣೆಗಳು ಜನತೆಯ ಆಶಯಗಳನ್ನು ಬಿಂಬಿಸುತ್ತವೆಂದು ಹೇಳಲಾಗುತ್ತದೆ. ಆದರೆ, ವಾಸ್ತವದ ನೆಲೆಯಲ್ಲಿ ಚುನಾವಣೆಗಳು ಸ್ವಲ್ಪ

ಆಗಸ್ಟ್ – ೨೦೦೮ ಸಂಚಿಕೆ – ೧

# ಹೆಮ್ಮರ

ಶಾಲಾ ಮಾಸ ಪತ್ರಿಕೆ

ಹೆಮ್ಮರಗಾಲ, ನಂಜನಗೂಡು ತಾ.

[illegible]

ನಾನು ಶಾಲೆ ತಪ್ಪಿಸಿಕೊಳ್ಳುತ್ತೇನೆ!

ನನ್ನ ಊರು ಮಲ್ಲಹಳ್ಳಿ. ನಮ್ಮ ಊರಿನಲ್ಲಿ ನೀರಿನ ಸಮಸ್ಯೆ! ನಾನು ಶಾಲೆಗೆ ರಜೆ ಹಾಕುತ್ತೇನೆ. ಯಾಕೆಂದರೆ ನಮ್ಮ ಊರಿನಲ್ಲಿ ನೀರಿನ ಸಮಸ್ಯೆಯಿದೆಯಲ್ಲ ಅದಕ್ಕೆ. ನಾವು ತೆಂಗಿನ ತೋಟದಿಂದ ನೀರನ್ನು ತರಬೇಕು. ಆ ತೆಂಗಿನ ತೋಟ ಎಷ್ಟು ದೂರ ಇದೆ ಎಂದರೆ ೧ ರಿಂದ ೨ ಕಿಲೋಮೀಟರ್ ನಡೆದುಕೊಂಡು ಹೋಗಬೇಕು. ಆದ್ದರಿಂದ ನಾನು ಅನೇಕ ದಿನ ಶಾಲೆಗೆ ರಜೆ ಹಾಕಿ ಮನೆಗೆ ನೀರು ತರಲು ಹೋಗುತ್ತೇನೆ. ಕೊಳವೆ ಬಾವಿಗಳಿದ್ದರೂ ಉಪಯೋಗವಿಲ್ಲ. ಏಕೆಂದರೆ ಅವುಗಳಲ್ಲಿ ನೀರಿಲ್ಲ. ನಮ್ಮೂರಿನ ರಸ್ತೆಯೂ ಚೆನ್ನಾಗಿಲ್ಲ.

ಜ್ಯೋತಿ ಆರ್
ಗಾಳಿ ಮನೆ
(೬ ಬಿ)

-೧-

ಮಟ್ಟಿಗೆ ಸಂಚಲನವನ್ನುಂಟುಮಾಡಿದರೂ ಗಮನಾರ್ಹ ಸಾಮಾಜಿಕ ಸ್ಥಿತ್ಯಂತರವನ್ನು ಉಂಟುಮಾಡುವುದಿಲ್ಲ.

೧೯೫೦-೬೦ರ ದಶಕಗಳಲ್ಲಿ ದೇಶದ ಪ್ರಗತಿಯ ಬಗ್ಗೆ ಪ್ರಾಮಾಣಿಕ ಕಾಳಜಿ ನಿಷ್ಠೆಗಳುಳ್ಳ ರಾಜಕಾರಣಗಳು ಸರ್ಕಾರದ ನೀತಿಗಳನ್ನು ರೂಪಿಸಿ ಆಡಳಿತವನ್ನು ನಡೆಸುತ್ತಿದ್ದರು. ೧೯೭೦ ಮತ್ತು ೮೦ರ ದಶಕಗಳಲ್ಲಿ ರಾಜಕೀಯ ಕಲುಷಿತಗೊಂಡು ಸಾಮಾಜಿಕ ದುಷ್ಟ ಶಕ್ತಿಗಳು ಮೇಲುಗೈ ಸಾಧಿಸಿದುವು. ಯಾವ ಪಕ್ಷ ತಮ್ಮ ವರ್ಗಹಿತಕ್ಕೆ ಅನುಕೂಲಕರವಾದ ನೀತಿಗಳನ್ನು ರೂಪಿಸುತ್ತದೋ ಅಂತಹ ಪಕ್ಷವನ್ನು ದೇಶದ ಬೃಹತ್ ಕೈಗಾರಿಕೋದ್ಯಮಿಗಳು, ವಾಣಿಜ್ಯ ಸಂಸ್ಥೆಗಳು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಬೆಂಬಲಿಸುತ್ತವೆ.

ಇತ್ತೀಚಿನ ದಿನಗಳಲ್ಲಿ, ವಿವಿಧ ರಾಜಕೀಯ ಪಕ್ಷಗಳು ಚುನಾವಣೆಯ ಬಳಿಕ ಫಲಿತಾಂಶದ ವಿಶ್ಲೇಷಣೆ ನಡೆಸಿ ಜನಾದೇಶ ತಮ್ಮ ಪರ ಎಂದು ವಾದಿಸುವುದು ಹಾಸ್ಯಾಸ್ಪದವಾಗಿದೆ. ಏಕೆಂದರೆ, ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಮತದಾರರು ತಮ್ಮ ಮತಗಳನ್ನು ಮಾರಾಟಕ್ಕೆ ಇಟ್ಟಿದ್ದಾರೆ. ಯಾವ ರಾಜಕೀಯ ಪಕ್ಷ ಅತಿ ಹೆಚ್ಚು ದರ ನಿಗದಿಪಡಿಸುತ್ತದೋ ಮತಗಳು ಆ ಪಕ್ಷದ ಪಾಲಾಗುತ್ತವೆ. ಚುನಾವಣೆಗಳಲ್ಲಿ ಸ್ಪರ್ಧಿಸುವ ಉಮೇದುವಾರರನ್ನು ಗಮನಿಸಿದರೆ, ಆಯ್ಕೆ ಅಷ್ಟೇನೂ ಹೆಚ್ಚಿರುವುದಿಲ್ಲ. ಸಾಮಾನ್ಯ ಜನರ ದೈನಂದಿನ ಸಮಸ್ಯೆಗಳು, ಬೇಡಿಕೆಗಳು ಹಾಗೂ ಬವಣೆ ಚುನಾಯಿತ ಪ್ರತಿನಿಧಿಗಳ ಗಮನಕ್ಕೆ ಬರುವುದೇ ಇಲ್ಲ. ಚುನಾವಣೆಗಳ ಬಳಿಕ ಆಯ್ಕೆಯಾದ ಜನಪ್ರತಿನಿಧಿಗಳ ಆದ್ಯತೆಗಳು ಬದಲಾಗುತ್ತವೆ.

ಚುನಾವಣೆಗಳು ಪರಿಣಾಮಕಾರಿಯಾದ ಬದಲಾವಣೆಗಳನ್ನು ತರುವಂತಾಗಬೇಕಾದರೆ ಮತದಾರರು ಎಚ್ಚೆತ್ತುಕೊಳ್ಳಬೇಕು. ಮತ ಯಾಚಿಸಿ ಬರುವ ಅಭ್ಯರ್ಥಿಗಳ ಮೇಲೆ ಜನರ ಹಾಗೂ ಕ್ಷೇತ್ರದ ಸಮಸ್ಯೆಗಳನ್ನು ಬಗೆಹರಿಸುವಂತೆ ಒತ್ತಡ ಹೇರಬೇಕು. ಅವರು ನೀಡುವ ಆಮಿಷಗಳಿಗೆ ಬಲಿಯಾಗಬಾರದು.

ಚಿಕ್ಕಲ್ಲಸಂದ್ರ, ಬೆಂಗಳೂರು — *ಶಂಕರನಾರಾಯಣ*

## ಪ್ರತಿರೋಧದ ದನಿ ಅಡಗುವ ಮುನ್ನ

ಪ್ರತಿರೋಧದ ದನಿಗಳನ್ನು ಅಡಗಿಸಲು ಪ್ರಭುತ್ವ ಹಿಂಜರಿದರೂ, ಆಳುವ ವರ್ಗಗಳನ್ನು ಪ್ರತಿನಿಧಿಸುವ ಪಟ್ಟಭದ್ರ ಹಿತಾಸಕ್ತಿಗಳು ಈ ನಿಟ್ಟಿನಲ್ಲಿ ಒಂದು ವ್ಯವಸ್ಥಿತ ಜಾಲವನ್ನೇ ಹೆಣೆದಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ರಾಜಕೀಯ ಕ್ಷೇತ್ರದ ವಾಣಿಜ್ಯೀಕರಣ ಮತ್ತು ಕಾರ್ಪೊರೇಟ್ ಉದ್ಯಮದ ರಾಜಕಾರಣದ ಪರಿಣಾಮವಾಗಿ, ನೈಸರ್ಗಿಕ ಸಂಪತ್ತನ್ನು ಲೂಟಿ ಮಾಡುವ ಪ್ರಕ್ರಿಯೆ ಮುಕ್ತವಾಗಿ ನಡೆಯುತ್ತಿದೆ. ಪ್ರತಿಯೊಂದು ವಾಣಿಜ್ಯ-ಉದ್ಯಮ-ಔದ್ಯೋಗಿಕ ಕ್ಷೇತ್ರದಲ್ಲೂ ಮಾಫಿಯಾಗಳ ಪ್ರಭಾವ ಹೆಚ್ಚಾಗುತ್ತಿದ್ದು, ಆಳ್ವಿಕರಿಗೆ ಬಂಡವಾಳ ಒದಗಿಸುವ ಎಲ್ಲ ಮಾರ್ಗಗಳ ರಕ್ಷಣೆಯ ಹೊಣೆಗಾರಿಕೆಯನ್ನೂ ಮಾಫಿಯಾಗಳಿಗೆ ನೀಡಲಾಗಿದೆ.

ಈ ಅನಾಹುತಗಳ ಸಾಲಿಗೆ ಸೇರ್ಪಡೆಯಾಗಿರುವ ಮತ್ತೊಂದು ಧಂಧೆ – ಮರಳು ಸಾಗಾಣಿಕೆಯಾಗಿದೆ. ಗ್ರಾನೈಟ್ ಸಂಸ್ಕೃತಿಗಿಂತಲೂ ಹೆಚ್ಚು ಅಪಾಯಕಾರಿಯಾದ ಮರಳು ಗಣಿಗಾರಿಕೆ ಕಾವೇರಿ, ಕಪಿಲಾ, ಕಬಿನಿ, ತುಂಗಾ, ಭದ್ರಾ ನದಿಗಳ ತೀರದಲ್ಲಿರುವ ಮರಳನ್ನು ನುಂಗಿ ಹಾಕುತ್ತಿದ್ದು, ನದಿತೀರಗಳು ಗಣಿಗಾರಿಕೆಯ ತಾಣಗಳಾಗಿವೆ. ಗೃಹ ನಿರ್ಮಾಣಕ್ಕೆ ಮರಳಿನ ಅವಶ್ಯಕತೆ ಇರುವುದಾದರೂ, ಸರ್ಕಾರದ ನಿಬಂಧನೆಗಳನ್ನು ಮೀರಿ ಮರಳು ಸಾಗಾಣಿಕೆ ನಡೆಯುತ್ತಿದ್ದು, ನಿಯಮವನ್ನು ಉಲ್ಲಂಘಿಸಿ ಅಕ್ರಮ ಧಂಧೆ ನಡೆಯುತ್ತಿದೆ. ಕಪಿಲಾ ನದಿ ತೀರದಲ್ಲಿನ ಮರಳು ಗಣಿಗಾರಿಕೆಯನ್ನು ಮುಂದುವರೆಯಲು ಬಿಟ್ಟರೆ ಅನೇಕ ಗ್ರಾಮಗಳು, ಪಟ್ಟಣಗಳು ಮುಳುಗಿಹೋಗುವ ಆತಂಕವನ್ನು ಜನತೆ ಎದುರಿಸುತ್ತಿದ್ದಾರೆ. ಸ್ಥಳೀಯ ಜನತೆಯ ಪ್ರತಿರೋಧದ ನಡುವೆಯೂ ವ್ಯವಸ್ಥಿತವಾಗಿ ನಡೆಯುತ್ತಿರುವ ಈ ಧಂಧೆಯ ಹಿಂದೆ ಮಾಫಿಯಾ ಮಾತ್ರವಲ್ಲ, ರಾಜಕೀಯ ಹಿತಾಸಕ್ತಿಗಳೂ ಅಡಕವಾಗಿರುವುದು ವರದಿಯಾಗಿದೆ. ಅಧಿಕೃತ ಪರವಾನಗಿ ಪಡೆದು ಗಣಿಗಾರಿಕೆ ನಡೆಸುವ ಉದ್ಯಮಿಗಳೇ ನಿಯಮಕ್ಕೆ ವಿರುದ್ಧವಾಗಿ ಯಂತ್ರಗಳನ್ನು ಉಪಯೋಗಿಸಿ ನದಿದಡದಲ್ಲಿ ಕಂದಕಗಳನ್ನು ನಿರ್ಮಿಸಿರುವುದು ಅಪಾಯದ ಸೂಚನೆಯಾಗಿದೆ.

ಇತ್ತೀಚಿನ ದಿನಗಳಲ್ಲಿ ಹೋರಾಟದಲ್ಲಿ ತೊಡಗಿರುವವರ ಮೇಲೆ ಮಾರಣಾಂತಿಕ ಹಲ್ಲೆ ನಡೆಯುತ್ತಿರುವುದು, ಮಾನಸಿಕ ಕಿರುಕುಳ ನೀಡುತ್ತಿರುವುದು ಕಂಡುಬರುತ್ತಿದೆ. ನಂಜನಗೂಡಿನಲ್ಲಿ ಡಾ|| ಪೂರ್ಣಾನಂದ ಎಂಬ ವ್ಯಕ್ತಿಯನ್ನು ಗಡಿಪಾರು ಮಾಡುವಂತೆ ಮೈಸೂರು ಜಿಲ್ಲಾ ಪಂಚಾಯತಿಯ ಸಭೆಯಲ್ಲಿ ಜನಪ್ರತಿನಿಧಿಗಳು (?) ತೀರ್ಮಾನಿಸಿದ್ದರು. ಆತನನ್ನು ಬೇರೊಂದು ಊರಿಗೆ ವರ್ಗಾವಣೆ ಮಾಡಲಾಗಿದೆ. ಸರ್ಕಾರಿ ನೌಕರನಾದ್ದರಿಂದ ಆತ ಯಾವುದೇ ಹೋರಾಟಗಳಲ್ಲಿ ಭಾಗವಹಿಸುವಂತಿಲ್ಲ ಎಂಬ ಕಾರಣಕ್ಕಾಗಿ ಆತನ ಮೇಲೆ ಕ್ರಮ ಕೈಗೊಳ್ಳಲಾಗಿದೆ. ಇತ್ತೀಚೆಗೆ ಅಕ್ರಮ ಮರಳು ಗಣಿಗಾರಿಕೆಯನ್ನು ವಿರೋಧಿಸಿ ಹೋರಾಡುತ್ತಿದ್ದ ಬೊಕ್ಕಳ್ಳಿ ನಂಜುಂಡಸ್ವಾಮಿ ಅವರ ಮೇಲೆ ಮಾರಣಾಂತಿಕ ಹಲ್ಲೆ ನಡೆದಿದೆ. ದುಷ್ಕರ್ಮಿಗಳು ಆತನ ಕೈಕಾಲು ಕಟ್ಟಿಹಾಕಿ, ಮೂರು ಗಂಟೆಗಳಿಗೂ ಹೆಚ್ಚು ಕಾಲ ಚಿತ್ರಹಿಂಸೆ ನೀಡಿದ್ದಾರೆ. ಶಿವಮೊಗ್ಗದಲ್ಲಿ ಪಿಯುಸಿಎಲ್ ಸದಸ್ಯರಾದ ಕೃಷ್ಣಪ್ಪ ಎಂಬುವವರನ್ನೂ ಅಲ್ಲಿನ ಜಿಲ್ಲಾ ಪಂಚಾಯಿತಿ ಗಡಿಪಾರು ಮಾಡಲು ನಿರ್ಣಯ ಕೈಗೊಂಡಿದೆ. ಮಂಗಳೂರಿನ ಅಧ್ಯಾಪಕರಾದ ಪಟ್ಟಾಭಿ ಸೋಮಯಾಜಿಯವರು ಸಾಂಸ್ಕೃತಿಕ ಆರಕ್ಷಕರ ದಾಳಿಯನ್ನು ಖಂಡಿಸಿದ್ದಕ್ಕಾಗಿ ಅವರ ಮೇಲೆ ಸಂಸ್ಥೆಯೇ ಕ್ರಮ ಕೈಗೊಳ್ಳಲು ಮುಂದಾಗಿದೆ. ಸಾರಾಯಿ ವಿರುದ್ಧ ತಮ್ಮ ಜೀವ ಪಣ ಇಟ್ಟು ಹೋರಾಡಿದ ಎ. ಟಿ. ಬಾಬು ಹಾಡುಹಗಲಲ್ಲೇ ಕೊಲೆಯಾದರು. ಇವೆಲ್ಲವೂ ವರದಿಯಾಗಿರುವ ಪ್ರಕರಣಗಳಷ್ಟೆ.

ನಾಗರಿಕ ಸಮಾಜದಲ್ಲಿ ಸಾಂಘಿಕ ಅಸ್ಮಿತೆಗಳಿಗೆ ಮಾತ್ರ ಮನ್ನಣೆ, ಗೌರವ ದೊರೆಯುವುದಾದರೆ, ವಿಶ್ವಮಾನವ ಪರಂಪರೆಯನ್ನು ಸಾರುವ ನಾಡಿನಲ್ಲಿ ಮಾನವೀಯತೆಗೆ ಅವಕಾಶ ಮೂಡುವುದೇ? ಆಳುವ ವರ್ಗಗಳಾಗಲಿ, ಪ್ರಭುತ್ವವಾಗಲಿ ಈ ಬಗ್ಗೆ ಕಾಳಜಿ ವಹಿಸದಿರುವುದು ಸಹಜ, ಸ್ವಾಭಾವಿಕ. ಏಕೆಂದರೆ ಇಂತಹ ಹೋರಾಟಗಳು ವ್ಯವಸ್ಥೆಯ ವಿರುದ್ಧವಾಗಿರುತ್ತವೆ. ಆದರೆ ಸಾರ್ವಜನಿಕರ ಸಾಮಾಜಿಕ ಪ್ರಜ್ಞೆ ಏನಾಗಿದೆ? ಪ್ರತಿರೋಧದ ದನಿಗಳೇ ಅಡಗಿಹೋಗಿವೆಯೆ ಅಥವಾ ಸಮಷ್ಟಿ ಪ್ರಜ್ಞೆ ನಶಿಸುತ್ತಿರುವುದೆ? ಪ್ರತಿರೋಧದ ದನಿಗಳು ಸಂಪೂರ್ಣವಾಗಿ ಅಡಗುವ ಮುನ್ನ ಎಚ್ಚೆತ್ತುಕೊಳ್ಳುವುದು ತುರ್ತು ಅಗತ್ಯ.

ಮೈಸೂರು — ನಾ. ದಿವಾಕರ

---

೧೯೫೪-೧೯೬೮ರ ಅವಧಿಯಲ್ಲಿ ಪ್ರೊ|| ಎಂ. ವಿ. ಸೀತಾರಾಮಯ್ಯ ಅವರ ವಿದ್ಯಾರ್ಥಿಗಳಾಗಿದ್ದವರು ತಮ್ಮ ಸಂಪರ್ಕ ವಿಳಾಸವನ್ನು **ಕಾರ್ಯದರ್ಶಿ, ಎಂ.ವಿ.ಸೀ. ಶತಮಾನೋತ್ಸವ ಸಮಿತಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯ ಈ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ. ಫೋನ್ : ೨೬೬೧೫೪೭೭, ೨೬೬೭೬೭೭೩ ಅಥವಾ ಇ-ಮೇಲ್ :** bmsritrust @gmail.com**ನಲ್ಲಿ ದಾಖಲಿಸಬೇಕಾಗಿ ವಿನಂತಿ.** ಸೆಪ್ಟೆಂಬರ್ ೬ರಿಂದ ಎಂ.ವಿ.ಸೀ.ಯವರ ಶತಮಾನೋತ್ಸವ ವರ್ಷ ಆರಂಭವಾಗಿದ್ದು ನಾಡಿನಾದ್ಯಂತ ಇಡೀ ವರ್ಷ ನಡೆಸುವ ಯೋಜನೆಗಳಲ್ಲಿ ಎಂ.ವಿ.ಸೀ. ಅವರ ಶಿಷ್ಯರು-ಅಭಿಮಾನಿಗಳು ಸಕ್ರಿಯವಾಗಿ ಪಾಲ್ಗೊಳ್ಳಬೇಕಾಗಿ ಕೋರಲಾಗಿದೆ.

*ಡಾ|| ಪಿ. ವಿ. ನಾರಾಯಣ*
ಕಾರ್ಯಾಧ್ಯಕ್ಷರು

---

### ಶ್ರೀಮತಿ ಯು. ಎಸ್. ಸಾಕಮ್ಮನವರ ನೆನಪಿನ ಬಹುಮಾನ

ಸಹ ಸಂಪಾದಕರಾಗಿರುವುದರಿಂದ ಬಹುಮಾನವನ್ನು ತಾವು ಸ್ವೀಕರಿಸುವುದಿಲ್ಲವೆಂದು ಡಾ|| ಎನ್. ಗಾಯತ್ರಿ ಹೇಳಿದ್ದಾರೆ. ೨೦೦೭-೦೮ರ ಬಹುಮಾನವನ್ನು ಶ್ರೀಮತಿ ಕೆ. ನೀಲಾ ಅವರಿಗೆ ಮತ್ತು ೨೦೦೭-೦೮ರಲ್ಲಿ ಡಾ|| ವಿನಯಾ : ಕಾಳೇಗೌಡ ನಾಗವಾರರ ಕಾವ್ಯ : ಒಂದು ಬದಲೀ ಓದು (ಸೆಪ್ಟೆಂಬರ್ ೨೦೦೮) ಮತ್ತು ಡಾ|| ಗೀತಾ ಕೃಷ್ಣಮೂರ್ತಿ : ಉದ್ಯೋಗ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ (ಜನವರಿ ೨೦೦೯) ಅವರಿಗೆ ಬಹುಮಾನ ನೀಡಲಾಗಿದೆ. ಲೇಖನಗಳನ್ನು ಆಯ್ದು ಕೊಟ್ಟ ತೀರ್ಪುಗಾರರಿಗೆ 'ಹೊಸತು' ಕೃತಜ್ಞತೆ ಸಲ್ಲಿಸುತ್ತದೆ.

**- ಸಂಪಾದಕ**

# ಸಾಮ್ರಾಜ್ಯ ಹಾಗೂ ರೋಬಾಟ್‌ಗಳು

ಕೆಲವು ದಿನಗಳ ಹಿಂದೆ ಅಮೆರಿಕಾದ ಒಂದು ಯೋಜನೆ ನನಗೆ ತಿಳಿಯಿತು. ಇಡೀ ಜಗತ್ತಿನ ಮೇಲೆ ತನ್ನ ವೈಮಾನಿಕ ಧಾಳಿಯ ಶ್ರೇಷ್ಠತೆ, ಸಾರ್ವಭೌಮತೆಯನ್ನು ಪ್ರತಿಷ್ಠಾಪಿಸಲು ಅದು ಯೋಚಿಸಿದೆ. ೨೦೨೦ನೇ ಇಸವಿಯಲ್ಲಿ ಅದು ತನ್ನ ಮಿಲಿಟರಿಯಲ್ಲಿ ಒಂದು ಸಾವಿರಕ್ಕೂ ಮಿಗಿಲಾದ ಹೊಸ ಪೀಳಿಗೆಯ ಎಫ್ ೨೨, ಎಫ್ ೩೫ ಮಾಡೆಲ್ ಫೈಟರ್ ವಿಮಾನಗಳನ್ನು ತಯಾರುಮಾಡಲಿದೆ. ಈಗಾಗಲೇ ಅದರ ಬಳಿ ೨೫೦೦ ಯುದ್ಧ ವಿಮಾನಗಳಿವೆ ! ಇನ್ನು ಕೇವಲ ೨೦ ವರ್ಷಗಳಲ್ಲಿ ಅದರ ಒಂದೊಂದು ಯುದ್ಧ ವಿಮಾನವನ್ನೂ ರೋಬಾಟ್‌ಗಳು ನಿಯಂತ್ರಿಸುತ್ತವಂತೆ. ರೋಬಾಟ್ ನಿಯಂತ್ರಿತ ಯುದ್ಧ ವಿಮಾನಗಳು !!

ಅಮೆರಿಕಾದ ಶಾಸಕರ ಭಾರಿ ಬಹುಮತವಿಲ್ಲದೆಯೇ ಆ ಸರ್ಕಾರ ತನ್ನ ಮಿಲಿಟರಿಗಾಗಿ ಬಜೆಟ್‌ನಲ್ಲಿ ದೊಡ್ಡ ಪ್ರಮಾಣದ ಅನುದಾನ ಪಡೆಯಲು ಸಾಧ್ಯವಿಲ್ಲ. ಆ ದೇಶದ ಪ್ರತಿಯೊಂದು ರಾಜ್ಯದಲ್ಲೂ ಒಂದಲ್ಲ ಒಂದು ರೀತಿಯ ರಕ್ಷಣಾ ಇಲಾಖೆಯ ಉದ್ಯಮಗಳು ಇವೆ. ಇವುಗಳನ್ನೇ ಆಧರಿಸಿ ಅಲ್ಲಿಯ ಪ್ರಜೆಗಳು ಉದ್ಯೋಗವನ್ನು ಗಳಿಸುತ್ತಾರೆ !

ಜಾಗತಿಕ ಮಟ್ಟದಲ್ಲಿ ಒಂದೇ ಸಮನೆ ಏರುತ್ತಿರುವ ಮಿಲಿಟರಿ ವೆಚ್ಚಗಳು ಕಳೆದ ೧೦ ವರ್ಷಗಳಲ್ಲಿ ದುಪ್ಪಟ್ಟಾಗಿವೆ. ಜಗತ್ತಿನಲ್ಲಿ ಈ ವೆಚ್ಚಕ್ಕಿಂತ ಮಿಗಿಲಾಗಿ ತೂಗಿಸಬೇಕಾದಂಥ ಅಪಾಯಗಳು, ತುರ್ತು ನಿಗಾ ವಹಿಸಬೇಕಾದಂಥ ಸಂಗತಿಗಳು ಇಲ್ಲವೇ ಇಲ್ಲ ಎನ್ನುವ ಹಾಗೆ ಈ ಮಿಲಿಟರಿ ವೆಚ್ಚ ಪ್ರತಿ ದೇಶದ ಬಜೆಟ್‌ನ ಸಿಂಹಪಾಲನ್ನು ದೋಚುತ್ತವೆ. ಈ ಹೊತ್ತಿನಲ್ಲಿ ಅತ್ಯಂತ ಲಾಭದಾಯಕ ಉದ್ದಿಮೆ ಎಂದರೆ ಶಸ್ತ್ರಾಸ್ತ್ರಗಳ ಪೂರೈಕೆ.

೨೦೦೮ನೇ ಸಾಲಿಗೆ ಈ ಜಗತ್ತು ರಕ್ಷಣಾ ವೆಚ್ಚಗಳಿಗಾಗಿಯೇ ೧.೫ ಟ್ರಿಲಿಯನ್ ಡಾಲರ್‌ಗಳನ್ನು ಮೀಸಲಿಟ್ಟಿತ್ತು. ಇದರಲ್ಲಿ ಕೇವಲ ಅಮೆರಿಕಾದ ರಕ್ಷಣಾ ವೆಚ್ಚವೇ ಶೇ. ೪೨ರಷ್ಟು, ಎಂದರೆ ೬೦೭ ಬಿಲಿಯನ್ ಡಾಲರ್‌ಗಳು ! ಇದರಲ್ಲಿ ಯುದ್ಧಕಾಲದ ವೆಚ್ಚ ಸೇರಿಲ್ಲ. ಇದೇ ವೇಳೆಯಲ್ಲಿ ಜಗತ್ತಿನಲ್ಲಿ ಉಣ್ಣಲು ಅನ್ನವಿಲ್ಲದೇ ಹಸಿದು ಕಂಗಲಾಗಿರುವ ಜನತೆಯ ಸಂಖ್ಯೆ ಒಂದು ಬಿಲಿಯನ್ !

ಕೆಲವು ದಿನಗಳ ಹಿಂದೆ ಬಂದಿರುವ ವರದಿಯ ಮೇರೆಗೆ ಆಗಸ್ಟ್ ೨೦೦೮ರಲ್ಲಿ ಅಮೆರಿಕಾ ತನ್ನ ದೂರ ನಿಯಂತ್ರಿತ (ಟೆಲಿ ಗೈಡೆಡ್) ಹೆಲಿಕಾಪ್ಟರ್‌ಗಳ ಶೌರ್ಯವನ್ನು ಪ್ರದರ್ಶಿಸಿತು. ಇದರಲ್ಲಿ ಸುಮಾರು ೨೫೦೦ ರೋಬಾಟ್ ಪದಾತಿ ಸೈನಿಕರಿದ್ದು, ಇವುಗಳನ್ನು ಯುದ್ಧವಲಯಕ್ಕೆ ಕಳಿಸಲಾಗಿತ್ತು.

ಈ ರೋಬಾಟ್‌ಗಳನ್ನು ಉತ್ಪಾದಿಸುವ ಕಂಪನಿಗಳ ಪ್ರಕಾರ ಅವರ ಈ ಹೊಸ ಯುದ್ಧ ತಂತ್ರ ಸಾಧನೆಗಳಿಂದ ಯುದ್ಧಗಳ ಸ್ವರೂಪಗಳನ್ನೇ ಬದಲಾಯಿಸಬಹುದಂತೆ. ೨೦೦೩ರಲ್ಲಿ ಅಮೆರಿಕಾ ಬಳಿ ರೋಬಾಟ್ ಪದಾತಿಗಳಾಗಲೀ, ವಿಮಾನಗಳಾಗಲೀ ಇರಲಿಲ್ಲ. ಈಗ ಅವರ ಶಸ್ತ್ರಾಗಾರದಲ್ಲಿ ೧೦,೦೦೦ ರೋಬಾಟ್ ಚಾಲಿತ ಜೀಪು, ಟ್ಯಾಂಕ್‌ಗಳಿವೆ. ೭,೦೦೦ ರೋಬಾಟ್ ಚಾಲಿತ ವಿಮಾನಗಳು, ಹೆಲಿಕಾಪ್ಟರ್‌ಗಳಿವೆ. ಕಾಗೆಯಷ್ಟು ಪುಟ್ಟ ಪುಟ್ಟ ವಿಮಾನಗಳಿಂದ ಹಿಡಿದು ದೈತ್ಯಾಕಾರದ ಗ್ಲೋಬಲ್ ಹಾಕ್‌ಗಳಿವೆ. ೩೫ ಗಂಟೆ ಗಳಷ್ಟು ಕಾಲ ಆಕಾಶದಲ್ಲಿ, ಅತಿ ಎತ್ತರದಲ್ಲಿ ಹಾರಾಡುವ ಸಾಮರ್ಥ್ಯವನ್ನು ಅವು ಪಡೆದಿವೆ.

ಅಮೆರಿಕಾ ಈ ರೀತಿ ಬಿಲಿಯನ್ ಗಟ್ಟಲೆ ಡಾಲರ್‌ಗಳನ್ನು ಕೊಲೆಗಡುಕ ತಂತ್ರ-ಸಾಧನೆಗಳ ತಯಾರಿಕೆಯಲ್ಲಿ ತೊಡಗಿಸಿಕೊಂಡಿದ್ದರೆ, ಅವರ ಅಧ್ಯಕ್ಷ ಅವರದೇ ದೇಶದ ೫೦ ಮಿಲಿಯನ್ ಪ್ರಜೆಗಳ ಮೂಲಭೂತ ಹಕ್ಕಾದ ಆರೋಗ್ಯ ಕುರಿತು ಬಕೆಟ್‌ಗಟ್ಟಲೆ ಬೆವರು ಸುರಿಸುತ್ತಾನೆ !

ಗೊಂದಲಮಯ ಅಮೆರಿಕಾ ಸರ್ಕಾರದಲ್ಲಿ ಅದರ ಅಧ್ಯಕ್ಷ ಪ್ರಜೆಗಳ ಆರೋಗ್ಯ ಇಲಾಖೆಯ ಸುಧಾರಣೆಯ ಬಗ್ಗೆ ಮಾತನಾಡುತ್ತಲೇ ಯುದ್ಧ ಭೀತಿಯ ಬಗ್ಗೆಯೂ ದಿಗಿಲು ಮೂಡಿಸುತ್ತಾನೆ.

ಪ್ರತಿಬಾರಿ ಜನತೆಯ ಆರೋಗ್ಯ ಸುಧಾರಣಾ ಯೋಜನೆಗಳನ್ನು ಕೈಗೆತ್ತಿಗೊಳ್ಳಬೇಕಾದಾಗಲೆಲ್ಲ ಸುತ್ತ ಮುತ್ತಲಿನ 'ದುಷ್ಟ ಹಿತಾಸಕ್ತಿ'ಗಳು ಕೂಗೆಬ್ಬಿಸಿ ಅವರ ಪ್ರಯತ್ನಗಳನ್ನೆಲ್ಲ ಮಣ್ಣುಪಾಲು ಮಾಡಿ ಅಮೆರಿಕಾ ಜನತೆಯನ್ನು ಬೆಚ್ಚಿಬೀಳುವ ಹಾಗೆ ಮಾಡುತ್ತವಂತೆ !

ಸತ್ಯ ಸಂಗತಿಯೇನು ? ಅವರದೇ ವರದಿಗಳ ಪ್ರಕಾರ – ೮೦೦೦ ಜನ ನಿರುದ್ಯೋಗಿಗಳು ಲಾಸ್ ಏಂಜಲೀಸ್‌ನ ಸ್ಟೇಡಿಯಮ್‌ನಲ್ಲಿ ವೈದ್ಯಕೀಯ ಸಲಹೆ, ಸಹಾಯಗಳಿಗಾಗಿ ಏಕೆ ಬಂದಿದ್ದರು ? - ಹಿಂದುಳಿದ ರಾಷ್ಟ್ರಗಳ (ಮೂರನೆಯ ವಿಶ್ವದ) ಸೇವೆಗಾಗಿರುವ ಈ ವೈದ್ಯಕೀಯ ನೆರವಿಗಾಗಿ ಫ್ರೀ ಕ್ಲಿನಿಕ್‌ಗಳಿಗೆ ಆ ಜನಗಳು ನೂರಾರು ಮೈಲಿಗಳ ದೂರದಿಂದ ಬಂದು, ರಾತ್ರಿಯಿಡೀ ಸ್ಟೇಡಿಯಮ್‌ನಲ್ಲಿ ಕಾಯ್ದು ಕುಳಿತಿದ್ದರು. ಉಚಿತ ವೈದ್ಯಕೀಯ ಅವರಿಗೆ ಬೇಕು.

ಕಾಲೇಜು ಶಿಕ್ಷಣ ಮುಗಿಸಿದ್ದ ಅಮೆರಿಕಾದ ಕಪ್ಪು ಮಹಿಳೆಯೊಬ್ಬಳು ಹೇಳುತ್ತಾಳೆ:

''ಸೋಷಲಿಸ್ಟೋ ಅಲ್ಲವೋ ನನಗೆ ಅದು ಮುಖ್ಯ ಅಲ್ಲ. ಇಡೀ ಜಗತ್ತಿನಲ್ಲಿ ಶೋಷಿತ ಜನಕ್ಕೆ ತಿನ್ನಲೂ ಗತಿಯಿಲ್ಲದಿರುವುದು ಇದೊಂದೇ ದೇಶದಲ್ಲಿ!''

ವರದಿಗಳ ಪ್ರಕಾರ ಅಲ್ಲಿ ರಕ್ತಪರೀಕ್ಷೆಗೆ ೫೦೦ ಡಾಲರ್, ದಂತಚಿಕಿತ್ಸೆಗೆ ೧೦೦೦ ಡಾಲರ್ !

ಇಂಥ ದೇಶ ಮತ್ತು ಅದರ ಜನತೆ ಬೇರೆ ದೇಶಗಳಿಗೆ ಏನನ್ನು ತಾನೇ ನೀಡಲು ಸಾಧ್ಯ ?

ಆ ದೇಶದ ಪ್ರಜಾಪ್ರತಿನಿಧಿ ಸಭೆಯ ಮುಖಂಡರು ಅಲ್ಲಿಯ ಮಿಲಿಯನ್‌ಗಟ್ಟಲೆ ಕಪ್ಪು ಜನಗಳ ಹಾಗೂ ಲ್ಯಾಟಿನೋ ಬಡಪಾಯಿಗಳ ವೈದ್ಯಕೀಯ ಭತ್ಯೆಯ ಹಣವನ್ನು ಲೂಟಿ ಹೊಡೆದುಕೊಂಡು ಮರೆಯುತ್ತಿದ್ದಾರೆ. ಆರ್ಥಿಕ ದಿಗ್ಬಂಧಿತ ಪುಟ್ಟ ದೇಶವಾದ ಕ್ಯೂಬಾ ತನ್ನ ಜನತೆಯ ಆರೋಗ್ಯದ ಬಗ್ಗೆ ಯೋಚಿಸುತ್ತದೆ, ಕಾರ್ಯೋನ್ಮುಖವಾಗುತ್ತಿದೆ, ಮೂರನೇ ಜಗತ್ತಿನ ಹಲವಾರು ದೇಶಗಳ ಜೊತೆ ಕೈ ಜೋಡಿಸುತ್ತಿದೆ.

ಒಂದು ವೇಳೆ ಈ ರೋಬಾಟ್‌ಗಳು ಸಾಮ್ರಾಜ್ಯಶಾಹಿ ಜೀವಂತ ಸೈನಿಕರ ಬದಲು ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಮಾರಾಟದ ಸರಕಾಗಿ ಹೋದರೆ ಜಗತ್ತಿನ ಮಾರುಕಟ್ಟೆಗಳಲ್ಲಿ ಈ ಭಯಂಕರ ಸರಕು ಮಾರಾಟವಾಗುವುದನ್ನು ಹೇಗೆ ತಡೆಯುತ್ತೀರಿ ? ಈಗಾಗಲೇ ಭೂಮಿಯಲ್ಲಿರುವ ಎಲ್ಲ ಇಂಧನಗಳನ್ನು ಖಾಲಿ ಗೊಳಿಸುತ್ತಿರುವ ಬೀಡಾಡಿ ಆಟೋಮೊಬೈಲುಗಳ ಹೊಟ್ಟೆಗೆ ಏನು ಸುರಿಯುತ್ತೀರಿ ? ಕೆಲವು ಕಡೆ ಆಹಾರವನ್ನೂ ಇಂಧನವನ್ನಾಗಿ ಪರಿವರ್ತಿಸಲಾಗುತ್ತಿದೆ ! ಇಂಥಾ ಯಂತ್ರ ಪೀಡಿತ ಲೋಕಕ್ಕೆ ರೋಬಾಟುಗಳು ಬರುತ್ತವೆ. ಕೋಟ್ಯಂತರ ಜನಗಳ ಉದ್ಯೋಗವನ್ನು ಕಸಿದುಕೊಳ್ಳುತ್ತವೆ. ನಿರುದ್ಯೋಗಿಗಳನ್ನು ಸೃಷ್ಟಿಸುತ್ತವೆ.

ಹೀಗೂ ಆಗಬಹುದಲ್ಲವೇ : ವಿಜ್ಞಾನಿಗಳು ಅಮೆರಿಕಾ ಸರ್ಕಾರವನ್ನು ನಡೆಸುವ ಶಾಸಕರು, ಮಂತ್ರಿಗಳು, ಅಧ್ಯಕ್ಷರು ಇವರೆಲ್ಲರ ಬದಲಿಗೆ ರೋಬಾಟುಗಳನ್ನೇ ಯಾಕೆ ಕೂರಿಸಬಾರದು ? ಪಾಪ, ಅಧ್ಯಕ್ಷರ ಅಸಹಾಯಕತೆ, ಗೊಂದಲಗಳೂ ನಿವಾರಣೆಯಾಗುತ್ತವೆ, ಅಲ್ಲದೇ ತುಂಬಾ ದುಂದುವೆಚ್ಚವಿಲ್ಲದ ಉತ್ತಮ ಆಡಳಿತವನ್ನು ಕೊಡಲೂ ಸಾಧ್ಯವಾಗುತ್ತದೆ !

*(ಈ ಮೊದಲು ಇದು ಶಿವಮೊಗ್ಗದ 'ಜನ ಹೋರಾಟ'ದಲ್ಲಿ ಪ್ರಕಟವಾಗಿದೆ. - ಸಂ.)*

ಮೂಲ : ಫಿಡೆಲ್ ಕ್ಯಾಸ್ಟ್ರೊ

ಅನುವಾದ : ವಿಜಯವಾಮನ



ಶ್ರೀ ಗಂಗಾಧರ ಬೆಳ್ಳಾರೆ ಅವರ 'ನೆನಪಿಗೊಂದು ಕೌನ್ಸೆಲಿಂಗ್' (ನವಕರ್ನಾಟಕ ಪ್ರಕಾಶನ)

ಕೃತಿಗೆ ಅಕಲಂಕ ಪ್ರತಿಷ್ಠಾನದ ೨೦೦೮ರ 'ಅಕಲಂಕ ಪುಸ್ತಕ ಪ್ರಶಸ್ತಿ' ಗಳಿಸಿದೆ

ಎಂದು ತಿಳಿಸಲು ಹರ್ಷವಾಗುತ್ತದೆ.

ಲೇಖಕರಿಗೆ ನವಕರ್ನಾಟಕದ ಅಭಿನಂದನೆಗಳು ಸಲ್ಲುತ್ತವೆ.



# ಬಂಬು (ಬಾಂಬು)ಗಳ ನಡುವೆ ಒಂದು ಸಿನಿಮಾ ಕತೆ

ಚಿತ್ರ-ಲೇಖನ
**ಜಿ. ಅದ್ವೈತ**

**ಮುಂ**ಬಯಿಯ ಫಿಲ್ಮಿಸ್ತಾನ್ ಸ್ಟುಡಿಯೋದಲ್ಲಿ ಲೈಟಿಂಗ್ ಮುಗಿಸಿ, ನಟರಿಗಾಗಿ ಕಾದು ಕಾದು ಸುಸ್ತಾಗಿ, ಹರಟೆ ಹೊಡೆಯುತ್ತಾ ನಿಂತಿದ್ದೆವು. ನನ್ನ ಗುರುಗಳು (ಛಾಯಾಗ್ರಾಹಕ - ಮಧು ಅಂಬಟ್) ಹೊರಗೆ ಬಂದು, ''ಅದ್ವೈತ್, ಅವರ್ ನೆಕ್ಸ್ಟ್ ಫಿಲ್ಮ್ ವಿಲ್ ಬಿ ಇನ್ ಅಸ್ಸಾಂ. ದ ಷೆಡ್ಯೂಲ್ ಈಸ್ ಫಾರ್ ೨೦ ಡೇಸ್'' ಅಂದರು.

ಕಟ್ ಟೂ.

ಜೋರ್ಹಾಟ್ ವಿಮಾನ ನಿಲ್ದಾಣ, ಅಸ್ಸಾಂ.

ಸಮಯ : ಮಧ್ಯಾಹ್ನ ೨.೩೦. ಸುಡು ಸುಡು ಸೂರ್ಯ ನಮ್ಮನ್ನೇ ದಿಟ್ಟಿಸುತ್ತಾ ನೋಡುತ್ತಿದ್ದ. ನಮ್ಮ ಸಾಮಾನು ಸರಂಜಾಮುಗಳನ್ನು ಜೋರ್ಹಾಟ್‌ನ ವಿಮಾನ ನಿಲ್ದಾಣದಿಂದ ಕಲೆಕ್ಟ್ ಮಾಡಿ ನಿಮಾತಿ ಘಾಟಿನ ಮೂತಿಯಲ್ಲಿ ಬಂದು ನಿಂತೆವು. ಚಿತ್ರೀಕರಣವಿದ್ದದ್ದು ಬ್ರಹ್ಮಪುತ್ರ ನದಿಯ ಆ ದಡದಲ್ಲಿದ್ದ ಮಾಜುಲಿಯಲ್ಲಿ. ಮಾಜುಲಿ ಪ್ರಪಂಚದ ಅತಿ ದೊಡ್ಡ ಜನರು ವಾಸವಾಗಿರುವ ನದಿ ದ್ವೀಪ. ನಿಮಾತಿಯಿಂದ ಮಾಜುಲಿಗೆ ಎರಡೂವರೆ ಘಂಟೆಗಳ ಫೆರ್ರಿ ಪ್ರಯಾಣ. ಫೆರ್ರಿ ಅಂದರೆ ಅಂತಿಂಥದ್ದಲ್ಲ, ಬ್ರಹ್ಮಪುತ್ರ ನದಿಯ ರಭಸವನ್ನು ಎದುರಿಸಲು ತಯಾರಿಸಿದ್ದ ವಿಶೇಷ ಹಡಗು.

ಈಗಾಗಲೇ ಅಸ್ಸಾಂ, ಬ್ರಹ್ಮಪುತ್ರ ಇವೆಲ್ಲವೂ ಒಂದು ರೀತಿಯ ಫ್ಯಾಂಟಸಿಯನ್ನೇ ಕ್ರಿಯೇಟ್ ಮಾಡಿದ್ದರಿಂದ ನನಗೆ ಒಂದು ಥರಾ ರೋಮಾಂಚನ.

ನಮ್ಮ ಯೂನಿಟ್ಟಾಗಿಯೇ ಕಾಯ್ದಿರಿಸಿದ್ದ ಹಡಗು ನಮ್ಮನ್ನು ಬರಮಾಡಿಕೊಳ್ಳಲು ಕಾದು ನಿಂತಿತ್ತು. ನಮ್ಮ ಇಡೀ ಯೂನಿಟ್, ಅಂದರೆ ನಮ್ಮ ನಟರು, ಅವರ ಕಾರುಗಳು, ತಂತ್ರಜ್ಞರು ಮತ್ತು ಅವರ ಕಾರುಗಳು, ಪ್ರೊಡಕ್ಷನ್‌ನ ಕಾರುಗಳು, ಜೆನರೇಟರ್ ಗಾಡಿ. ಅಬ್ಬಬ್ಬಾ, ೧ ತಿಂಗಳ ಶೂಟಿಂಗ್‌ಗೆ ಏನೇನು ಬೇಕೋ ಎಲ್ಲವನ್ನು ಹೊತ್ತು, ಹೊಗೆ ಉಗುಳುತ್ತಾ, ಬ್ರಹ್ಮಪುತ್ರನ ರಭಸದ ಆರ್ಭಟವನ್ನು ಮೆಟ್ಟಿ ಮಾಜುಲಿಗೆ ಹೊರಟೇಬಿಟ್ಟಿತು ಫೆರ್ರಿ.

ಅದ್ಭುತ ಅಂದರೆ ಅಂಡರ್‌ಸ್ಟೇಟ್‌ಮೆಂಟ್ ಆದೀತೇನೊ. ಒಟ್ಟಿನಲ್ಲಿ ನನ್ನ ಜೀವನದ ಎರಡೂವರೆ ಘಂಟೆಯನ್ನು ಬ್ರಹ್ಮಪುತ್ರನಿಗೆ ಅರ್ಪಿಸಿಬಿಟ್ಟಿದ್ದೆ.

ಮಾಜುಲಿಯನ್ನು ತಲುಪಿದೆವು. ಮಾರನೆಯ ದಿನದಿಂದ ಶೂಟಿಂಗ್ ಶುರು. ಉಲ್ಫಾ ತೀವ್ರವಾದಿಗಳ ಬಗ್ಗೆ ಮೊದಲೇ ಎಚ್ಚರಿಕೆ ಇದ್ದುದ್ದರಿಂದ ನಮ್ಮನ್ನೆಲ್ಲ ನಮ್ಮ ನಮ್ಮ ರೂಮುಗಳಲ್ಲಿ ಕೂಡಿಟ್ಟಿದ್ದರು. ಹೊರಗೆ ಹೋಗಲು ಪರವಾನಗಿ ಇರಲಿಲ್ಲ.

ಆಶ್ಚರ್ಯದ ವಿಷಯವೆಂದರೆ ಅಲ್ಲಿ ಬೆಳಗಿನ ಜಾವ ೩.೩೦ಕ್ಕೆ ಸೂರ್ಯೋದಯ ವಾಗುತ್ತಿದ್ದದ್ದು. ಅಲ್ಲಿನ ೭.೩೦ - ೮ ಇಲ್ಲಿನ ೧೦-೧೧ರ ಹಾಗೆ ಇರುತ್ತಿತ್ತು. ಸಾಯಂಕಾಲ ೩.೩೦ - ೪ಕ್ಕೆ ಸೂರ್ಯಾಸ್ತ. ನಮಗೋ ರಾತ್ರಿ ನಿದ್ರೆ ಬರುವುದಿಲ್ಲ, ಬೆಳಗ್ಗೆ ಬೇಗ ಎಚ್ಚರವಾಗೋದೂ ಇಲ್ಲ. ಒಗ್ಗೋದಕ್ಕೆ ೧ ವಾರ ಬೇಕಾಯ್ತು.

ಸಮಯ, ಬೆಳಿಗ್ಗೆ ೪.೩೦. ಶೂಟಿಂಗ್‌ಗೆ ಹೊರಟೆವು. ಆ ರಸ್ತೆಗಳೋ, ಚಂದ್ರನೂ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡು ನಾಚಬೇಕು, ಹಾಗಿದ್ದವು. ರಸ್ತೆಗಳಲ್ಲಿ ಹಳ್ಳಗಳೋ, ಹಳ್ಳಗಳಲ್ಲಿ ರಸ್ತೆಯೋ, ಗೊತ್ತಾಗುತ್ತಿರಲಿಲ್ಲ. ಅಲ್ಲಿನ ಯಾವ ರಸ್ತೆಗಳಿಗೂ ಡಾಂಬರಿಲ್ಲ. ಆ ಪ್ರದೇಶ ವರ್ಷದಲ್ಲಿ ೪ ತಿಂಗಳು ಬ್ರಹ್ಮಪುತ್ರನ ರಭಸವನ್ನು ತಾಳಲಾರದೆ ಅವನಲ್ಲಿ ಮುಳುಗಿಹೋಗಿರುವುದಂತೆ. ಹಾಗಾಗಿ, ಸರ್ಕಾರ ಇಲ್ಲಿಗೆ ಟಾರ್ ಯಾಕೆ ಬೇಕು ಅಂತ ಕೈಕಟ್ಟಿ ಕೂತಿದೆ. ರೂಮ್‌ನಿಂದ ಲೊಕೇಷನ್‌ಗೆ ೮ ಕಿ.ಮೀ. ಅಷ್ಟೆ. ಆದರೆ ಆ ರಸ್ತೆಯಲ್ಲಿ ಕನಿಷ್ಠ ೪೫ ನಿಮಿಷವಾಗುತ್ತಿತ್ತು.

ಎಲ್ಲಾ ಕಡೆ ಬಂಬುಗಳು. ಬಂಬಿನ ಕಾಡುಗಳು. ಬಡತನ, ಆದರೆ ಕಿತ್ತು ತಿನ್ನುವಷ್ಟಲ್ಲ. ಪ್ರತಿಯೊಬ್ಬರೂ ಸ್ವಾವಲಂಬಿಗಳು. ಸಣ್ಣಪುಟ್ಟ ತೋಟ, ಅಥವಾ ಮೀನುಗಾರಿಕೆ ಮಾಡಿಕೊಂಡು ಜೀವನ ಸಾಗಿಸುತ್ತಾರೆ. ಅಲ್ಲಿನ ಯಾವ ಮನೆಗೂ ಸಿಮೆಂಟಿನ ಸ್ಪರ್ಶವಿಲ್ಲ. ಅಲ್ಲಿಯ ಪ್ರತೀ ಮನೆಗೂ ತೆಂಗಿನ ಗರಿಯ ಗೋಡೆ, ತಾರಸಿ; ಅಷ್ಟೆ. ಅಲ್ಲಿನವರಿಗೆ ಮಳೆಯದ್ದೇ ತಲೆನೋವು. ಅಲ್ಲಿನ ಪ್ರತಿಯೊಂದು ಮಗುವಿಗೂ ಗರ್ಭದಲ್ಲೇ ದೋಣಿ ನಡೆಸುವುದರ ಪ್ರವಚನವಾಗಿರುತ್ತಂತೆ. ಅಲ್ಲಿನ ಯಾವ ಮನೆಯೂ ನೆಲಕ್ಕೆ ಮುಟ್ಟುವುದೇ ಇಲ್ಲ. ಮಳೆಯ ಮತ್ತು ಬ್ರಹ್ಮಪುತ್ರನ ಆರ್ಭಟಕ್ಕೆ ಹೆದರಿ ನೆಲದಿಂದ ೪ ಅಡಿ ಎತ್ತರದಲ್ಲೇ ಕಟ್ಟಿರುತ್ತಾರೆ. ನಿಜಕ್ಕೂ ಇದೊಂದು ಅಪರೂಪದ ದೃಶ್ಯ.

ಎಷ್ಟಾದರೂ ಮಹಿಳೆಯರು ರೂಪವತಿಯರೇ ಆಗಿರುತ್ತಾರೆ. ಇನ್ನು ಅಸ್ಸಾಮಿ ಹುಡುಗಿಯರು ಅಂದಮೇಲೆ ಕೇಳಬೇಕೆ! ವಿಚಿತ್ರವೆಂದರೆ, ಮೇಲ್ನೋಟಕ್ಕೆ ಬಡವರಂತೆ ಕಂಡರೂ, ಅವರು ಬಟ್ಟೆ ತೊಡುವಾಗ ಮಾತ್ರ ಅತ್ಯಾಧುನಿಕ, ಮಾಡರ್ನ್ ಸ್ಟೈಲ್ ಅನುಸರಿಸುತ್ತಾರೆ. ಅವರು ಷಾರ್ಟ್ ಟಾಪ್‌ಗಳು ಮತ್ತು ತುಂಡುಬಟ್ಟೆಗಳು, ಪಟ್ಟಣದವರೂ ನಾಚುವಂತಹ ಬಟ್ಟೆ ತೊಡುತ್ತಾರೆ. ಆಶ್ಚರ್ಯವಾಯಿತು, ದುಃಖವೂ ಆಯಿತು, ಮೀಡಿಯಾಗಳ ಪ್ರಭಾವ ಒಂದು



*ತೀವ್ರವಾದಿಗಳು ಪೊಲೀಸರ ಕಣ್ಣು ತಪ್ಪಿಸಿ ಪ್ರಯಾಣಿಸುವ ವಿಧಾನ; ಮಡಿಕೆಗಳು ತುಂಬಿರುವ ದೋಣಿ. ಇದು ಸೆಟ್ ಅಷ್ಟೆ.*

ಇಡೀ ಸಂಸ್ಕೃತಿಯನ್ನೇ ಹೇಗೆ ನಾಶಮಾಡುತ್ತಿದೆ ಎಂಬುದನ್ನು ಕಂಡು.

ಒಂದು ವಾರ ಏನೂ ತೊಂದರೆ ಇಲ್ಲದೆ ನಡೆಯುತ್ತಿದ್ದ ಶೂಟಿಂಗ್‌ಗೆ ಅಚಾನಕ್ಕಾಗಿ ಒಂದು ದಿವಸ ಸಿ.ಆರ್.ಪಿ.ಎಫ್.ನ ೮ ಸೈನಿಕರು ದಿಢೀರನೆ ನುಗ್ಗಿದರು. ನಾವು ಮಾಡುತ್ತಿದ್ದ ಲೊಕೇಷನ್‌ನಿಂದ ಕೇವಲ ೩ ಕಿ.ಮೀ. ದೂರದಲ್ಲಿ ಆಗತಾನೆ ಇಬ್ಬರು ಉಲ್ಫಾ ತೀವ್ರವಾದಿಗಳನ್ನು ಎನ್ಕೌಂಟರ್ ಮಾಡಿ, ಉಳಿದವರನ್ನು ಹುಡುಕುತ್ತಾ ನಮ್ಮ ಬೇಸ್ ಕ್ಯಾಂಪ್‌ಗೆ ಬಂದಿದ್ದರಂತೆ. ಆಗ ತಿಳಿದು ಬಂದದ್ದು, ನಾವು ತಂಗಿದ್ದ ಮಾಜುಲಿ ಹಾಗೂ ನಾವು ಕ್ಯಾಂಪ್ ಹೂಡಿದ್ದ ಜಾಗ ತೀವ್ರವಾದಿಗಳ ಮುಖ್ಯ ಕಾರ್ಯಸ್ಥಾನ ಎಂದು. ಇಲ್ಲಿಂದ ಮುಂದೆ ನಡೆದದ್ದು, ನಾವು ಮಾಡುತ್ತಿದ್ದ ಶೂಟಿಂಗ್‌ನ ರೀಕ್ರಿಯೇಷನ್‌ನಂತೆ ಇತ್ತು.

ಸುಮಾರು ಹೊತ್ತು ಷೂಟಿಂಗ್ ಸ್ಥಗಿತಗೊಳಿಸಿದ್ದರು. ಸಿ.ಆರ್.ಪಿ.ಎಫ್.ನ ಜವಾನರ ಜೊತೆ ಹರಟೆ ಹೊಡೆಯುತ್ತಾ, ಅವರ ಬಂದೂಕುಗಳನ್ನು ಹಿಡಿದು, ನಾವೇ ಜವಾನರಂತೆ ನಿಂತು, ಪೋಸ್ ಕೊಟ್ಟು ಫೋಟೋ ತೆಗೆಸಿಕೊಳ್ಳುತ್ತಿರುವಾಗ ಅವರಲ್ಲೊಬ್ಬ ನನ್ನ ಬಳಿ ಬಂದು, ''ನಿಮ್ಮದು ಬೆಂಗಳೂರಾ!?'' ಎಂದು ಕೇಳಿದ. 'ನನ್ನ ಭಾಷೆ, ನನ್ನ ಊರು ನಮ್ಮವರು' ಎಂಬುವುದು ನನ್ನ ತಲೆಗೆ ಬಡಿದದ್ದು ಆವಾಗಲೇ. ''ಆಹಾ...!! ಕನ್ನಡದವರು ಅಂತ ಕೇಳಿ ಎಷ್ಟು ಸಂತೋಷ ಆಯ್ತು ಗೊತ್ತಾ ಸಾರ್'' ಎಂದ. ಅವನ ಮುಖದಲ್ಲಿ ಸಂತೋಷದಿಂದ ತುಂಬಿದ ಆ ನಗು! ಸರಿ ಆ ಕ್ಷಣದಲ್ಲೇ ಆತ್ಮೀಯರಾಗಿಬಿಟ್ಟಿದ್ವಿ. ನನಗೂ ಹಾಗೇ. ಅಥವಾ ಅದರ ಹತ್ತರಷ್ಟು ಎಂದು ಹೇಳಬೇಕಿತ್ತು ಆದರೆ ಹೇಳಲಿಲ್ಲ, ಯಾಕೋ ಗೊತ್ತಿಲ್ಲ.

ಇದಾದ ನಂತರ ಪ್ರತಿದಿನವೂ ಕೆಲವು ಸಿ.ಆರ್.ಪಿ.ಎಫ್.ನ ಜವಾನರು ಹಾಗೂ ಗುವಹಾಟಿಯಿಂದ ಕರೆಯಿಸಿದ್ದ ೧೨ ಜನ ಫುಲ್ಲಿ ಎಕ್ವಿಪ್ಡ್ ಪ್ರೈವೇಟ್ ಸೆಕ್ಯೂರಿಟಿಯವರು ಸದಾ ನಮ್ಮ ಜೊತೆಗೇ ಇರುತ್ತಿದ್ದರು.

ಬೇರೆ ರಾಜ್ಯದ ಯಾವುದೇ ಪ್ರೀ-ಪೇಯ್ಡ್ ನೆಟ್‌ವರ್ಕ್ ಅಲ್ಲಿ ಕೆಲಸ ಮಾಡುವುದಿಲ್ಲ. ಹೇಗೋ ಕಷ್ಟಪಟ್ಟು ಅಲ್ಲಿನ ಲೋಕಲ್ ಸಿಮ್‌ಕಾರ್ಡ್ ಪಡೆಯುವಲ್ಲಿ ಯಶಸ್ವಿಯಾದೆ.

ಸಮಯ ರಾತ್ರಿ ೮.೩೦. ಒಗೆಯಲು ಕೊಟ್ಟಿದ್ದ ನನ್ನ ಗುರುಗಳ ಬಟ್ಟೆಯನ್ನು ಹಿಂದಿರುಗಿಸಲು, ನಮ್ಮ ಬೇಸ್ ಕ್ಯಾಂಪ್ ಹತ್ತಿರವಿದ್ದ ಅವರ ರೂಮ್‌ಗೆ ಹೋಗಿದ್ದೆ. ಹಿಂದಿರುಗುವಾಗ, ನನ್ನ ಸಿಮ್‌ಕಾರ್ಡ್‌ಗೆ ಹಣ ಪಾವತಿಸಲು ಹತ್ತಿರದ ಮಾರುಕಟ್ಟೆಗೆ ಬಂದೆ. ಹಣ ಪಾವತಿ ಮಾಡಿಕೊಂಡು, ಗಾಡಿಯನ್ನೇರಿ, ಬಹುಶಃ, ೧೦೦ ಮೀಟರ್ ಹೋಗಿದ್ದೆವೋ ಏನೋ, ಗಾಡಿಯನ್ನು ಧಡಕ್ಕನೆ ನಿಲ್ಲಿಸಿ, ಹೊರನೋಡಿದ ಬಿಪುಲ್, ನಮ್ಮ ಗಾಡಿಯ ಡ್ರೈವರ್. ಯಾಕೆಂದು ಗೊತ್ತಾಗಲಿಲ್ಲ, ನಾನೂ ನೋಡಿದೆ. ೨ ಕ್ಷಣ ನನ್ನ ಹೃದಯ ಗಂಟಲಿಗೆ ಬಂದುಬಿಟ್ಟಿತ್ತು. ''ಸಾಬ್, ವಹಾಪೆ ಬಂ ಫಟಾ, ಸಾಬ್'' ಎಂದ ಬಿಪುಲ್. ನಾನು ಹೋಗಿದ್ದ ಅಂಗಡಿಯ ಎದುರು, ಇಬ್ಬರು, ಒಂದು ಬೈಕಿನಲ್ಲಿ ಬಂದು, ದೇಸೀ ಬಾಂಬ್ ಒಂದನ್ನು ಎಸೆದು ಪರಾರಿಯಾಗಿದ್ದರು. ಹೊಟ್ಟೆಯಲ್ಲಿ ಇದ್ದುದ್ದೆಲ್ಲಾ ಒಂದು ಬಾರಿ ಪಲ್ಟಿ ಹೊಡೆಯಿತು.

ಆ ಅಂಗಡಿ ನಾವು ಮಾರನೆಯ ದಿವಸ ಶೂಟ್ ಮಾಡಬೇಕಿದ್ದ ಲೊಕೇಶನ್ ಆಗಿತ್ತು. ಅದು ಕ್ಲೈಮ್ಯಾಕ್ಸ್‌ನ ಪ್ರಿಲ್ಯೂಡ್, ಅದೂ ಸ್ಫೋಟದ ಸನ್ನಿವೇಶವೇ!

ಮಾಜುಲಿ ಅವರ ಮುಖ್ಯ ಕಾರ್ಯಸ್ಥಾನವಾದ್ದರಿಂದ ಅಲ್ಲಿ ಎಂದೂ ಈ ತರಹದ ಘಟನೆ ನಡೆದಿರಲಿಲ್ಲವಂತೆ. ಮೊದಲನೇ ಬಾರಿಗೆ ಮಾಜುಲಿಯಲ್ಲಿ ಬಾಂಬ್ ಸ್ಫೋಟವಾಗಿತ್ತು, ಆ ದಾಳಿ ನಮ್ಮನ್ನು ಹೆದರಿಸಲೆಂದೇ ಮಾಡಿದ್ದು ಎಂದು ನಂತರ ತಿಳಿದುಬಂತು. ನಮ್ಮ ಸಿನಿಮಾದ ಕತೆಯು ಅಸ್ಸಾಂನ ತೀವ್ರವಾದಿಗಳ ಸುತ್ತ ಹೆಣದಿದ್ದರಿಂದ, ನಮಗೆ ವಾರ್ನಿಂಗ್ ಕೊಟ್ಟಿದ್ದರು. ಆದರೆ ಸಿನಿಮಾದ ಕತೆ, ಲೊಕೇಶನ್‌ಗಳ ಮಾಹಿತಿ, ಅವರಿಗೆ ಹೇಗೆ ತಿಳಿಯುತ್ತಿತ್ತು ಎಂಬುದು ನಿಗೂಢವಾಗಿಯೇ ಉಳಿಯಿತು. ಈ ತರಹ ನಮ್ಮ ಲೊಕೇಶನ್‌ಗಳ ಬಗೆಗಿನ ಮಾಹಿತಿ ತಿಳಿದು ದಾಳಿ ಮಾಡಿದ್ದಿದ್ದು, ೨ನೇ ಬಾರಿಗೆ. ಮೊದಲೊಮ್ಮೆ ಹೀಗೆ ನದಿಯ ಮಧ್ಯದಲ್ಲಿ ಶೂಟಿಂಗ್ ಮಾಡುತ್ತಿರುವಾಗ ನಮ್ಮ ಮೇಲೆ ದಾಳಿ ಮಾಡಬೇಕು ಎಂದುಕೊಂಡಿದ್ದರಂತೆ, ಆದರೆ ಅದು ಪೊಲೀಸರಿಗೆ ಹೇಗೋ ತಿಳಿದು, ಅಂದು ವಿಶೇಷ ಸೆಕ್ಯೂರಿಟಿ ಕೊಟ್ಟಿದ್ದರು. ಹಾಗಾಗಿ, ದಾಳಿ ನಡೆಯುವುದು ತಪ್ಪಿತ್ತು.

ಮಾರನೆಯ ದಿವಸವೇ ಕ್ಯಾಂಪ್ ಶಿಫ್ಟ್ ಆಯಿತು, ಜೋರ್ಹಾಟ್‌ಗೆ. ನಿಮಾತಿ ಘಾಟ್‌ನಿಂದ ೨೦ ಕಿ.ಮೀ. ದೂರದಲ್ಲಿದ್ದ ಪೇಟೆ ಅದು.

ಅಲ್ಲಿಗೆ ಹೋಗಿದ್ದೇ ಹೋಗಿದ್ದು, ಶೂಟಿಂಗ್‌ಗೆ ಗ್ರಹಚಾರ ಬಡಿಯಿತು. ಮೊದಲಿಗೆ, ನಟರ ಅನಾರೋಗ್ಯ. ನಂತರ ನಮ್ಮನ್ನು ನೋಡಿ ದಿನವೂ ಸಂತೋಷದಿಂದ ಬಿದ್ದು ಬಿದ್ದು ನಗುತ್ತಲೇ ಸುರಿಯುತ್ತಿದ್ದ ಮಳೆರಾಯ. ಮಳೆಯೆಂದರೆ ಅಂತಿಂಥದ್ದಲ್ಲ,



ಅಸಹ್ಯವಾಗುವಷ್ಟು ಮಳೆ. ಮೊದಲೇ ಟಾರ್ ಇಲ್ಲದ ರಸ್ತೆಗಳು, ಜೊತೆಗೆ ಧೋ ಎಂದು ಸುರಿಯುವ ಮಳೆ. ರಸ್ತೆಯೆಲ್ಲಾ ಕೊಚ್ಚೆ, ಎರಡು ಅಡಿ ನೀರು ನಿಂತಿರುತ್ತಿತ್ತು ರಸ್ತೆಯ ಮೇಲೆ. ಇದೆಲ್ಲದಕ್ಕೆ ಪೂರಕವಾಗಿ, ಪ್ರತಿದಿನವೂ ನಿಮಾತಿ ಘಾಟ್‌ನಲ್ಲೇ ಶೂಟಿಂಗ್. ಅಲ್ಲೋ ರಸ್ತೆಗಳಲ್ಲಿ ಹಳ್ಳಗಳಿಲ್ಲ, ಪುಟ್ಟ ಪುಟ್ಟ ಬೆಟ್ಟಗಳು! ಒಂದು ಬೆಟ್ಟವನ್ನು ಏರಿ ಇಳಿಯುವುದರಲ್ಲಿ ೫೦ ಕ್ಯಾಲೊರೀಸ್ ಸುಡುತ್ತಿತ್ತು. ಅಷ್ಟು ದೊಡ್ಡ ದೊಡ್ಡ ಹಳ್ಳಗಳು. ಎಡಕ್ಕೆ ಬ್ರಹ್ಮಪುತ್ರ, ಬಲಕ್ಕೆ ರಸ್ತೆಯೇ ಇಲ್ಲ. ಇದ್ದ ಪುಟ್ಟ ರಸ್ತೆಯಲ್ಲೇ ಗಾಡಿ ಓಡಿಸಬೇಕು. ಸ್ಟೀರಿಂಗ್ ಎಡಕ್ಕೆ ತಿರುಗಿಸಿದರೆ ಹಿಂದಿನ ಚಕ್ರಗಳು ಬಲಕ್ಕೆ ಜಾರುತ್ತಿದ್ದವು.

ಇವುಗಳ ನಡುವೆ ಊಹಿಸಲಿಕ್ಕೂ ಸಾಧ್ಯವಿಲ್ಲದ ಶೆಡ್ಯೂಲ್. ಹಗಲು ರಾತ್ರಿ ಶೂಟಿಂಗ್ ಮಾಡಿ, ನಿಲ್ಲಲೂ ತ್ರಾಣವಿಲ್ಲದೆ, ಗಾಡಿ ಹತ್ತಿದರೆ ನಮ್ಮ ಕ್ಯಾಂಪನ್ನು ತಲುಪುತ್ತಿದ್ದುದು ೨ -೩ ಘಂಟೆಗಳ ನಂತರವೇ. ಗಾಡಿ ಆ ಕೊಚ್ಚೆಯಲ್ಲಿ ಸಿಕ್ಕಿಕೊಂಡು ನಾವುಗಳು ಆ ಪಚ-ಪಚ ಕೊಚ್ಚೆಯಲ್ಲಿ ಇಳಿದು ಗಾಡಿಯನ್ನು ತಳ್ಳಿ ವಿಫಲರಾಗಿ ಮತ್ತೊಂದು ಗಾಡಿಗಾಗಿ ಕಾದು... ಅಬ್ಬಬ್ಬ!! ಸಾಕಾಗಿಹೋಗುತ್ತಿತ್ತು. ಆದರೂ ಒಂದು ವಿಚಿತ್ರ, ಅದೊಂದು ಅಪರೂಪದ ಅನುಭವ.

ಅಲ್ಲಿನ ಮತ್ತೊಂದು ಅಚ್ಚರಿಯ ವಿಷಯವೆಂದರೆ, ಅಲ್ಲಿ ಎಲ್ಲರೂ ಕೃಷ್ಣನ ಭಕ್ತರು. ಆದರೆ ಕೃಷ್ಣನ ಆಕೃತಿಯನ್ನು ನಂಬದ ಅವರು, ವಿಗ್ರಹವನ್ನು ಪೂಜಿಸದೇ ಭಗವದ್ಗೀತೆಗೆ ಪೂಜೆ ಸಲ್ಲಿಸುತ್ತಾರೆ. ಆದರೆ ಅಲ್ಲಿನ ಒಂದು 'ಸತ್ರಾ'ದಲ್ಲಿ (ದೇವಸ್ಥಾನದಲ್ಲಿ) ಮಾತ್ರ ಕೃಷ್ಣನ ವಿಗ್ರಹಕ್ಕೆ ಪೂಜಿಸುತ್ತಾರೆ. ಅದು ೩೩೦ ವರ್ಷಗಳಷ್ಟು ಹಳೆಯ 'ಸತ್ರ'. ಅಲ್ಲಿನ ವಿಗ್ರಹವನ್ನು ಪುರಿಯ ಜಗನ್ನಾಥನ ದೇವಾಲಯದಿಂದ ತರಲಾಗಿದೆಯಂತೆ. ಅದನ್ನು ಅಲ್ಲಿ ಸ್ಥಾಪಿಸಿದಾಗ ಸ್ಥಳೀಕರಿಂದ ತೀವ್ರ ವಿರೋಧ ಎದುರಾಗಿ ಆ ವಿಗ್ರಹವನ್ನು ತೆಗೆಯಬೇಕು ಎಂದು ಅಲ್ಲಿನ ಪಂಚಾಯತಿ ಆಜ್ಞೆ ಹೊರಡಿಸಿತ್ತಂತೆ. ಆದರೆ ಅದೇ ರಾತ್ರಿ, ಅಲ್ಲಿನ ಅರ್ಚಕನ ಕನಸಿನಲ್ಲಿ ಕೃಷ್ಣ, ಈ ಪ್ರದೇಶದಲ್ಲಿ ಕೃಷ್ಣವರ್ಣದ ಮಗು ಜನಿಸಿದಾಗ ನಾನೇ ಇಲ್ಲಿಂದ ಹೊರಟುಹೋಗುತ್ತೇನೆ ಎಂದಿದ್ದನಂತೆ. ಇದು ಅಲ್ಲಿನ ಕತೆ. ಆಶ್ಚರ್ಯವೆಂದರೆ, ಇಲ್ಲಿಯವರೆಗೂ ಯಾರೊಬ್ಬರೂ ಕೃಷ್ಣವರ್ಣದವರು ಹುಟ್ಟಿಲ್ಲ. ಕೃಷ್ಣನು ಅಲ್ಲಿಂದ ಹೋಗಿಲ್ಲ!

ಇಂತಹ ಐತಿಹಾಸಿಕ ದೇವಸ್ಥಾನದಲ್ಲಿ ಶೂಟಿಂಗ್ ಮಾಡಿದ್ದು ಮತ್ತೊಂದು ವಿಶೇಷ ಅನುಭವ. ಅಲ್ಲಿ ಯಾವುದೇ ಚರ್ಮದಿಂದ ತಯಾರಿಸಿದ ವಸ್ತುಗಳಿಗೆ ಪ್ರವೇಶವಿಲ್ಲ. ನಾವುಗಳು ನಮ್ಮ ಬೆಲ್ಟ್‌ಗಳನ್ನೂ ಹೊರಗೇ ಬಿಚ್ಚಿಟ್ಟು ಹೋಗಿದ್ದೆವು. ಸೀರೆಯನ್ನು ಹೊರತುಪಡಿಸಿ ಬೇರೆ ಯಾವುದೇ ಶೈಲಿಯ ವಸ್ತ್ರ ತೊಟ್ಟರೂ ಪ್ರವೇಶವಿಲ್ಲ. ಅಲ್ಲಿಯ ಒಂದು ನೃತ್ಯ ಪ್ರಕಾರವನ್ನು ಅಂದು ಶೂಟ್ ಮಾಡಬೇಕಿತ್ತು. ಇಡೀ ಸತ್ರಾಗೆ ಅದ್ಭುತವಾದ ಲೈಟಿಂಗ್‌ನ ವಿನ್ಯಾಸವನ್ನು ಮಾಡಬೇಕೆಂದು ಹಿಂದಿನ ದಿನವೇ ನಮ್ಮ ಇಡೀ ಟೀಮ್ ನಿರ್ಧರಿಸಿತ್ತು. ಆದರೆ ಗರ್ಭಗುಡಿಯ ಒಳಗೆ, ಅಲ್ಲಿಯವರನ್ನು ಹೊರತುಪಡಿಸಿ, ಬೇರಾರಿಗೂ ಪ್ರವೇಶವಿರಲಿಲ್ಲ. ಬಹಳ ಹೊತ್ತು ಕಾಡಿ ಬೇಡಿ ಪರವಾನಗಿಯನ್ನು ಪಡೆದೆವು. ಈಗ ಉದ್ಭವವಾದ ಮತ್ತೊಂದು ಸಮಸ್ಯೆ, 'ಒಳಗೆ ಹೋಗುವವರು ಯಾರು?' ಎಂದು. ಏಕೆಂದರೆ ಒಳಗೆ ಮಾಂಸಾಹಾರಿಗಳಿಗೆ ಪ್ರವೇಶವಿಲ್ಲ. ಇತರೆ ಧರ್ಮದವರಿಗೆ ಪ್ರವೇಶವಿಲ್ಲ. ಹಿಂದುಗಳು ಮಾತ್ರ ಹೋಗಬೇಕು. ಕೊನೆಗೆ ನಮ್ಮವರೆಲ್ಲಾ ನಾನೇ ಹೋಗಬೇಕೆಂದು ತೀರ್ಮಾನಿಸಿದರು. ನಾನೋ ಮೊದಲೇ ನಾಸ್ತಿಕ! ಜೊತೆಗೆ ಜಾತಿ ಸೂಚಕವಾದ ಯಾವುದೇ ಗುರುತೂ ನನ್ನ ಮೇಲಿಲ್ಲ. ಅಲ್ಲಿನವರು ನನ್ನನ್ನು ನಂಬುವುದಾದರೂ ಹೇಗೆ? ಅಂತೂ ಒಂಥರಾ ಇಕ್ಕಟ್ಟಿನ ಪರಿಸ್ಥಿತಿ! ಕೊನೆಗೂ, ನನ್ನ ಡಿ.ಓ.ಪಿ. ಗ್ಯಾರಂಟಿ ಕೊಟ್ಟಮೇಲೆ, ಕಚ್ಚೆಪಂಚೆ ತೊಡಿಸಿ, ನನ್ನನ್ನು ಒಳಗೆ ಕಳುಹಿಸಲು ಒಪ್ಪಿದರು.

ಬ್ರಹ್ಮಪುತ್ರನ ಆ ಭಾಗದಲ್ಲಿ ಅನೇಕ ಚಿಕ್ಕ ಚಿಕ್ಕ ದ್ವೀಪಗಳಿವೆ. ಅದೇ ಅಲ್ಲಿನ ನಾವಿಕರಿಗೆ ದಿಕ್ಸೂಚಿಗಳು. ಸಮಯ ಮಧ್ಯಾಹ್ನ ೩ ಗಂಟೆ ಆಗಿತ್ತು. ನಮ್ಮ ಟೀಮ್, ನಿರ್ದೇಶನದ ಟೀಮ್ ಮತ್ತು ಇನ್ನು ಕೆಲವರು ಕೆಲವು ಮಾಂಟೇಜ್‌ಗಳಿಗಾಗಿ ದೋಣಿಯನ್ನು ಹತ್ತಿ ಹೊರಟೆವು. ವಿಪರೀತ ಮಳೆ, ಛಳಿ. ಮಳೆಯಲ್ಲೇ ಚಿತ್ರೀಕರಣ, ಅದೂ ನದಿಯ ಮಧ್ಯದಲ್ಲಿ. ಒಂದು ಪುಟ್ಟ ದೋಣಿಯಲ್ಲಿ ನಾಯಕ ಮತ್ತೊಬ್ಬ ನಾವಿಕ, ಅವರ ಪಕ್ಕದಲ್ಲಿ ಮತ್ತೊಂದು ದೋಣಿಯಲ್ಲಿ ನಾವು. ಛಾಯಾಗ್ರಾಹಕನಿಗೆ ಬೇಕಾದ ದಿಕ್ಕಿನಲ್ಲಿ ದೋಣಿ ಹೋಗುತ್ತಿಲ್ಲ. ಒಂದೇ ಸಮನೆ ರಭಸದಿಂದ ಹರಿಯುತ್ತಿರುವ ನೀರು. ಹೆಚ್ಚು ಸಮಯ ಉಳಿದಿಲ್ಲ, ಇನ್ನೇನು ಸೂರ್ಯ



ಫೆರ್ರಿ. ಅಲ್ಲಿನ ಜನ ಪ್ರತಿದಿನ ಈ ದಡದಿಂದ ಆ ದಡಕ್ಕೆ ಪ್ರಯಾಣಿಸುವುದು ಹೀಗೆ.

ಮುಳುಗಲಿದ್ದಾನೆ, ಬೆಳಕು ಕಡಿಮೆ ಆಗುತ್ತಿದೆ, ನಿರ್ದೇಶಕನ ಅರಚಾಟ ಮಾತ್ರ ಹೆಚ್ಚಾಗುತ್ತಲೇ ಇದೆ. ಕೊನೆಗೂ ಒಲ್ಲದ ಮನಸ್ಸಿನಲ್ಲಿ ಛಾಯಾಗ್ರಾಹಕ ಆದದ್ದು ಆಗಲಿ ಎಂದು ಶೂಟ್‌ಮಾಡಿಯೇಬಿಟ್ಟರು. ನಾವು ಹಿಂದಿರುಗಿದಾಗ ಸಂಜೆ ೫ ಗಂಟೆ ಆಗಿತ್ತು. ಉಕ್ಕಿ ಹರಿಯುತ್ತಿದ್ದ ಪ್ರವಾಹ ನಮ್ಮನ್ನು ಅದೆಲ್ಲಿಗೆ ತಳ್ಳಿತ್ತೋ ಗೊತ್ತಿಲ್ಲ. ದಿಕ್ಸೂಚಿಗಳಾಗಿದ್ದ ಎಲ್ಲ ದ್ವೀಪಗಳೂ ಆ ಮಳೆಯಲ್ಲಿ ಮುಳುಗಿಹೋಗಿವೆ. ಕತ್ತಲು ಆವರಿಸುತ್ತಿತ್ತು. ನಾವಿಕನಿಗೆ ದಾರಿ ಗೊತ್ತಾಗುತ್ತಿಲ್ಲ. ಈಗಾಗಲೇ ದೋಣಿಯಲ್ಲಿ ತೀವ್ರ ಆತಂಕ. ಭಯ ಮಿಶ್ರಿತ ವಾತಾವರಣ ಇಡಿ ದೋಣಿಯಲ್ಲಿ ತುಂಬಿತ್ತು. ಒಂದು ಅಂದಾಜಿನ ಮೇಲೆ ಸಾಗುತ್ತಿದ್ದ ದೋಣಿ ಅಚಾನಕ್ ಆಗಿ ನದಿಯ ಮಧ್ಯದಲ್ಲೇ ನಿಂತುಬಿಟ್ಟಿತು. ಅದಕ್ಕೆ ಏನೋ ಬಡಿದ ಹಾಗೆ. ನಾವಿಕ ಕೆಳಗೆ ಇಳಿದು ನೋಡಲು ಧುಮುಕಿದರೆ, ಮೊಣಕಾಲುದ್ದ ನೀರು ಅಷ್ಟೆ. ಮಳೆಯಲ್ಲಿ ಮುಳುಗಿದ್ದ ದ್ವೀಪವೊಂದರ ಮೇಲೆ ದೋಣಿ ನಿಂತಿತ್ತು, ಅದರ ಪ್ರಾಪೆಲರ್‌ಗಳು ಮಣ್ಣಿನಲ್ಲಿ ಕಚ್ಚಿಕೊಂಡಿದ್ದವು, ಮುಂದೆ ಹೋಗುವ ಎಲ್ಲಾ ಆಸೆಗಳನ್ನು ನೀರುಪಾಲು ಮಾಡುತ್ತಾ. ಫೋನ್ ನೆಟ್‌ವರ್ಕ್ ಇಲ್ಲ; ವಾಕಿ ಟಾಕಿಯ ರೇಂಜನ್ನೂ ಮೀರಿ ನಿಂತಿದ್ದೆವು. ಮಳೆಯಲ್ಲಿ ನೆನೆಯುತ್ತಾ, ಛಳಿಗೆ ನಡುಗುತ್ತಾ, ನದಿಯ ಮಧ್ಯದಲ್ಲಿ, ದಡದಿಂದ ಅದೆಷ್ಟು ದೂರ ಇದ್ದೇವೆ ಎಂಬುದರ ಪರಿವೆಯೇ ಇಲ್ಲದೆ!

ಸಮಯ ಸಂಜೆ ೭ ಆಗಿತ್ತು. ನಾವಿಕ ಎಷ್ಟೇ ಹರಸಾಹಸ ಪಟ್ಟರೂ ದೋಣಿಯನ್ನು ಹೊರತೆಗೆಯಲು ಆಗುತ್ತಲೇ ಇಲ್ಲ. ಕಡೆಗೂ ದೋಣಿಯಲ್ಲಿ ನಮ್ಮ ಜೊತೆಗಿದ್ದ ಒಬ್ಬ ಮ್ಯಾನೇಜರ್‌ಗೆ ದಡದ ಮೇಲಿದ್ದ ಮತ್ತೊಬ್ಬ ಮ್ಯಾನೇಜರ್‌ನ ಫೋನ್ ಸಿಕ್ಕಿಯೇಬಿಟ್ಟಿತು. ಅಂತೂ ಇಂತೂ ನಮ್ಮನ್ನು ಹುಡುಕುತ್ತಾ ಮತ್ತೊಂದು ದೋಣಿ ಹೊರಟಿತು. ನಾವಿಲ್ಲಿ ಫ್ಲ್ಯಾಷ್ ಲೈಟ್ ಹಿಡಿದು ಬೆಳಕು ಕಂಡಕಡೆಯೆಲ್ಲ ನಮ್ಮ



ಮೀನು ಹಿಡಿಯುವ ಸಲಕರಣೆ





ಲೈಟನ್ನು ತಿರುಗಿಸುತ್ತಾ ಸುಮಾರು ಒಂದೂವರೆ ಘಂಟೆ ಕಾಯುತ್ತಾ ನಿಂತಿದ್ದೆವು. ಫೋನ್‌ನಲ್ಲಿ ಸಂಭಾಷಣೆಗಳು ನಡೆಯುತ್ತಲೇ ಇದ್ದವು. ''ಇಲ್ಲಿ, ನಮ್ಮ ಲೈಟ್ ಕಾಣಿಸುತ್ತಾ ಇದೆಯಾ ?''... ''ಇಗೋ ೩ ಬಾರಿ ಆಫ್...ಆನ್ ಮಾಡ್ತಿದೀನಿ... ಕಾಣಿಸ್ತಾ ಇದೆಯಾ ?''... ಹೀಗೇ..., ಅದೆಷ್ಟೋ ವಿಫಲ ಪ್ರಯತ್ನಗಳ ನಂತರ ದೂರದಲ್ಲಿ ಬೆಳಕೊಂದು ಕಂಡಿತು. ಮತ್ತೆ ಅದೇ ಮಾತುಗಳು. ''ದಿಖಾ ಕ್ಯಾ ?'' ಕೊನೆಗೂ ಉತ್ತರ ಬಂದಿತು, ''ಹಾಂ..ಹಂ..ದಿಖಾ''.

ಇಷ್ಟೂ ಹೊತ್ತು ಒಂದು ಕಡೆ ಕಾಣುತ್ತಿದ್ದ ಬೆಳಕು ಈಗ ಎರಡೆರಡು ಕಡೆ ಕಾಣಿಸುತ್ತಿದೆ. ನಮ್ಮವರು ಯಾರು ಎಂದು ಗೊತ್ತಾಗುತ್ತಿಲ್ಲ. ಎಲ್ಲೋ ಒಂದು ಕಡೆಯಿಂದ ಬರಿ ಶಿಳ್ಳೆ ಕೇಳಿಸುತ್ತಿದೆ. ಥರಾವರಿ ಶಿಳ್ಳೆ. ಇದರ ಹಿಂದಿನ ದಿನವಷ್ಟೇ ಕ್ಲೈಮ್ಯಾಕ್ಸ್‌ನ ಚಿತ್ರೀಕರಣದಲ್ಲಿ ಅಲ್ಲಿನ ತೀವ್ರವಾದಿಗಳು ತಮ್ಮದೇ ಕೋಡ್ ಭಾಷೆಯಲ್ಲಿ ಶಿಳ್ಳೆ ಹೊಡೆದು, ಸಿಗ್ನಲ್ ಕೊಡುತ್ತಾ ನಾಯಕ, ನಾಯಕಿಯರ ಮೇಲೆ ಅಟ್ಯಾಕ್ ಮಾಡುವ ದೃಶ್ಯವೊಂದನ್ನು ಶೂಟ್ ಮಾಡಿದ್ದೆವು. ಈಗ ಅದರ ಪುನರಾವರ್ತನೆ ಯಂತೆ ನಮ್ಮ ಮುಂದೊಂದು ಅಶರೀರ ಶಿಳ್ಳೆ ಕೇಳಿಸುತ್ತಿತ್ತು. ಭಯ, ಛಳಿ, ನಡುಕ ಎಲ್ಲವೂ ಒಂದಕ್ಕೊಂದು ಪೂರಕವಾಗಿದ್ದುದು ಚಿತ್ರವಿಚಿತ್ರ ಅನುಭವವೆನ್ನಿಸಿತ್ತು.

ಸಮಯ ೯. ಕೊನೆಗೂ ಬಂದಿತು, ರೆಸ್ಕ್ಯೂ ಬೋಟ್. ಚಿಕ್ಕ ದೋಣಿ. ಆದರೆ ನಾವುಗಳು ಕೂರುವಷ್ಟು ದೊಡ್ಡದಿತ್ತು. ಎಲ್ಲರೂ ಅದಕ್ಕೆ ಷಿಫ್ಟ್ ಆಗಿ ಹೊರಟೆವು. ಆತನೂ ಅತೀವ ಜಾಣ್ಮೆಯಿಂದ ದೋಣಿಯನ್ನು ನಡೆಸುತ್ತಿದ್ದ. ಎಲ್ಲೆಲ್ಲೂ ಕತ್ತಲೆ, ಮಳೆ, ಸುತ್ತಮುತ್ತ ಏನೂ ಕಾಣುತ್ತಿಲ್ಲ. ಕೊನೆಗೂ ದಡ ತಲುಪಿದೆವು. ಸಮಯ ರಾತ್ರಿ ೧೦.೩೦ ಆಗಿತ್ತು.

ಹೀಗೇ ಅನೇಕ ಕುತೂಹಲಕಾರಿ ಸನ್ನಿವೇಶಗಳ ನಡುವೆ ಒಂದು ತಿಂಗಳ ಚಿತ್ರೀಕರಣ ಮುಗಿದೇಹೋಯಿತು. ಆ ಕ್ಷಣವೇ ಇಲ್ಲಿಂದ ಹೊರಟುಹೋಗಬೇಕು ಅನ್ನಿಸುತ್ತಿತ್ತು. ಮರುದಿನವೇ ಬೆಂಗಳೂರಿಗೆ ಹಿಂತಿರುಗಿದೆ. ಮರುಕ್ಷಣವೇ ಮಾಜುಲಿಯನ್ನು ಮಿಸ್ ಮಾಡಿಕೊಂಡ ಅನುಭವ.

ಅಂದಹಾಗೆ, ಮರೆತೇಬಿಟ್ಟಿದ್ದೆ. ಹವಾ ಮುನ್ಸೂಚನೆ ಪ್ರಕಾರ, ಇನ್ನು ಕೇವಲ ೨೫ ವರ್ಷಗಳಲ್ಲಿ ಪ್ರಪಂಚದ ಅತಿ ದೊಡ್ಡ ಜನರು ವಾಸಿಸುವ ನದಿದ್ವೀಪ ಮಾಜುಲಿಯ ಅರ್ಧಭಾಗ ಬ್ರಹ್ಮಪುತ್ರನಲ್ಲಿ ಲೀನವಾಗುತ್ತದಂತೆ! ಅರ್ಥಾತ್ ೨೫ ವರ್ಷಗಳಲ್ಲಿ ಮಾಜುಲಿಯ ಅರ್ಧಭಾಗ ನೀರಿನಲ್ಲಿ ಕರಗಿಹೋಗಿರುತ್ತದೆ. ಮಾಜುಲಿಯಿಂದ ಜೋರ್ಹಾಟ್‌ಗೆ ಹೋಗುವಾಗ ಮಾಜುಲಿಯ ಒಂದು ಭಾಗ ನಮ್ಮ ಎದುರಿಗೇ ಕುಸಿದು ನೀರಿನಲ್ಲಿ ಬಿದ್ದದ್ದನ್ನು ಕಣ್ಣಾರೆ ಕಂಡಿದ್ದೇವೆ. ಇಷ್ಟೆಲ್ಲಾ ಅದ್ಭುತ ಅನುಭವಗಳನ್ನು ಕೊಟ್ಟ ಮಾಜುಲಿಯನ್ನು ನಾಳೆ ನಮ್ಮ ಮಕ್ಕಳಿಗೆ ನಕ್ಷೆಯಲ್ಲೂ ತೋರಿಸಲು ಆಗುವುದಿಲ್ಲವಲ್ಲಾ ಎಂದು ಯೋಚಿಸುವುದೂ ಒಂದು ಯಾತನಾಮಯ ಅನುಭವ! ನೆನೆದರೆ ಮನಸ್ಸು ಭಾರವಾಗತ್ತೆ...

ಮಾಜುಲಿ - ಇದು ನಿನ್ನ ನೆನಪಿಗೆ...

ಸಿನಿಮಾ : **ಆಸ್ ದ ರಿವರ್ ಫ್ಲೋಸ್**; ಭಾಷೆ : ಹಿಂದಿ/ಅಸ್ಸಾಮಿ

ಛಾಯಾಗ್ರಹಣ : **ಮಧು ಅಂಬಟ್**; ನಿರ್ದೇಶನ : **ಬಿದ್ಯುತ್ ಕೊಟೊಕಿ**

ಜಿ. ಅದ್ವೈತ
ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬



# ಸೂರ್ಯನುರಿದ ಭೂಮಿಗೆ ತಂಪನೆರೆದ ಚಂದಿರ

ಅಬ್ಬಾಸ್ ಮೇಲಿನಮನಿ



ಮೂರು ದಿನಗಳಿಂದ ಅಮೀನೂರು ಜೀವಶವದಂತೆ ಉಸಿರಾಡಿಸತೊಡಗಿತ್ತು. ಗಾಳಿಗೆ ಬೀಸಲೋ ಬೇಡವೋ ಎನ್ನುವ ಸಂದಿಗ್ಧತೆ. ಧಗಧಗ ಉರಿವ ಸೂರ್ಯ ಭೂಮಿಯನ್ನು ಕಾದಹಂಚಿನಂತೆ ಮಾಡಿದ್ದ. ರಸ್ತೆಗಳಲ್ಲಿ ಮನುಷ್ಯರನ್ನು ಕಾಣದೆ ಬೀಡಾಡಿ ನಾಯಿಗಳು, ದನಗಳು ಮತ್ತು ಹಂದಿಗಳು ದಿಗಿಲುಗೊಂಡಿದ್ದವು. ಹಗಲೆಂಬೋ ಹಗಲು ಪೊಲೀಸರ ಲಾಟಿ ಮತ್ತು ಬೂಟುಗಳ ಸದ್ದಿಗೆ ಹೆದರಿಕೊಂಡಿತ್ತು. ಗೂಡು ಬಿಟ್ಟು ಹೊರಗೆ ಬರದ ಹಕ್ಕಿಗಳ ಎದೆ ತುಂಬ ತಲ್ಲಣ. ಕಿಟಕಿ, ಬಾಗಿಲು ಮುಚ್ಚಿದ ಮನೆಯೊಳಗೆ ಹೆಪ್ಪುಗಟ್ಟಿದ ಆತಂಕ.

ರಹೀಮ್‌ಗಲ್ಲಿಯ ತನ್ನ ಪುಟ್ಟ ಗುಡಿಸಲಿನಲ್ಲಿ ಕೈಕಾಲು ಕಟ್ಟಿಹಾಕಿದಂತೆ ಕುಳಿತಿದ್ದ ಚಾಂದಬಿ ನಿರಂತರ ಹೊಯ್ದಾಡತೊಡಗಿದ್ದಳು. ಊರು ಅನುಭವಿಸುತ್ತಿರುವ ಅನಾಥಪ್ರಜ್ಞೆಯ ತಹತಹಿಕೆ ಅವಳೊಡಲಲ್ಲಿ ಸಂಕಟವನ್ನು ಸೃಜಿಸಿತ್ತು. ''ಆ ಸೈತಾನ್ ಬೇಟಾಗಳಿಗೆ ಹೇಳೋರು ಕೇಳೋರು ಯಾರೂ ಇಲ್ಲೇನಂತೀನಿ. ಇಡೀ ಊರSS ಕಬರಸ್ತಾನ ಮಾಡಿ ಕುಂತಾವು. ಬಾಡ್ಯಾಗೋಳು, ಧರ್ಮ, ದೇವರಂತ ಬದುಕೋರ ಜೀವಾ ಹಿಂಡಾಕ ಹತ್ಯಾವು. ಬಾಯಾಗ ಮಣ್ಣು ಹಾಕ್ಲಿ, ಹಿಂದಿನ ಕಾಲ್ದಾಗ ಇಂಥ ಹುಳಾ ನಾಶಾ ಮಾಡಾಕ ದೇವರು ಅವತಾರ ಎತ್ತಿ ಬರ್ತಿದ್ದನಂತ, ಈಗೆಲ್ಲಿ ಕಣ್ಮುಚ್ಚಿ ಕುಂತಾನೋ ಅಂವಾ...'' ಆಕೆ ಮಾತಾಡುತ್ತಲೇ ಇದ್ದಳು.

ಒಂದು ಸಂಜೆ, ಹುಡುಗನೊಬ್ಬ ಗಿರಣಿಯಲ್ಲಿ ಜೋಳ ಬೀಸಿಕೊಂಡು ಮನೆಗೆ ಹೊರಟ ಹುಡುಗಿಯೊಬ್ಬಳ ಜಡೆ ಎಳೆದು ಓಡಿಹೋದ ಪ್ರಸಂಗ, ಮಾತುಮಾತಲ್ಲಿ ಹಲವಾರು ತಿರುವುಗಳನ್ನು ಪಡೆದುಕೊಂಡು, ಊರನ್ನು ಪ್ರಕ್ಷುಬ್ಧಗೊಳಿಸಿ, ಕೋಮುಗಲಭೆಯಾಗಿ ಮಾರ್ಪಟ್ಟು ಬೆಳಗು ಹರಿಯುವುದರೊಳಗೆ, ಹಾಲು ಮಾರುವ ಹಿಂದೂ ಹುಡುಗ, ಪೇಪರ್ ಹಂಚುವ ಮುಸ್ಲಿಮ ಹುಡುಗರನ್ನು ಬಲಿತೆಗೆದುಕೊಂಡಿತ್ತು. ನಿಷೇಧಾಜ್ಞೆ ಜಾರಿಯಾಗಿ, ವಾಹನಗಳಲ್ಲಿ ಬಂದ ಹಿಂಡುಹಿಂಡು ಪೊಲೀಸರು ಗಾಳಿಯಲ್ಲಿ ಗುಂಡು ಹಾರಿಸುತ್ತ ಬೀದಿಬೀದಿಗಳಲ್ಲಿ ತಿರುಗಾಡಿಕೊಂಡ ಮೇಲೆ ದೊಂಬಿಯ ಸದ್ದು ಅಡಗಿತ್ತು.

ಆದರೆ ಬೂದಿ ಮುಚ್ಚಿದ ಕೆಂಡಕ್ಕೆ ಗಾಳಿ ಸೋಕಿದ್ದೆ ನಿಗಿನಿಗಿಸುತ್ತಿತ್ತು. ಕರ್ಫ್ಯೂವನ್ನು ಧಿಕ್ಕರಿಸಿಯೂ ಅಲ್ಲಲ್ಲಿ ಬೆಂಕಿ ಹಚ್ಚಿದ, ಅಂಗಡಿಗಳನ್ನು ಲೂಟಿ ಮಾಡಿದ ಪ್ರಕರಣಗಳು ಸಂಭವಿಸಿ ಜನರ ತಲ್ಲಣ ಹೆಚ್ಚಿಸದೇ ಇರಲಿಲ್ಲ. ಕಂಡಲ್ಲಿ ಗುಂಡು ಹಾಕುವ ಆಜ್ಞೆಯಿಂದ ಪೊಲೀಸರ ಕೈಯಲ್ಲಿನ ಬಂದೂಕುಗಳು ಮನುಷ್ಯರ ಬೇಟೆಗೆ ಕಾತರಿಸುತ್ತಲೇ ಇದ್ದವು.

ಊರಿನ ಬಸ್ ನಿಲ್ದಾಣದ ಹಿಂದುಗಡೆಗೆ ವ್ಯಾಪಿಸಿಕೊಂಡಿದ್ದ ರಹೀಮಗಲ್ಲಿ ಗುಬ್ಬಿ ಮರಿಯಂತೆ ಥರಗುಟ್ಟತೊಡಗಿತ್ತು. ಚಾಂದಬಿಯ ಮಾತುಗಳನ್ನು ಗಂಡ ಮುಷ್ತಾಕ್ ಕೇಳಿಯೂ ಕೇಳದಂತೆ ಕುಳಿತುಕೊಂಡಿದ್ದ. ಊರು ಭೀತಿಗೊಳಗಾದ ಹಿನ್ನೆಲೆಯಲ್ಲಿ ಎರಡು ವರ್ಷದ ಹಿಂದಿನ ಘಟನೆ ಅವನನ್ನು ಆವರಿಸಿಕೊಂಡಿತ್ತು. ಕಂಪನಿಯೊಂದರ ಟ್ರಕ್ಕು ನಡೆಸುತ್ತಿದ್ದ ಅವನು ಅಹಮ್ಮದಾಬಾದಿಗೆ ಮಾಲು ತುಂಬಿಕೊಂಡು ಹೋದಾಗ ಕೋಮುಗಲಭೆಯಲ್ಲಿ ಸಿಕ್ಕಿಹಾಕಿಕೊಂಡಿದ್ದ. ದುರುಳರು ಅವನ ತಲೆಯ ಮೇಲಿನ ಟೋಪಿ ನೋಡಿ, ಸ್ಟೇರಿಂಗ್ ಮೇಲಿರಿಸಿದ್ದ ಅವನ ಎರಡೂ ಕೈಗಳನ್ನು ತಲವಾರಿನಿಂದ ತುಂಡರಿಸಿ, ಟ್ರಕ್ಕಿಗೆ ಬೆಂಕಿ ಹಚ್ಚಿ ಹೋಗಿದ್ದರು. ಮುಷ್ತಾಕ್ ಅಲ್ಲಿಂದ ಜೀವ ಉಳಿಸಿಕೊಂಡು ಬಂದದ್ದು ಪವಾಡ ಎನಿಸಿತ್ತು. ಒಂದು ಹೆಣ್ಣು, ಎರಡು ಗಂಡುಮಕ್ಕಳು. ಗಂಡ-ಹೆಂಡತಿ ಎಂಥ ಸೊಗಸಾಗಿತ್ತು ಬದುಕು! ಅಲ್ಲಾಹನಿಗದು ಮನಸ್ಸಿಗೆ ಬರಲಿಲ್ಲ. ದುಡಿಯುವ ಹುಮ್ಮಸ್ಸಿನ ಮುಷ್ತಾಕ್ ಕೈ ಕಳೆದುಕೊಂಡು ಮನೆ ಹಿಡಿದು ಕುಳಿತಿದ್ದ. ಚಾಂದಬಿ ದಿಟ್ಟ ಹೆಂಗಸು. ಹತ್ತಾರು ಮನೆಗಳ ಕಸ-ಮುಸುರೆಗೆ ಹೋಗಿಬರುತ್ತ ಸಂಸಾರವನ್ನು ನಿಭಾಯಿಸತೊಡಗಿದ್ದಳು. ಅವಳ ಹಿರಿಯ ಮಗ ನೌಷಾದ್ ಬುದ್ಧಿವಂತ ಹುಡುಗ. ಏಳನೆಯ ತರಗತಿವರೆಗೆ ಉರ್ದು ಕಲಿತು, ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಕನ್ನಡದಲ್ಲಿ ಬರೆದು ಹೈಸ್ಕೂಲಿಗೆ ಪ್ರಥಮ ಸ್ಥಾನ ಗಳಿಸಿದ್ದ. ಹಿಂದೂ ಹುಡುಗರ ಜೊತೆಗೆ ಅವನದು ಹೆಚ್ಚಿನ ದೋಸ್ತಿ. ಗಲ್ಲಿಯಲ್ಲಿ ಎಲ್ಲರಿಗೂ ಬೇಕಾದ ಹುಡುಗ. ಮಗನನ್ನು ಹೊಗಳುವುದೆಂದರೆ ಚಾಂದಬಿಗೆ ಸಂಭ್ರಮ. ಮುಷ್ತಾಕನಿಗೆ ಮಗನ ಬಗ್ಗೆ ಕನಸುಗಳಿದ್ದವು. ಅವನು ತಮ್ಮ ಭವಿಷ್ಯದ ಬೆಳಕು ಎಂದು ಭಾವಿಸಿದ್ದ. ಆದರೆ ಆ ದಿನದ ಕತ್ತಲು ಈ ಬೆಳಕನ್ನು ನುಂಗಿತ್ತು.

ದೇಶದ ಎಲ್ಲೋ ಒಂದು ಕಡೆಗೆ ಪ್ರತಿಮೆಗಾದ ಅಪಮಾನವನ್ನು ಪ್ರತಿಭಟಿಸಲು ಒಂದು ಕೋಮಿನವರು ಬಂದ್ ಆಚರಿಸಿದ್ದರು. ದುಷ್ಕರ್ಮಿಗಳು ಆ ಸಂದರ್ಭವನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಂಡು ಊರಲ್ಲಿ ದಂಗೆ ಸೃಷ್ಟಿಸಿದ್ದರು. ಮಸೀದಿಯಿಂದ ಇಷಾ ನಮಾಜು ಮುಗಿಸಿಕೊಂಡು ಮನೆಯತ್ತ ಧಾವಿಸಿದ್ದ ನೌಷಾದ್ ಮತಾಂಧನೊಬ್ಬನ ಚೂರಿ ಇರಿತಕ್ಕೆ ಸಿಕ್ಕು ನೆಲಕ್ಕುರುಳಿದ್ದ. ಅವನ ಹೊಟ್ಟೆಯೊಳಗಿಂದ ಹೊರಬಿದ್ದ ಕರುಳು ಕಂಡ ಚಾಂದಬಿ ಮುಗಿಲು ಹರಿದು ಬೀಳುವಂತೆ ಆಕ್ರಂದಿಸಿದ್ದಳು.

ಚಾಂದಬಿಗೆ ಈಗ ಮಗನ ನೆನಪು ಕಾಡದೆ ಇರಲಿಲ್ಲ. ಆ ನೆನಪಿನ ತುಂಬ ತಳಮಳ. ಅದರ ತೆಕ್ಕೆಯಲ್ಲಿ ಸಿಲುಕಿಕೊಂಡರೆ ಆಕೆ ಎರಡು - ಮೂರು ದಿನ ಹಾಸಿಗೆ ಬಿಟ್ಟು ಏಳುವುದಿಲ್ಲವೆಂದು ಮುಷ್ತಾಕ್‌ನಿಗೆ ಗೊತ್ತು. ಅದಕ್ಕಾಗಿ ಅವನು ಅವಳ ಮಾತುಗಳಿಗೆ ಪ್ರತಿಕ್ರಿಯಿಸದೆ ಕುಳಿತಿದ್ದ.

* * *

ಮೊನ್ನೆಯೇ ತಿಂಗಳ ಕೊನೆ. ಅವಳಿಗೆ ನಾಲ್ಕು ಮನೆಯವರು ಪಗಾರ ಕೊಡಬೇಕು. ಗಾಂಧಿನಗರ

ಬಹುವರ್ಷಗಳಿಂದಿದ್ದ ಆ ಮನೆಯವರಿಗೆ ಚಾಂದಬಿಯ ಮೇಲೆ ವಿಶೇಷ ಅಸ್ಥೆಯಂಥ ಪ್ರೀತಿ. ಅವರು ಆಕೆಯನ್ನು ಕೆಲಸದಾಕೆ ಎಂದು ಗಮನಿಸಿದ್ದಿಲ್ಲ. ಎದೆಯಲ್ಲಿ ಬ್ರಹ್ಮಾಂಡದಷ್ಟು ದುಮ್ಮಾನವನ್ನು ಹತ್ತಿಕ್ಕಿಕೊಂಡು ಆಕೆ ಚೊಕ್ಕಟವಾಗಿ ಕೆಲಸ ನಿರ್ವಹಿಸುವ, ಮನುಷ್ಯ ಸಂಬಂಧದ ಗಂಧ ತೀಡುವ ಪರಿಯಿಂದ ಸಂಪ್ರೀತರಾದವರು. ಆವಳ ಮನಸ್ಸು ಸ್ವಚ್ಛ – ಮಾತು ನೇರ. ಮೈಗಳ್ಳತನದಿಂದ ಹಣ ಪಡೆಯುಕೊಳ್ಳುವ ತಕರಾರಿನವಳಲ್ಲ. "ಬೆವರು ಸುರಿಸಲಾರ್ದ ತಿಂದ್ರ ಅನ್ನ ಮೈಯ್ಯಾಗ ರಕ್ತಾ ಆಗುದಿಲ್ರಿ" ಎನ್ನುವ ಸ್ವಭಾವ. ಲಂಚ ತಿನ್ನುವ ಸಾಹೇಬರುಗಳ ಅಂತರಂಗವನ್ನು ಕಲಕದೇ ಬಿಡುತ್ತಿರಲಿಲ್ಲ ಆವಳ ಮಾತು. ತನ್ನ ತಾಪತ್ರಯಗಳ ಬಗ್ಗೆ ಚೂರೂ ಹೇಳಿಕೊಳ್ಳುವವಳಲ್ಲ. ಆದರೆ ನೌಷಾದನ ವಯಸ್ಸಿನ ಹುಡುಗರನ್ನು ನೋಡಿದರೆ ಅವಳ ಕಣ್ಣಂಚಿನಲ್ಲಿ ನೀರು ತುಳುಕುತ್ತಿತ್ತು. ಕೈಗೆ ಬಂದ ಮಗ ರಸ್ತೆಯಲ್ಲಿ ರಕ್ತದ ಮಡುವಿನಲ್ಲಿ ಸತ್ತು ಬಿದ್ದ ದೃಶ್ಯ ಅವಳ ಕಣ್ಣೆದುರು ಕಟ್ಟಿ ಹೃದಯವನ್ನು ಘಾಸಿಗೊಳಿಸುತ್ತಿತ್ತು. ಚೂರಿ ರೂಪದಲ್ಲಿ ಬಂದು ಮಗನನ್ನು ನುಂಗಿ ಹಾಕಿದ ವಿಧಿಯನ್ನು ಆಕೆ ಒಳಗೇ ಶಪಿಸುತ್ತಿದ್ದಳು. ಎಳೆಯ ಮಗುವಿನ ರಕ್ತ ಕುಡಿದ ಧರ್ಮಾಂಧ ಹುಳುವನ್ನು ಜನ ಬೈದಾಡಿಕೊಂಡಿದ್ದರು. ಆದರೆ ಆ ಹುಳುಗಳ ಪತ್ತೆ ಮಾತ್ರ ಆಗಿರಲಿಲ್ಲ.

ಈಗ ಅಂಥವೇ ಹುಳುಗಳು ಊರಲ್ಲಿ ಗುಲ್ಲೆಬ್ಬಿಸಿ ಇಬ್ಬರು ಹಿಂದೂ-ಮುಸ್ಲಿಮ ಹುಡುಗರ ಮೇಲೆ ರಣಹದ್ದುಗಳಂತೆ ಎಗರಿ ಕುಕ್ಕಿದ್ದು ಕೇಳಿ ಚಾಂದಬಿಯ ಲಾವಾ ಕುದ್ದಿತ್ತು. "ಯಾವ ರಾಕ್ಷಸಗೊಳು ಆ ಹುಡುಗರ ಜೀವಾ ನುಂಗಿದವೋ. ಅವರ ಕಟಬಾಯಿ ಹರೀಲಿ. ಅವರ ವಂಶ ನಿರ್ವಂಶ ಆಗ್ಲಿ, ಅವರ ಉರುವಣಿಗ್ಯಾಗ ಉಪ್ಪು ತುಂಬಲಿ" ಎಂಬಿತ್ಯಾದಿಯಾಗಿ ಶಾಪದ ಕಿಡಿಗಳನ್ನು ಸಿಡಿಸಿದ್ದಳಾಕೆ. ಕೋಮು ಎನ್ನುವ ಕಾಳಿಂಗ ಸರ್ಪ ಅಮಾಯಕ ಜೀವಗಳನ್ನು ನಿರ್ದಯವಾಗಿ ಕಚ್ಚಿ ಕೊಲ್ಲುವುದು ನಿಜವಾದರೂ ಈ ಸರ್ಪವನ್ನು ಕೆರಳಿಸುವ ನೀಚರ ಸೂಕ್ಷ್ಮಗಳು ಚಾಂದಬಿಯ ಗ್ರಹಿಕೆಗೆ ನಿಲುಕುವಂತಿರಲಿಲ್ಲ.

ಚಾಂದಬಿ ಒಬ್ಬಳೇ ಎಷ್ಟು ಮಾತಾಡಿಯಾಳು. ಮುಷ್ತಾಕ್ ಕಿಮಿಕ್ ಎನ್ನದೇ ಕುಳಿತಿದ್ದ. ಮಕ್ಕಳಿಬ್ಬರು ಪುಸ್ತಕದಲ್ಲಿ ಮಗ್ನರಾಗಿದ್ದರು. ಚಾಂದಬಿ ಬೇಸರದಿಂದ ಮೈಮುರಿದಳು. ಥಟ್ಟನೆ ಅವಳಿಗೆ ಪದ್ಮಾ ಹೇಳಿದ ಮಾತು ನೆನಪಾದವು. ಪದ್ಮಾ ಆಫೀಸರೊಬ್ಬನ ಹೆಂಡತಿ. ಗಲಭೆಯ ಹಿಂದಿನ ದಿನ ಆಕೆ ಸ್ಪಷ್ಟವಾಗಿ "ನಮ್ಮ ರೂಪಾಗ ದಿನ ತುಂಬ್ಯಾವು. ಇವತ್ತ, ನಾಳೆ ಅವಳ ಹೆರಿಗೆ ಆಗತ್ತ. ಆಕಿ ಬಾಣಂತನಕ ನೀನು ಆಸರ ಆಗಬೇಕು. ಬೇಕಾದ್ರ ನೀನು ಕೆಲಸ ಮಾಡೋ ಮನಿ ಕಮ್ಮಿ ಮಾಡ್ಕೊ. ನಮ್ಮ ಮನಿಯಾಗ, ಖಾಯಂ ಇರು. ನಿನ್ಗ ಬೇಡಿದಷ್ಟು ಪಗಾರ ಕೊಡ್ತೀನಿ" ಎಂದಿದ್ದಳು. ಅವಳ ಗಂಡ ಚಂದ್ರಪ್ಪ ಊರಲ್ಲಿ ಇರುವುದೇ ಅಪರೂಪ. ಯಾವಾಗಲೂ ಟೂರ್ ಮೇಲೆ ಹೋಗುವವರು. ಹಿರಿಯ ಮಗ ಮೈಸೂರಲ್ಲಿ ಓದುತ್ತಿದ್ದ. ಇನ್ನೊಬ್ಬ ಮಗ ಚಿಕ್ಕವನು. ರೂಪಾಳ ಬಾಣಂತನಕ್ಕೆ ಕಷ್ಟವಾಗಬಾರದು ಎಂಬ ಕಾರಣದಿಂದ ಚಂದ್ರಪ್ಪ "ನೀನು ಹಣದ ಬಗ್ಗೆ ಚಿಂತೆ ಮಾಡಬೇಡ" ಎಂದು ಚಾಂದಬಿಯನ್ನು ಕೇಳಿಕೊಂಡಿದ್ದರು. "ರೊಕ್ಕದ ಮಾತು ಹೇಳಬ್ಯಾಡ್ರಿ ಸಾಹೇಬರ. ನಾಯೇನು ಅನೇದಾಕಿ ಅಲ್ಲ. ರೂಪಾ ನನ್ನ ಬೇಟಿ ಸಮಾನ. ಅವಳ ಬಾಣಂತನ್ ನಾವ್‌ಽ ಮಾಡ್ತೀವಿ" ಎಂದಿದ್ದಳಾಕೆ.

"ಪಾಪ, ಆ ಹುಡುಗಿ ಹೆರಿಗಿ ಆತೋ ಏನೋ ?" ಚಾಂದಬಿ ಈಗ ತೀವ್ರ ಚಡಪಡಿಸತೊಡಗಿದಳು. ಪದ್ಮಾನ ಮಾತು ಎದೆಯಲ್ಲಿ ಪ್ರತಿಧ್ವನಿಸಿದಂತಾಗಿ ಆಕೆ ಎದ್ದುನಿಂತು "ನಾನು ಪದ್ಮಕ್ಕರ ಮನಿಗೆ ಹೋಗಿ ಬರ್ತೀನಿ" ಎಂದಳು.

"ನಿನ್ನ ತಲಿ ಖರಾಬ್ ಆಗೇತೇನು ? ಊರಾಗ ಒಂದು ನರಪಿಳ್ಳೀನೂ ತಿರುಗಾಡಾಕ ಹತ್ತಿಲ್ಲ. ಹೋಗಿ ಬಂದೂಕಿನ ಬಾಯಿಗೆ ಬೀಳಬೇಕಂತಿಯೇನು ? ಸುಮ್ನ ಮನಿಯಾಗ ಕೂಡ್ರು." ಮುಷ್ತಾಕ್ ಹಗುರಾಗಿ ಗದರಿಸಿದ.

"ಪದ್ಮಕ್ಕ ಬಹಳ ಹೇಳ್ಯಾರ. ಊರಾಗ ಇಂಥ ಪರಿಸ್ಥಿತಿ, ಪಾಪ, ಅವರು ಏನು ಮಾಡ್ತಾರೋ ಏನೋ ?" ಚಾಂದಬಿಯ ಮನಸ್ಸು ಅತ್ತಕಡೆ ಧ್ಯಾನಿಸಿತ್ತು.

"ಗದ್ದಲ ಎಬ್ಬಿಸುವ ಹರಾಮ್‌ಕೋರರಿಗೆ ಮನುಷ್ಯಾರ ಸಂಕಟ ಅರ್ಥಾಗುದಿಲ್ಲ" ಮುಷ್ತಾಕ್‌ನ ಧ್ವನಿಯಲ್ಲಿ ವ್ಯಥೆ, ಸಿಟ್ಟು ಎರಡೂ ಕಾಣಿಸಿದ್ದವು.

"ಆ ಸೂವರ್‌ಗಳ ತಗೊಂಡು ಏನು ಮಾಡೊದೈತಿ. ರೂಪಾ ಬೇಟಿಗೆ ಇದು ಪೈಲಾ ಹೆರಿಗೆ. ನಾನು ಹೋಗಿ ಬರ್ತೀನಿ" ಎಂದು ಚಪ್ಪಲಿ ಮೆಟ್ಟಿಕೊಂಡಳು ಚಾಂದಬಿ.

"ನಿಂದೂ ಹಠ ಬಹಳಾತು. ಪೊಲೀಸರ ಬಂದೂಕಿಗೆ ಮರುಕ ಇರುದಿಲ್ಲ !" ಎನ್ನುತ್ತ ಹೆಂಡತಿಯನ್ನು ತಡೆಯಲು ನೋಡಿದ ಮುಷ್ತಾಕ್.

"ಬಸವಣ್ಣ ದೇವ ಗುಡಿ ಸಂದಿ ಹಿಡಿದು ಹೋಗಿ ಬರ್ತೀನಿ. ನೀವೇನು ಚಿಂತಿ ಮಾಡಾಬ್ಯಾಡ್ರೀ" ಎನ್ನುತ್ತ ಆಕೆ ಹೊಸಿಲು ದಾಟಿದಳು. ಅಂತಃಕರಣದ ಹೃದಯ ಅವಳದು. ಆದರೆ ಪೊಲೀಸರ ಗುಂಡಿಗೋ, ಧರ್ಮಾಂಧರ ಕೈಗೋ ಸಿಕ್ಕುಬಿಟ್ಟರೆ ಆಕೆಯ ಗತಿಯೇನು ?... ಮುಷ್ತಾಕ್ ಚಿಂತಿಸಿದ...

ಚಾಂದಬಿ ತನಗೆ ಪರಿಚಿತವಾಗಿದ್ದ ಸಂದಿಗಳನ್ನು ಆತಂಕದ ಹೆಜ್ಜೆಗಳಿಂದಲೇ ಕ್ರಮಿಸಿದ್ದಳು. ಅವಳನ್ನು ನೋಡುತ್ತಲೇ ಪದ್ಮಾ ಸಮಾಧಾನಪಡುತ್ತ ಹೇಳಿದಳು : "ಬಾ, ಒಳಗ. ದೇವರು ಬಂದಂಗ ಬಂದಿ, ನಮ್ಮವ್ವ. ರೂಪಾಗ ಹೆರಿಗಿ ಬ್ಯಾನಿ ಶುರು ಆದಂಗ ಕಾಣಸ್ತಾವು. ಇವರು ಬ್ಯಾರೆ ಮುಂಬೈಗೆ ಹೋಗ್ಯಾರ. ಸುಧಾ ಡಾಕ್ಟರು, ದವಾಖಾನಿಯಲ್ಲಿರ್ತೀನಿ ಕರ್‍ಕೊಂಡು ಬರ್‍ರಿ ಅಂದ್ರು. ನನ್ಗ ದಿಕ್ಕು ತಿಳೀದಂಗಾಗಿತ್ತು".

"ರಸ್ತಾದಾಗ ರಿಕ್ಷಾ, ಟಾಂಗಾ ಒಂದೂ ತಿರುಗ್ಯಾಡವಲ್ಲುವ, ರೂಪಾನ್ನ ದವಾಖಾನಿಗೆ ಕರ್‍ಕೊಂಡು ಹೋಗುದು ಹ್ಯಾಂಗರಿ ಅಕ್ಕಾ ? ಹೆರಿಗೆ ಇಲ್ಲೆ ಆಗ್ಲಿ ಬಿಡ್ರಿ, ನಾನು ರೂಪಾನ ಮುಂದಽ ಇರ್ತೀನಿ. ನೀವೇನು ಗಾಬರಿ ಆಗಬ್ಯಾಡ್ರಿ". ಹೆರಿಗೆ ಮಾಡಿಸಿದ ಅನುಭವದ ಧೈರ್ಯದಿಂದಲೇ ಹೇಳಿದ್ದಳು ಚಾಂದಬಿ.

"ರೂಪಾಗ ಇದ ಚೊಚ್ಚಲ ಹೆರಿಗೆ. ಇವರು ದವಾಖಾನಿಯಾಗ ಆಗ್ಲಿ ಅಂದಾರ. ಅವಳತ್ತಿ, ರೂಪಾ, ಗಂಡನ ಅಭಿಪ್ರಾಯನೂ ಅದಽ ಐತಿ" ಎನ್ನುತ್ತ ಪದ್ಮಾ ಒಳಗೆ ಹೋದಳು. ಚಾಂದಬಿ ಅವಳನ್ನು ಹಿಂಬಾಲಿಸಿದಳು.

ಕುಳಿತಿದ್ದ ರೂಪಾ ತುಟಿ ಕಚ್ಚುತ್ತ, ಎರಡೂ ಕೈಗಳನ್ನು ಚೆಲ್ಲಾಡತೊಡಗಿದ್ದಳು. ಪದ್ಮಾಳ ಮುಖದಲ್ಲಿ ಗಾಬರಿ ಒಡೆದುಕಾಣಿಸಿತು. ಚಾಂದಬಿ, ರೂಪಾನ ಹತ್ತಿರ ಕುಳಿತು "ಬೇಟಿ, ನೀನು ಚಂದದ ಮಗನ ತಾಯಿ ಆಗ್ತಿ, ತ್ರಾಸು ತಡಕೋರವ್ವ" ಎಂದು ಅವಳ ತಲೆ ನೇವರಿಸಿದಳು. ಒಡಲಾಳದ ಅಸಾಧ್ಯ ನೋವಿಗೆ ತಾನು ಆಳಲ್ಲ ಎನ್ನುವಂತೆ ರೂಪಾ ತೀವ್ರವಾಗಿ ಒದ್ದಾಡತೊಡಗಿದಳು.

ಆರು ವರ್ಷಗಳ ಹಿಂದೆಯೇ ಅವಳ ಮದುವೆಯಾದದ್ದು. ಗಂಡ ಶ್ರೀಕಾಂತ ಕೆಇಬಿನಲ್ಲಿ ಜೆ.ಇ. ಆಗಿದ್ದ. ದಾಂಪತ್ಯದಲ್ಲಿ ಅನೂನ ಪ್ರೀತಿಯಿತ್ತು. ತಂದೆಯೆನ್ನಿಸಿಕೊಳ್ಳುವ ಉಮೇದು ಇತ್ತಾದರೂ ಅದನ್ನು ಗಂಭೀರವಾಗಿ ಪರಿಗಣಿಸುವ ಪ್ರವೃತ್ತಿ ಅವನದಾಗಿರಲಿಲ್ಲ. ಈ ಬಗೆಗೆ ಧಾವಂತ ಇದ್ದುದು ರೂಪಾಳ ಅತ್ತೆ-ಮಾವಂದರಿಗೆ. ಮೊಮ್ಮಗ ಅಥವಾ ಮೊಮ್ಮಗಳ ಕಾಣುವ ಆಸೆ ಅವರಿಗೆ. ಶ್ರೀಕಾಂತ ರೂಪಾ ವೈದ್ಯರಲ್ಲಿ ಪರೀಕ್ಷಿಸಿಕೊಂಡದ್ದು ಅವರ ಒತ್ತಾಸೆಗೇ. ಇಬ್ಬರಲ್ಲೂ ದೋಷವಿರಲಿಲ್ಲ. ರೂಪಾಳಿಗೆ ಮಕ್ಕಳಾಗುತ್ತವೆಯೆಂದು ಡಾಕ್ಟರ್ ಭರವಸೆ ನೀಡಿದ್ದರು. ಅವಳತ್ತೆಗೆ ಸಮಾಧಾನವಾಗಿತ್ತು. ಅದೇ ಉತ್ಸಾಹದಲ್ಲಿ ದೇವರು-ದಿಂಡರು, ಹರಕೆಯೆಂದು ಆಕೆ ಸೊಸೆಯೊಂದಿಗೆ ಓಡಾಡಿದ್ದಳು. ಫಲವಂತಿಕೆ ಶೂನ್ಯವೆನಿಸಿತ್ತು. ಸಹನೆ ಕಳೆದುಕೊಂಡ ಅವಳು "ಸೊಸೆ ಗೊಡ್ಡು" ಎಂದು ತೀರ್ಮಾನಿಸಿದ್ದಳು. ರೂಪಾಳಿಗೆ ಕಿರಿಕಿರಿ ಶುರುವಿಟ್ಟುಕೊಂಡದ್ದು ಆಗಲೇ. ಅದು ವಿಪರೀತ ಅನಿಸಿದಾಗ ಶ್ರೀಕಾಂತ "ನಮಗ ಮಕ್ಕಳಾಗದಿದ್ರು ಚಿಂತೆ ಇಲ್ಲ, ಅನಾಥಾಶ್ರಮದ ಒಂದು ಮಗೂನ್ನ ತಂದು ನಾವೇ ಅದಕ್ಕೆ ತಾಯಿ-ತಂದೆ ಆಗ್ತೀವಿ, ನೀನು ರಾಮಾಯಣ - ಮಹಾಭಾರತ ಮಾಡಬ್ಯಾಡ" ಎಂದು ತಾಯಿಗೆ ಸ್ಪಷ್ಟವಾಗಿಯೇ ಹೇಳಿದ್ದ.

"ಅನಾಥ ಆಶ್ರಮದ ಕೂಸು ನಮ್ಮ ರಕ್ತದ್ದು ಹ್ಯಾಂಗಾಗತ್ತೊ ? ಬೇಕಾದ್ರ ಈ ಗೊಡ್ಡು ಮನಿಯಾಗ ಇರಲಿ. ನಿನ್ಗ ಇನ್ನೊಂದು ಕನ್ಯಾ ಹುಡುಕಿ ಮದುವಿ ಮಾಡ್ತೀನಿ" ಎಂದು ತಾಯಿ ತನ್ನ ನಿರ್ಧಾರ ತಿಳಿಸಿದ್ದಳು.

"ಮದುವಿ ಅನ್ನೊದು ಸಣ್ಣ ಹುಡುಗರ ಆಟಲ್ಲ, ರೂಪಾ ನನ್ನ ಹೆಂಡತಿ. ಕೊನೆತನಕ ಆಕೀನ ನನ್ನ ಹೆಂಡತಿ ಆಗಿರ್ತಾಳೆ". ಶ್ರೀಕಾಂತ ತನ್ನ ಆಖೈರು ಅಭಿಪ್ರಾಯ ತಿಳಿಸಿದ್ದ.

## ಅನಿರ್ವಚನೀಯ

ಕವಿತೆ ಹುಟ್ಟುತ್ತದೆ ! –
ಪ್ರೀತಿಯ ಹುಟ್ಟನ್ನು
ವಿವರಿಸಬಹುದೇ ?
ಕವಿತೆ ಸಂತೋಷ ಕೊಡುತ್ತದೆ ! –
ಪ್ರೀತಿಯ ಸ್ವರೂಪವನ್ನು
ವಿವರಿಸಬಹುದೆ ?

ಸಿ.ಪಿ.ಕೆ.
ಮೈಸೂರು

ಮಗನ ಮಾತಿನಿಂದ ಸಿಟ್ಟುಗೊಂಡ ಆಕೆ ''ಈ ಗೊಡ್ಡಿ ನಿನ್ಗ ಮಾಟಾ ಮಾಡಿಸ್ಯಾಳ'' ಎಂದು ಹಾರಾಡಿದ್ದಳು. ಅತ್ತೆಯ ಕೂರಲಗಿನ ಮಾತಿನಿಂದ ರೂಪಾ ನಿತ್ಯವೂ ಚಿತ್ರಹಿಂಸೆ ಅನುಭವಿಸುವಂತಾಗಿತ್ತು. ಮನಸ್ಸು, ದೇಹಗಳನ್ನು ನಿಸ್ತೇಜಿಸಿಕೊಂಡ ಮಗಳ ಬಗ್ಗೆ ತಾಯಿ ತಂದೆಗೂ ಚಿಂತೆ ಕಾಡತೊಡಗಿತ್ತು.

ವೈದ್ಯರ ನಂಬುಗೆ ನಿಜವೆನ್ನುವಂತೆ ರೂಪಾ ಗರ್ಭ ಧರಿಸಿದ್ದಳು. ಅವಳತ್ತೆ ಅವರಿ ಹೂವಾಗಿದ್ದಳು. ಸೊಸೆಯನ್ನು ನಾಜೂಕಾಗಿ ನೋಡಿಕೊಂಡಿದ್ದಳು. ಸೀಮಂತನ ಕೂಡ ಸಂಭ್ರಮದಿಂದಲೇ ಜರುಗಿತ್ತು. ಎಲ್ಲರೂ ಅವಳ ಹೆರಿಗೆ ಸುದ್ದಿಗಾಗಿ ಕಾತರಿಸುತ್ತಿದ್ದರು.



*　　　*　　　*

ಚಾಂದಬಿಗೆ ಈ ಹಕೀಕತ್ತು ಎಲ್ಲಾ ಗೊತ್ತು.

''ಯಾ ಪಾಕ್ ಪರವರ್ದಿಗಾರ್, ರೂಪಾ ಬೇಟಿಗೆ ಕರುಣಾ ತೋರ್ಸು, ಅವಳ ಹೆರಿಗೆ ಸುಸೂತ್ರ ಆಗ್ಲಿ'' ಎಂದು ಮನಸ್ಸಿನಲ್ಲಿಯೇ ದುಆ ಬೇಡಿದಳು ಆಕೆ. ಮಗಳು ತಳಮಳಿಸುವುದನ್ನು ನೋಡಲಾಗದೆ ಪದ್ಮಾ ''ಚಾಂದಬಿ, ಹ್ಯಾಂಗರ ಮಾಡಿ ರೂಪಾನ್ನ ದವಾಖಾನಿಗೆ ಕರ್ಕೊಂಡು ಹೋಗಬೇಕು'' ಎಂದು ಗಡಬಡಿಸಿದಳು. ಅವಳ ತುಮುಲವನ್ನು ಅರ್ಥಮಾಡಿಕೊಂಡ ಚಾಂದಬಿ ''ರಸ್ತಾದಾಗ ಯಾವುದಾರ ಗಾಡಿ ಬರ್ತಾವೇನೋ ನೋಡಿಬರ್ತೀನಿ'' ಎಂದು ಹೊರಬಂದಳು. ವಾಹನ ಸಿಗದಿದ್ದರೆ ಹೇಗೆ ? ಪದ್ಮಾ ತಹತಹಿಸತೊಡಗಿದಳು.

ಚಾಂದಬಿ ರಸ್ತೆಗಿಳಿದಾಗ ಆಕಾಶದಲ್ಲಿ ದಟ್ಟದಟ್ಟ ಮೋಡ, ರಣಗುಡುವ ಸೂರ್ಯ ಅದರೊಳಗಿಂದ ಇಣುಕತೊಡಗಿದ್ದ. ಅವನಿಗೂ ಕರ್ಫ್ಯೂನ ಅಂಜಿಕೆಯೇನೋ ಎಂದುಕೊಂಡಳಾಕೆ. ತುಸುದೂರ ರಸ್ತೆ ಕ್ರಮಿಸಿ ವಾಹನಗಳನ್ನು ನಿರೀಕ್ಷಿಸಿದಳು, ದೂರದಲ್ಲಿ ಎಲ್ಲೊ ಪೊಲೀಸ್ ಪೀಪಿನ ಸದ್ದು ಕೇಳಿತ್ತು. ಮರುಕ್ಷಣ ಅದೂ ಸ್ತಬ್ಧ. ನಿರಾಶೆಯಿಂದ ಮನೆಯ ಕಡೆಗೆ ಹೆಜ್ಜೆ ಕಿತ್ತಿಡುತ್ತಿರುವಂತೆ ಗಟಾರ್ ಪಕ್ಕದ ಬೇವಿನ ಮರಕ್ಕೆ ತಾಗಿಕೊಂಡು ತಳ್ಳುಗಾಡಿ ಅಡಿ ಮೇಲಾಗಿ ನಿಂತಿತ್ತು. ಒಂದು ಗಾಲಿಯ ಟೈಯಿರು, ಟ್ಯೂಬು ಮನುಷ್ಯನ ದೇಹದಿಂದ ಹೊರಬಿದ್ದ ಕರುಳಿನಂತೆ ಜೋತಾಡತೊಡಗಿದ್ದವು. ಗಾಡಿಯ ಅಕ್ಕಪಕ್ಕ ಬದನೆ, ಮೆಣಸಿನಕಾಯಿ, ಟೊಮ್ಯಾಟೊ, ಕೊತ್ತಂಬರಿ ಚೆಲ್ಲಾಪಿಲ್ಲಿಯಾಗಿ ಹರಡಿದ್ದವು. ಗಲಭೆಕೋರರ ದಾಳಿಗೆ ಸಿಕ್ಕ ತರಕಾರಿ ಗಾಡಿ ಅದು. ಅದರ ಮಾಲೀಕನ ಸ್ಥಿತಿ ಏನಾಯಿತೋ ? ಚಾಂದಬಿ ಮನಸ್ಸು ಮರುಗಿತು. ಮತ್ತೊಮ್ಮೆ ಗಾಡಿ ನೋಡುತ್ತಿದ್ದಂತೆ ಅವಳ ಮಿದುಳಿನಲ್ಲಿ ಒಂದು ಉಪಾಯ ಹೊಳೆಯಿತು. ಧಾವಿಸಿ ಮನೆಯತ್ತ ಬಂದು ''ಪದ್ಮಕ್ಕ, ರಸ್ತಾದಾಗ ಒಂದೂ ಗಾಡಿ ಇಲ್ರಿ, ಅಲ್ಲೊಂದು ತಳ್ಳುಗಾಡಿ ಐತಿ, ನೀವು ತಪ್ಪು ತಿಳಿಬ್ಯಾಡ್ರಿ, ನೀವು ಹೂಂ ಅಂದ್ರ ಹೋಗಿ ಗಾಡಿ ತರ್ತೀನಿ. ರೂಪಾ ಬೇಟೀನ ಅದರ ಮ್ಯಾಲೆ ಮಲಗಸ್ಕೊಂಡು ದವಾಖಾನಿಗೆ ಹೋಗೂಣು'' ಎಂದಳು.

ತಳ್ಳುಗಾಡಿಯಲ್ಲಿ ಮಗಳನ್ನು ಕರೆದುಕೊಂಡು ಹೋಗುವುದೆ ? ಎಲ್ಲ ಅನುಕೂಲವಿದ್ದೂ ಇಂಥ ಪರಿಸ್ಥಿತಿ ಬಂದುದಕ್ಕೆ ಪದ್ಮ ಕಸಿವಿಸಿಗೊಂಡಳು. ಮಗಳ ನರಳಾಟ ಆ ಕಸಿವಿಸಿಯನ್ನು ನಿಮಿಷಾರ್ಧದಲ್ಲಿ ದೂರ ಮಾಡಿತು.''ಚಾಂದಬಿ, ನಮ್ಮ ಪುಣ್ಯಕ್ಕೆ ತಳ್ಳುಗಾಡಿಯಾರ ಸಿಕ್ತಲ್ಲ. ಲಗೂನ ತಗೊಂಡು ಬಾ'' ಎಂದಳು ಪದ್ಮಾ.

ಚಾಂದಬಿ ಅವಸರದಿಂದ ಹೋದಳು. ಗಾಡಿಯನ್ನು ಚಿತ್ತ ಮಾಡಿ, ರಸ್ತೆಗೆ ತಂದು, ಉರುಳಲು ಮೊಂಡುತನ ಮಾಡಿದ ಗಾಡಿಯನ್ನು ಜೋರಾಗಿ ತಳ್ಳುತ್ತ ಮನೆಯ ಮುಂದೆ ನಿಲ್ಲಿಸಿದಳು. ಗಾಡಿಯ ಅವಸ್ಥೆ ನೋಡಿ ಪದ್ಮಾ ಚಿಂತೆಗೊಳಗಾದಳು. ''ನಾನು ಗಾಲಿ ರಿಪೇರಿ ಮಾಡ್ತಿನಿ, ನೀವು ದಪ್ಪನ ಜಮಖಾನಾ ತಗೊಂಡು ಬರ್ರಿ'' ಎಂದ ಚಾಂದಬಿ ಹರಿದ ಟ್ಯೂಬು-ಟೈಯರ್‌ನ್ನು ಗಾಲಿಗೆ ಹೊಂದಿಸಿ ಅದರ ಮೇಲೆ ಬಟ್ಟೆ ಸುತ್ತಿ ವಾಯರ್ ಬಿಗಿದಳು. ಗಾಡಿ ಉರುಳಲು ಸಜ್ಜುಗೊಂಡುದು ಪದ್ಮಾಳಿಗೆ ಸಂತೋಷ ತಂದಿತು.

ರೂಪಾಳನ್ನು ಗಾಡಿಯ ಮೇಲೆ ಮಲಗಿಸಿ ಇನ್ನೇನು ಗಾಡಿ ತಳ್ಳಬೇಕೆನ್ನುವಷ್ಟರಲ್ಲಿ, ''ಚಾಂದಬಿ, ನನಗ ಅಂಜಿಕಿ ಸುರುವಾತು ನೋಡು, ಗಲಭೆ ಮಾಡೋರು ನಮ್ಮ ಮ್ಯಾಲೆ ಬಿದ್ರ ಏನ್ ಗತಿ ಅಂತ ?'' ಎಂದು ಅನುಮಾನಿಸಿದಳು ಪದ್ಮಾ.

''ಅಕ್ಕಾ, ನಾನೀದ್ದೀನಲ್ಲ ಬರ್ರಿ, ಬೇಟಿ ತ್ರಾಸು ಮಾಡ್ಕೋಳ್ಯಾಕ ಹತ್ಯಾಳ, ವಿಚಾರ ಮಾಡ್ಕೊಂತ ನಿಂದ್ರೊ ಟೈಂ ಅಲ್ಲ ಇದು. ಯಾವ ಪುಂಡ್ರು ಬರ್ತಾರ, ನಮ್ಮನ್ನ ತಡೀತಾರ ನಾನೂ ನೋಡ್ತೀನಿ'' ಎಂದು, ಜಬರ್‌ದಸ್ತಾಗಿ ಹೇಳಿ ಗಾಡಿಯನ್ನು ತಳ್ಳಿಯೇಬಿಟ್ಟಳು ಚಾಂದಬಿ.

*　　　*　　　*

ತಳ್ಳುಗಾಡಿಯ ಸದ್ದು ರಸ್ತೆಯ ನೀರವತೆಯನ್ನು ಹೆದರಿಸುವಂತೆ ಇತ್ತು.

ಚಾಂದಬಿ ಸೀರೆಯ ಸೆರಗನ್ನು ಸೊಂಟಕ್ಕೆ ಭದ್ರವಾಗಿ ಸಿಕ್ಕಿಸಿಕೊಂಡು ಗಂಡಸಿಗಿಂತಲೂ ದಿಟ್ಟೆಯಾಗಿ ಗಾಡಿ ನೂಕುವುದನ್ನು ಪದ್ಮಾ ಬೆರಗುಗಣ್ಣುಗಳಿಂದ ನೋಡತೊಡಗಿದ್ದಳು.

ಗಾಂಧಿನಗರದಿಂದ ದವಾಖಾನೆಗೆ ಹೋಗಲು ಒಂದು ತಾಸಾದರೂ ಬೇಕು. ಸಂದಿಗಳನ್ನು ಬಳಸುತ್ತ ಹೋದರೆ ಸಮಯ ತುಸು ಕಡಿಮೆ ಹಿಡಿಯುವುದು. ಆದರೆ ಇಕ್ಕಟ್ಟಾದ ಮಾರ್ಗದಲ್ಲಿ ಗಾಡಿ ತಳ್ಳುವುದು ಪ್ರಯಾಸದ ಕೆಲಸ. ಹೀಗಾಗಿ ಚಾಂದಬಿ ನೇರ ರಸ್ತೆಯನ್ನೇ ಹಿಡಿದಿದ್ದಳು.

ಮಧ್ಯೆ ಜುಮ್ಮಾ ಮಸೀದಿ. ತುಸು ದೂರಕ್ಕೆ ಹೋದರೆ ಗಣೇಶ ಮತ್ತು ಹನುಮದೇವರ ಮಂದಿರಗಳು. ಊರಲ್ಲಿ ಕೋಮುಗಲಭೆ ಶುರುವಾದರೆ ಎಲ್ಲರ ಗಮನ ಈ ಪ್ರದೇಶದ ಮೇಲೆಯೇ ಕೇಂದ್ರೀಕೃತ. ಮತಾಂಧರಿಂದ ದೇವರ ನೆಲೆಗಳಿಗೂ ಆತಂಕ ಎಂದುಕೊಂಡಳು ಚಾಂದಬಿ.

ಮಸೀದಿಯ ಮಿನಾರುಗಳನ್ನು ಕಂಡಾಗ ಆಕೆಗೆ ಗಾಬರಿಯೊ ಗಾಬರಿ. ಸಾಮಾನ್ಯವಾಗಿ ದ್ವೇಷಮಯ ವಾತಾವರಣ ಇರುವಾಗ ಪುಂಡ-ಪೋಕರಿಗಳು ಮಂದಿರ-ಮಸೀದಿಗಳಲ್ಲಿ ಅವಿತಿಟ್ಟುಕೊಂಡು ಗದ್ದಲಕ್ಕೆ ಪ್ರಚೋದನೆ ನೀಡುವರೆಂಬ ಪ್ರತೀತಿ ಇತ್ತು. ಕಲ್ಲು ಬೀಸುವ, ದೇವರು-ಧರ್ಮಗಳ ಹೆಸರಿನಲ್ಲಿ ಘೋಷಣೆ ಕೂಗುವ ಬಗ್ಗೆ ಕೇಳಿದ್ದ ಚಾಂದಬಿಯ ಮೈಯನ್ನೊಮ್ಮೆ ಜುಮ್ಮೆಂದಿತು.

ಹತ್ತಿರ ಬರುತ್ತಲೆ ಮಸೀದಿಯ ಮಿನಾರುಗಳ ಮೇಲೆ ಹಾರುತ್ತಲೋ, ಕುಳಿತು ರೆಕ್ಕೆಗಳನ್ನು ಪಟಪಟ ಬಡಿಯುತ್ತಲೋ ಗುಟುರ್‌... ಗುಟುರ್‌... ಎನ್ನುತ್ತಲೋ ಇರುವ ನಾಲ್ಕಾರು ಚಂದದ ಪಾರಿವಾಳಗಳನ್ನು ನೋಡುತ್ತಲೇ ಆಕೆಯ ಮನಸ್ಸಿಗೆ ಸಮಾಧಾನವೆನಿಸಿತು.

ಆಕಾಶದಲ್ಲಿ ಈಗ ಅಂಥ ದಟ್ಟ ಮೋಡಗಳಿರಲಿಲ್ಲ. ಉರಿ ತಣ್ಣಗಾಗಿಸಿಕೊಂಡಿದ್ದ ಸೂರ್ಯ ಹೊಂಬಣ್ಣಕ್ಕೆ ತಿರುಗತೊಡಗಿದ್ದ. ಅವನ ಕಿರಣಗಳು ಮಂದಿರಗಳ, ಗೋಪುರಗಳ ಮೇಲೆ ಬಿದ್ದು ಕಳಶಗಳು ಫಳಫಳ ಹೊಳೆಯತೊಡಗಿದ್ದವು. ''ಇಲ್ಲೇನೂ ಗದ್ದಲ ಇಲ್ಲ'' ಎಂದಳು ಪದ್ಮಾ.

''ದೇವರು ಇರುವ ಜಾಗಾದಾಗ ರಾಕ್ಷಸರು ಇರುದಿಲ್ರಿ ಅಕ್ಕಾ !'' ಕೂಡಲೇ ಉದ್ಗರಿಸಿದಳು ಚಾಂದಬಿ.

''ರಾಕ್ಷಸರಿಗೆ ದೇವರ ಅಂಜಿಕಿ ಇದ್ದಿದ್ರ ಇಂಥ ಗೋಳಾಟ ಎಲ್ಲಿರ್‍ತಿತ್ತು? ನೀಚರು ನೆಮ್ಮದಿಯಿಂದ ಬದುಕಾಕ ಬಿಡಂಗಿಲ್ಲ. ಮ್ಯಾಲಿಂದ ಮ್ಯಾಲೆ ನಕ್ಷತ್ರಿಕ ಕಾಡಿದ ಹಂಗ ಕಾಡತಾವು.'' ಪದ್ಮಾಳ ಮಾತಿನಲ್ಲಿ ಬೇಸಿತ್ತು.

ತಳ್ಳುಗಾಡಿಯ ಚಕ್ರಗಳು ಉರುಳುತ್ತಿದ್ದವು.

''ಅವ್ವಾ, ನಾ ಸಾಯ್ತಿನ್ರಿ,'' ರೂಪಾ ಒಡಲ ನೋವಿನಿಂದ ತನ್ನ ತಲೆಯನ್ನು ಅತ್ತಿತ್ತ ಹೊರಳಾಡಿಸುತ್ತಿದ್ದಳು. ಪಕ್ಕದಲ್ಲಿ ಹೆಜ್ಜೆ ಹಾಕುತ್ತಿದ್ದ ಪದ್ಮಾಳ ಕೈಗಳು ಮಮತೆಯಿಂದ ಮಗಳ ಮೈಯನ್ನು ನೇವರಿಸುತ್ತಿದ್ದವು. ''ದವಾಖಾನಿ ಬಹಳ ದೂರಿಲ್ಲ. ಜರಾ ನೋವು ತಡ್ಕೋ ಬೇಟಿ.'' ಗಾಡಿ ದೂಡುತ್ತಲೇ ಸಮಾಧಾನ ಹೇಳುತ್ತಿದ್ದಳು.

ಹಣೆಯ ಮೇಲಿನ ಬೆವರನ್ನು ಲೆಕ್ಕಿಸದೆ ಗಾಡಿ ತಳ್ಳುತ್ತಿದ್ದ ಚಾಂದಬಿಯನ್ನು ಪದ್ಮಾ ಕಣ್ಣು ತುಂಬಿಕೊಂಡಳು. ಎಂಥ ಅಗಾಧ ಒಡಲು ಆಕೆಯದು; ಕರುಣೆಯ ಕಡಲು ! ಎಂಥ ಕಷ್ಟದಲ್ಲಿ ನೆರವಾದಳು. ಅವಳನ್ನು ಕೆಲಸದವಳೆಂದು ಕರೆಯಲಾದೀತೆ? ಆಕೆ ತನಗೆ ಒಡಹುಟ್ಟಿದವಳೇ ಇರಬೇಕು. ಭಯಾನಕವಾದ ಗಳಿಗೆಯಲ್ಲಿ ಆಕೆ ತೋರಿಸಿದ ಎದೆಗಾರಿಕೆಗೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಪದ್ಮಾಳ ಮನಸ್ಸಿನ ತುಂಬಾ ಚಾಂದಬಿ ವಿಜೃಂಭಿಸಿದಳು.

ಮಾತೃಭಾಷಾ ಶಿಕ್ಷಣ :

ಮಾತೃಭಾಷಾ ಶಿಕ್ಷಣ.. ಇಟ್ಸ್ ಫೈನ್ ! ವೆರಿಗುಡ್ ಫಾರ್ ಫ್ಯೂಚರ್... !!!

''ನಿನ್ನ ರಟ್ಟಿ ಸೋತಿರಬೇಕು ಚಾಂದಬಿ ಈ ಕಡೆಗೆ ಬಾ. ನಾನೂ ಒಂದೀಟು ಗಾಡಿ ನೂಕ್ತಿನಿ'' ಅವಳ ಹತ್ತಿರ ಬಂದಳು ಪದ್ಮಾ.

''ಬ್ಯಾಡ್ರಿ ಅಕ್ಕಾ. ನೀವು ಬೇಟಿ ಕಡೆಗೆ ಲಕ್ಷ್ಯ ಕೊಡ್ರಿ ಸಾಕು. ಇನ್ನೆಷ್ಟು ಹೊತ್ತು ದವಾಖಾನಿ ಮುಟ್ಟೂದು ?'' ಎಂದು ಇನ್ನಷ್ಟು ಬಲವಾಗಿ ಗಾಡಿ ತಳ್ಳತೊಡಗಿದಳು ಚಾಂದಬಿ.

ಊರಿನ ಹೃದಯಭಾಗವಾದ ಭಾರತ ಸರ್ಕಲ್ ಕಂಡಿತು. ಅದರ ಬಲಕ್ಕೆ ತಿರುಗಿಕೊಂಡರೆ ಇಪ್ಪತ್ತು ನಿಮಿಷಗಳ ದಾರಿ ದವಾಖಾನೆಗೆ. ದೂರದಿಂದಲೇ ನಾಲ್ಕಾರು ಮಂದಿ ಪೊಲೀಸರು ಕಂಡರು, ಎಲ್ಲರ ಕೈಯಲ್ಲೂ ಬಂದೂಕು. ಪದ್ಮಾಳ ಕಾಲು ಥರಗುಟ್ಟಿದವು. ಚಾಂದಬಿ ಗಾಡಿನ ನಿಧಾನವಾಗಿ ನೂಕತೊಡಗಿದಳು.

ಅವರನ್ನು ನೋಡಿದ ಪೊಲೀಸರು ಬಂದೂಕುಗಳನ್ನು ಮೇಲೆತ್ತಿ ದೂರದಿಂದಲೇ ಕೈ ಸಂಜ್ಞೆಯಿಂದ ಹೊರಟುಹೋಗಲು ಸೂಚಿಸಿದರು.

ಚಾಂದಬಿ ಗಾಡಿ ನಿಲ್ಲಿಸಿದಳು. ಪೊಲೀಸರು ದಾಪುಗಾಲು ಇಡುತ್ತ ಹತ್ತಿರ ಬರತೊಡಗಿದರು.

''ಅಕ್ಕಾರ, ನೀವು ರೂಪಾ ಬೇಟಿ ಕಡೆಗೇ ನಿಂತ್ಗೋರಿ...'' ಎನ್ನುತ್ತ ಪೊಲೀಸರ ಎದುರಾಗಿ ನಡೆದಳು ಚಾಂದಬಿ.

''ನೀನು ಅಲ್ಲೇ ನಿಂತ್ಗೊ'' ಪೊಲೀಸನೊಬ್ಬ ವಕ್ರವಾಗಿ ಕೂಗಿ ಹೇಳಿದ.

ಚಾಂದಬಿ ಮತ್ತೆ ನಾಲ್ಕು ಹೆಜ್ಜೆ ಎತ್ತಿಡುವಷ್ಟರಲ್ಲಿ ಪೊಲೀಸರು ಹತ್ತಿರ ಬಂದಿದ್ದರು.

''ಜೀವದ ಮ್ಯಾಲಿನ ಆಸೆ ಬಿಟ್ಟು ಬಂದಿಯೇನು ?'' ಮತ್ತೊಬ್ಬ ಪೊಲೀಸ್ ಕಣ್ಣು ಹಿಗ್ಗಿಸಿ ಕೇಳಿದ. ಅವನು ಬಂದೂಕಿನ ತುದಿ ತನ್ನದೆಯತ್ತ ಗುರಿ ಮಾಡಿಕೊಂಡು ನಿಂತಿದ್ದರೂ ಚಾಂದಬಿ ''ಸಾಹೇಬರ, ನಮ್ಮ ಬೇಟಿಗೆ ಹೆರಗಿ ಬ್ಯಾನಿ ಚಾಲೂ ಆಗ್ಯಾವರಿ. ಒಂದೇ ಸವನ ಒದ್ದ್ಯಾಡಾಕ ಹತ್ಯಾಳ. ದವಾಖಾನಿಗೆ ಕರ್ಕೊಂಡು ಹೊಂಟೀವಿರಿ'' ಎಂದಳು ಧೈರ್ಯದಿಂದ.

''ಊರಾಗ ಕರ್ಫ್ಯೂ. ಈಗ್ಯಾವ ಸುಡಗಾಡ ದವಾಖಾನಿ ಸಿಗತಾವು ನಿಮಗ ? ಮನಿಗೆ ತಿರುಗಿ ಹೋಗ್ರಿ'' ಪಿ.ಎಸ್.ಆಯ್. ಒರಟಾಗಿ ಗದರಿಸಿದ.

ಪದ್ಮಾ ಅಲ್ಲಿ ತನಕ ಗಾಡಿ ತಳ್ಳಿಕೊಂಡು ಬಂದಳು.

ರೂಪಾಳ ನರಳಾಟ ಇನ್ನಷ್ಟು ತೀವ್ರಗೊಂಡಿತು.

''ಸಾಹೇಬರ, ಈ ಹುಡುಗಿ ಜೀವಾ ಉಳಿಬೇಕು, ಅವಳ ಹೊಟ್ಯಾನ ಕೂಸು ಬದುಕಬೇಕು. ಇಲ್ಲಂದ್ರ ಈ ಬೇಟಿ ಜಿಂದಗೀನ ಬರ್ಬಾದ್ ಆಗತ್ರಿ'' ಎಂದು ಚಾಂದಬಿ ರೂಪಾಳ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿವರಿಸಿದಳು.

''ಜನಾ ಕಂಡಲ್ಲೆ ಗುಂಡು ಹಾಕಬೇಕಂತ ಆಜ್ಞಾ ಆಗೇತಿ. ನಿಮ್ಮ ಕಥಿ ಕೇಳ್ಕೊಂತ ಕುಂದ್ರಾಕ ಟೈಂ ಇಲ್ಲ. ನಡ್ರಿ ಇಲ್ಲಿಂದ'' ಪೊಲೀಸನೊಬ್ಬ ಅವಳೆದುರು ಬಂದೂಕು ಹಿಡಿದ.

''ಸಾಹೇಬರ ನಿಮ್ಮ ಬಂದೂಕಿಗೆ ದುಷ್ಟರನ ಕೊಲ್ಲುವ ಶಕ್ತಿ ಐತಿ. ಆದ್ರ ಕಷ್ಟದಾಗ ಇದ್ದೋರನ್ನ ರಕ್ಷಣಾ ಮಾಡುವ ಪ್ರೀತಿ ನಿಮ್ಮ ಎದಿಯಾಗೈತ್ರಿ'' ಚಾಂದಬಿ ಹೇಳಿದಳು.

ಅವಳ ಮಾತು ಪೊಲೀಸರ ಅಂತರಾಳ ತಟ್ಟಿತೇನೊ, ಅವರು ಬಂದೂಕುಗಳನ್ನು ಕೆಳಗಿಳಿಸಿ ರೂಪಾಳತ್ತ ನೋಡಿದರು.

''ಸುಧಾ ಡಾಕ್ಟರು ದವಾಖಾನ್ಯಾಗ ಅದಾರಿ, ಮಗಳನ್ನ ಅವರ ಕರ್ಕೊಂಡು ಬಾ ಅಂದ್ರು, ನಮಗ ಒಂದೂ ಗಾಡಿ ಸಿಗಲಿಲ್ಲ. ನಮ್ಮ ಯಜಮಾನರೂ ಊರಾಗ ಇಲ್ಲ, ನಮ್ಮ ಚಾಂದಬಿ ಈ ಗಾಡಿ ಹುಡುಕಿ ತಂದ್ಲು'' ಇಷ್ಟು ಹೇಳುವುದರೊಳಗೆ ಪದ್ಮಾಳ ಕಣ್ಣಲ್ಲಿ ನೀರೊಡೆದಿತ್ತು.

ಹಿಂದೂ-ಮುಸ್ಲಿಮರಲ್ಲಿ ಮನಸ್ತಾಪ ಹುಟ್ಟಿಸುವ ಹಲಾಲಕೋರ ಮನಸ್ಸುಗಳಿಗೆ ಪದ್ಮಾ-ಚಾಂದಬಿಯರ ಮನುಷ್ಯ ಸಂಬಂಧ, ಒಡಲಾಳದ ತುಡಿತ ಅರ್ಥವಾಗಲು ಸಾಧ್ಯವೆ? ಧರ್ಮಾಂಧರಿಗೆ ನಾಗರಹಾವಿನಂತೆ ಹೆಡೆ ಬಿಚ್ಚುವುದು, ನಿಷ್ಪಾಪಿಗಳನ್ನು ಕೊಲ್ಲುವುದಷ್ಟೆ ಗೊತ್ತು. ಮತ್ತದಕ್ಕೆ ಧರ್ಮದ ಅಹಮಿಕೆ ಬೇರೆ. ಕರುಣೆಯ ಗರ್ಭದಿಂದ ಧರ್ಮ ಹುಟ್ಟಿದೆ. ಎಲ್ಲರನ್ನೂ ಬದುಕಿಸಿ ಬಾಳಿಸುವ ಮಾನವೀಯ ಗುಣ ಅದರದು. ಈ ಸತ್ಯವನ್ನು ಆವರಣದೊಳಗೆ ಹುದುಗಿಸಿಟ್ಟು, ತಮ್ಮ ಸ್ವಾರ್ಥಕ್ಕೆ ಅದನ್ನು ವ್ಯಾಖ್ಯಾನಿಸುವ ರಾಕ್ಷಸರಿಗೆ ಮನುಷ್ಯ ಪ್ರೀತಿ ಬೇಕಾಗಿಲ್ಲ, ಎಂದೆಲ್ಲಾ ಆಲೋಚಿಸತೊಡಗಿದ್ದ ಪಿ.ಎಸ್.ಆಯ್. ವಾಸ್ತವಕ್ಕೆ ಬಂದು,

''ಎರಡೂ ಕಡೆಯ ಸೈತಾನರು ಮಾರಕಾಸ್ತ್ರಗಳನ್ನು ಹಿಡ್ಕೊಂಡು, ತಲೆಕೆಟ್ಟವರಂಗ ತಿರುಗಾಡಲಿಕ್ಕೆ ಹತ್ಯಾರ. ರಕ್ತದ ರುಚಿ ಹತ್ತಿದ ಮತಾಂಧರಿಗೆ ಮನುಷ್ಯರು ಕಾಣ್ಸುದಿಲ್ಲ, ಊರಾಗ ಹೆಜ್ಜೆ ಹೆಜ್ಜೆಗೂ ಅಪಾಯ ಐತಿ. ನೀವು ಜಲ್ದಿ ಹೋಗಿ ದವಾಖಾನಿ ಸೇರ್ಕೋರಿ. ಅಲ್ಲಿತನಕ ನಮ್ಮ ಪೊಲೀಸರು ನಿಮ್ಮ ಕೂಡ ಬರ್ತಾರ. ನಿಜಗುಣ, ಸಮದ್ ನೀವಿಬ್ಬರೂ ಈ ಹೆಣ್ಮಕ್ಕಳನ್ನು ದವಾಖಾನಿವರೆಗೂ ಹೋಗಿ ಬಿಟ್ಟು ಬರ್‍ರಿ'' ಎಂದು ಆಜ್ಞಾಪಿಸಿದರು.

ಚಾಂದಬಿ, ಪದ್ಮಾಳ ಕಣ್ಣುಗಳು ಅರಳಿಕೊಂಡವು. ಪಿ. ಎಸ್. ಆಯ್. ಅವರ ಕಣ್ಣಲ್ಲಿ ದೇವರಾಗಿ ವಿಜೃಂಭಿಸಿದ. ಅವರು ಅವನಿಗೆ ಕೈ ಮುಗಿದು ಕೃತಜ್ಞತೆ ಸೂಚಿಸಿದರು. ಚಾಂದಬಿ ಗಾಡಿ ತಳ್ಳಲು ಕೈಹಚ್ಚಿದಳು.

ಸಮದ್ ಮತ್ತು ನಿಜಗುಣ ಬಂದೂಕುಗಳನ್ನು ಹೆಗಲಿಗೆ ಹಾಕಿಕೊಂಡು ''ನೀವು ಸರಿರಿ'' ಎಂದು ಗಾಡಿಯನ್ನು ತಳ್ಳತೊಡಗಿದರು.

ಅವರು ದವಾಖಾನೆ ಸೇರುವುದರೊಳಗೆ ಸೂರ್ಯ ಅಸ್ತಮಿಸಿದ್ದ.

ವೈದ್ಯರು ತುರ್ತಾಗಿ ರೂಪಾಳನ್ನು ಹೆರಿಗೆ ಕೋಣೆಗೆ ಸಾಗಿಸಿದರು.

ಸಿಜೇರಿಯನ್‌ಗಾಗಿ ಅವರು ಸಿದ್ಧತೆ ಮಾಡಿಕೊಂಡಾಗಿತ್ತು. ಆದರೆ ರೂಪಾಳ ಹೆರಿಗೆ ತಡವಾಗಲಿಲ್ಲ, ನಾರ್ಮಲ್ಲಾಗಿ ಆಕೆ ಗಂಡುಕೂಸಿಗೆ ಜನ್ಮ ನೀಡಿದಳು. ಆಸ್ಪತ್ರೆಯ ಆವರಣದಲ್ಲಿದ್ದ ಮರಗಳಲ್ಲಿ ಹಕ್ಕಿಗಳ ಕಲರವ ಕೇಳಿಸಿತು. ಕೂಸಿನ ಅಳುವಿನ ಧ್ವನಿ ಅದರೊಂದಿಗೆ ಮೇಳೈಸಿತು.

ಪದ್ಮಾ-ಚಾಂದಬಿ ನಿರಾತಂಕವಾಗಿ ಉಸಿರಾಡಿದರು. ರೂಪಾಳ ಮುಖದಲ್ಲಿ ಹೂನಗು, ಸಂಜೆಯ ಆಕಾಶ ಶುಭ್ರವಾಗಿತ್ತು. ಅಲ್ಲಿ ನಕ್ಷತ್ರಗಳು ಫಳಫಳಿಸತೊಡಗಿದ್ದವು. ಮಧ್ಯೆ ಚಂದ್ರ ಚಂದವೆನಿಸಿದ್ದ. ಅವನ ತಂಪು ಬೆಳಕು ಸೂರ್ಯನುರಿದ ಭೂಮಿಯನ್ನು ಮೆಲ್ಲಗೆ ಆವರಿಸತೊಡಗಿತು.

---

ಅಬ್ಬಾಸ್ ಮೇಲಿನಮನಿ
ಆಸ್ಮಾ ಪ್ರಕಾಶನ, ಹುಸೇನಪೇಟ, ಗುಳೇದಗುಡ್ಡ - ೫೮೭೨೦೩

# ವೈಜ್ಞಾನಿಕ ಮನೋಭಾವ

**ಪ್ರಥಮ ನೋಟಕ್ಕೆ ನಮ್ಮ ಮುಂದಿರುವ ಸಮಸ್ಯೆಗಳು ಅಗಾಧವೆಂದೆನಿಸಬಹುದು. ಆದರೆ ಅವು ಪರಿಹರಿಸಲಾಗದಂತಹ ಸಮಸ್ಯೆಗಳೇನಲ್ಲ. ಕಳೆದ ಕೆಲವು ದಶಕಗಳಲ್ಲಿ ವಿಜ್ಞಾನ ಸಾಧಿಸಿರುವ ಗಮನಾರ್ಹ ಪ್ರಗತಿಯನ್ನು ನಾವು ಮನಗಾಣಬೇಕು. ವೈಜ್ಞಾನಿಕ ವಿಧಾನವನ್ನು ಸರಿಯಾದ ಮಾರ್ಗದಲ್ಲಿ ಅನುಸರಿಸಿದಾಗ ಭವಿಷ್ಯ ಉತ್ತಮವಾಗಲಿದೆ ಎಂಬುದು ವಾಸ್ತವ. ಚಂದ್ರನಲ್ಲಿಗೆ ಮಾನವನ ಪಯಣ, ಮಂಗಳನ ಅಂಗಳದಲ್ಲಿ ಇಳಿದ ನೌಕೆ, ಉಪಗ್ರಹಗಳ ಮೂಲಕ ನೀಡಿದ ದೂರದರ್ಶನದ ಶಿಕ್ಷಣ, ಸಂವಹನದಲ್ಲಿ ಉಂಟಾದ ಕ್ರಾಂತಿಯಿಂದ ಅತಿದೂರದಲ್ಲಿರುವವರೂ ಸಮೀಪ ವಾಗಿರುವುದು, ವೈದ್ಯಕೀಯ ವಿಜ್ಞಾನ, ಜೀವಶಾಸ್ತ್ರ, ಕೃಷಿಕ್ಷೇತ್ರಗಳಲ್ಲಾಗಿರುವ ಪ್ರಗತಿ – ನಮ್ಮ ಕಣ್ಣ ಮುಂದಿರುವ ವೈಜ್ಞಾನಿಕ ಪವಾಡ – ಅಚ್ಚರಿಗಳಲ್ಲವೇ ?**





ಕೆಲವು ವರ್ಷಗಳ ಹಿಂದೆ ನಾನು ಒಂದು ಅಂತರರಾಷ್ಟ್ರೀಯ ಹಾಗೂ ಅಂತರ್ ಶಿಸ್ತೀಯ ಸಮಾವೇಶದಲ್ಲಿ ಭಾಗವಹಿಸಿದ್ದೆನು. ಇಪ್ಪತ್ತೊಂದನೆ ಶತಮಾನದಲ್ಲಿ ಮಾನವ ಎದುರಿಸಬೇಕಾದ ಸಮಸ್ಯೆಗಳ ಬಗ್ಗೆ ಚರ್ಚಿಸಲು ಸಮಾವೇಶವನ್ನು ಸಂಘಟಿಸಲಾಗಿತ್ತು. ಸಹಜವಾಗಿ ಜಾಗತಿಕ ಪರಿಸರ, ಜನಸಂಖ್ಯಾ ನಿಯಂತ್ರಣ, ಆಹಾರದ ಲಭ್ಯತೆ, ಸಂವಹನ, ಶಿಕ್ಷಣ, ವಿಜ್ಞಾನ ಮತ್ತು ತಂತ್ರಜ್ಞಾನ ಮುಂತಾದ ಪ್ರಮುಖ ವಿಷಯಗಳ ಬಗ್ಗೆ ವಿಚಾರಮಂಥನ ನಡೆಯುತ್ತಿತ್ತು. ಸಮಾವೇಶಕ್ಕೆ ಸಂಬಂಧಿಸಿದಂತೆ ವಿಷಯಗಳ ಬಗ್ಗೆ ಒಬ್ಬರಾದ ನಂತರ ಮತ್ತೊಬ್ಬ ಭಾಷಣಕಾರರು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದರು. ವಿವಿಧ ಭಕ್ಷ್ಯಗಳಿರುವ ಭೋಜನಕೂಟದಲ್ಲಿ ಅಗತ್ಯವಾಗಿ ಇರಲೇ ಬೇಕಾದ ಉಪ್ಪಿನ ಬಟ್ಟಲು ಇಲ್ಲವಾದರೆ ಆಗುವ ಆತಂಕ ನನ್ನಲ್ಲಿ ಆಗ ಉಂಟಾಗುತ್ತಿತ್ತು. ಸಮಾವೇಶದ ಯಶಸ್ಸಿಗೆ ಅಗತ್ಯವಾದ ವೈಜ್ಞಾನಿಕ ಮನೋಭಾವವೇ ಆ ಉಪ್ಪಿನ ಬಟ್ಟಲು. ರುಚಿಕಟ್ಟಾದ ಊಟಕ್ಕೆ ಉಪ್ಪು ಪ್ರಮುಖಾಂಶವಾಗಿರುವಂತೆ ಪ್ರಸ್ತುತ ಮತ್ತು ಭವಿಷ್ಯದಲ್ಲಿ ಮಾನವ ಎದುರಿಸಬೇಕಾದ ಸವಾಲುಗಳ ವಿರುದ್ಧದ ಸಮರಕ್ಕೆ ಬೇಕಾದ ಮಾನವನ ಬೌದ್ಧಿಕ ಚೌಕಟ್ಟಿಗೆ ವೈಜ್ಞಾನಿಕ ಮನೋಭಾವ ಅಗತ್ಯವಾದ ಪ್ರಮುಖಾಂಶ.

ವೈಜ್ಞಾನಿಕ ಮನೋಭಾವ ಎಂದರೇನು ? ಹಿಂದಿನ ಕಾಲಕ್ಕೆ ಹೋಲಿಸಿದರೆ ಇಂದು ಅದು ಹೆಚ್ಚು ಪ್ರಸ್ತುತವೇಕೆ ? ಅದು ಆಯಾ ವ್ಯಕ್ತಿಯ ಸ್ವಭಾವವೇ ? ಅಥವಾ ಅದನ್ನು ಸಮಾಜಕ್ಕೆ ಸಂಸ್ಕೃತಿಗೆ ಹಾಗೂ ನಾಗರಿಕತೆಗಳಿಗೆ ವಿಸ್ತರಿಸ ಬಹುದೇ ? ಎಷ್ಟರಮಟ್ಟಿಗೆ ವೈಜ್ಞಾನಿಕ ಮನೋಭಾವ ಇಂದು ಜನರಲ್ಲಿದೆ ? ಇದನ್ನು ಮತ್ತಷ್ಟು ವಿಸ್ತರಿಸಲು ಏನೇನು ಮಾಡಬೇಕು ? ಈ ಪ್ರಶ್ನೆಗಳಿಗೆ ಉತ್ತರಿಸಲು ನಾನಿಲ್ಲಿ ಪ್ರಯತ್ನಿಸುತ್ತೇನೆ. ಪಂಡಿತ ಜವಹರಲಾಲ್ ನೆಹರು ಅವರು ಹೇಳಿರುವ ಕೆಳಗಿನ ವಾಕ್ಯಗಳು ಈ ವಿಷಯವನ್ನು ಪರಿಣಾಮಕಾರಿಯಾಗಿ ವಿವರಿಸುತ್ತವೆ :

''ವಿಜ್ಞಾನದ ಪ್ರಭಾವದಿಂದ ಆಧುನಿಕ ಪ್ರಪಂಚದಲ್ಲಿ ವಾಸ್ತವಾಂಶಗಳನ್ನು ಮೆಚ್ಚುವ, ಹೆಚ್ಚು ವೈಚಾರಿಕತೆಯಿಂದ ಕೂಡಿರುವ ಸಾಕ್ಷ್ಯಾಧಾರಗಳಿಗೆ ಅಧಿಕ ಮನ್ನಣೆ ನೀಡುವ, ಸಂಪ್ರದಾಯವನ್ನು ಕೇವಲ ಸಂಪ್ರದಾಯವೆನ್ನುವ ಕಾರಣಕ್ಕೆ ಒಪ್ಪದಿರುವ ಸ್ವಭಾವ ಬೆಳೆದುಬಂದಿದೆ... ಆದರೂ ಸಹ ನಾವು ಇಂದು ಏಕೆ ಸಂಪ್ರದಾಯಕ್ಕೆ ಜೋತು ಬೀಳುತ್ತಿದ್ದೇವೆ ? ಬುದ್ಧಿಜೀವಿಗಳಲ್ಲಿಯೂ ವೈಚಾರಿಕ ಸಾಮರ್ಥ್ಯ ಕಾರ್ಯ ನಿರ್ವಹಿಸಲು ಸ್ಥಗಿತಗೊಂಡಿದೆ... ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಸ್ವಾತಂತ್ರ್ಯವಿದ್ದಾಗ ಮಾತ್ರ ಮನಸ್ಸು ಸಹಜವಾಗಿ ಮತ್ತು ವೈಚಾರಿಕವಾಗಿ ಕಾರ್ಯ ನಿರ್ವಹಿಸುವುದು.''

ನೆಹರೂರವರು ಈ ವಾಕ್ಯಗಳನ್ನು ಬ್ರಿಟಿಷರ ಆಳ್ವಿಕೆಯಿದ್ದಾಗ ಬರೆದಿದ್ದರು. ನಾವಿಂದು ಆರ್ಥಿಕ ಸೌಕರ್ಯವಿರುವ ಸ್ವತಂತ್ರ ಭಾರತದಲ್ಲಿ ಜೀವಿಸುತ್ತಿದ್ದೇವೆ. ಆದರೂ ನಾವು ವೈಜ್ಞಾನಿಕ ಮನೋಭಾವ ಸಾಧಿಸುವಲ್ಲಿ ತುಂಬ ಹಿಂದೆ ಬಿದ್ದಿದ್ದೇವೆ. ಭವಿಷ್ಯದಲ್ಲಿ ಮಾನವನ ಕಲ್ಯಾಣವಾಗಬೇಕಿದ್ದರೆ ವೈಜ್ಞಾನಿಕ ಮನೋಭಾವ ಅತ್ಯಗತ್ಯವೆಂದು ನೆಹರು ಪರಿಗಣಿಸಿದ್ದರು. ವೈಜ್ಞಾನಿಕ ಮನೋಭಾವ ಅಂದರೆ ಏನು ಎಂದು ತಿಳಿಯುವ ಮೊದಲಿಗೆ ನಾವು ವಿಜ್ಞಾನ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿಯೋಣ.

### ವಿಜ್ಞಾನದ ವಿಧಾನ

ವಿಜ್ಞಾನದ ಪ್ರಗತಿಯ ಹಾದಿಯಲ್ಲಿ ಮೂರು ಹಂತಗಳಿವೆ: ಪ್ರಯೋಗ ಮತ್ತು ಅವಲೋಕನ/ಸೈದ್ಧಾಂತಿಕ ಅರ್ಥೈಸುವಿಕೆ/ಹೊಸ ಫಲಿತಾಂಶಗಳ ಊಹೆ. ಈ ಅನುಕ್ರಮಕ್ಕೆ ಕೊನೆಯಿಲ್ಲ. ವಿಜ್ಞಾನಿಯೊಬ್ಬನು ಪ್ರಯೋಗಾಲಯದಲ್ಲಿ ಪರೀಕ್ಷೆಗಳನ್ನು ಕೈಗೊಳ್ಳುವನು ಅಥವಾ ನೈಸರ್ಗಿಕ ಕ್ರಿಯೆಗಳನ್ನು ಅವಲೋಕಿಸುವನು. ಅನಂತರ ಅದನ್ನು ಸೈದ್ಧಾಂತಿಕ ಚೌಕಟ್ಟಿನಲ್ಲಿ ಅರ್ಥೈಸಲು ಪ್ರಯತ್ನಿಸುವನು. ಪ್ರಯತ್ನ ಯಶಸ್ವಿಯಾದರೆ ಆಧಾರಿತ ಹೊಸ ಊಹೆಗಳನ್ನು ಮಾಡುವನು. ಭವಿಷ್ಯದಲ್ಲಿ ಯಾರೇ ಆಗಲಿ ಕೈಗೊಳ್ಳುವ ಪ್ರಯೋಗಗಳು ಅಥವಾ ಅವಲೋಕನಗಳು ಆ ಆಧಾರಿತ ಊಹೆಗಳು ಸರಿಯೋ ಎಂಬುದನ್ನು ತಿಳಿದುಕೊಳ್ಳಲು ಸಹಾಯವಾಗುತ್ತವೆ. ಸಿದ್ಧಾಂತದ ಯಶಸ್ಸು ಮುಂದುವರೆದರೆ, ಆ ಸಿದ್ಧಾಂತವನ್ನು ಎಲ್ಲರೂ ಸ್ವೀಕರಿಸುತ್ತಾರೆ. ಆದರೆ ಯಾವುದೇ ಒಂದು ಸಿದ್ಧಾಂತವನ್ನು ಸದಾ ಸರಿಯೆಂದು ವಿಜ್ಞಾನಿಗಳು [illegible]

---

ಮೂಲ : ಡಾ|| ಜಯಂತ್ ವಿಷ್ಣು ನಾರ್ಲಿಕರ್
ಅನುವಾದ : ಡಾ|| ಎಚ್. ಎಸ್. ನಿರಂಜನಾರಾಧ್ಯ

ಒಪ್ಪಿಕೊಳ್ಳುವುದಿಲ್ಲ. ಭವಿಷ್ಯದಲ್ಲಿ ಯಾವುದೇ ಒಂದು ಪ್ರಯೋಗವು ಸಿದ್ಧಾಂತದ ಆಧಾರಿತ ಊಹೆಗೆ ಸರಿಹೊಂದದಿರಬಹುದು. ಆಗ ಆ ಸಿದ್ಧಾಂತವನ್ನು ಮಾರ್ಪಡಿಸಬಹುದು ಅಥವಾ ತಿರಸ್ಕರಿಸಬಹುದು ಅಥವಾ ಅದಕ್ಕಿಂತ ಉತ್ತಮವಾದ ಸಿದ್ಧಾಂತವು ಅದನ್ನು ಬದಲಿಸಬಹುದು. ಉದಾಹರಣೆ, ನ್ಯೂಟನ್ನನ ಗುರುತ್ವಾಕರ್ಷಣೆಯ ತತ್ವವು ಬಹಳ ದಿನಗಳವರೆಗೆ ಸತ್ಯವೆಂದು ಪರಿಗಣಿತವಾಗಿತ್ತು. ಆದರೆ ಸೌರವ್ಯೂಹದಲ್ಲಿ ಕೆಲವು ಉತ್ಕೃಷ್ಟ ಪ್ರಯೋಗಗಳನ್ನು ನಡೆಸಿದಾಗ ನ್ಯೂಟನ್ ನಿಯಮಗಳಲ್ಲಿನ ಕೊರತೆ ಸ್ಪಷ್ಟವಾಯಿತು. ಆಗ ಐನ್‌ಸ್ಟೈನ್‌ನ ಸಾಪೇಕ್ಷ ಸಿದ್ಧಾಂತವು ನ್ಯೂಟನ್‌ನ ನಿಯಮಗಳ ಸ್ಥಾನವನ್ನು ಅಲಂಕರಿಸಿತು. ಇದಕ್ಕೆ ಸಂಬಂಧಿಸಿದಂತೆ ಪ್ರಸಿದ್ಧ ಖಗೋಳತಜ್ಞ ಸರ್ ಹರ್ಮನ್ ಬೊಂಡಿಯವರು ಹೀಗೆ ಹೇಳಿದ್ದಾರೆ :

''....... ವಿಜ್ಞಾನದಲ್ಲಿ ವಿಜ್ಞಾನಿಗೆ ಅಗತ್ಯದ ಅಂಶವೆಂದರೆ ಆತ ಒಂದು ಸಿದ್ಧಾಂತವನ್ನು ಚಿಂತಿಸಿ ರೂಪಿಸಬೇಕು. ಈ ಕ್ರಿಯೆಯನ್ನು ಯಾಂತ್ರೀಕರಿಸುವ ಯಾವುದೇ ವಿಧಾನವಿಲ್ಲ. ಅದನ್ನು ವಿಜ್ಞಾನ ಕೈಗಾರಿಕೆಯ ರೀತಿ ವಿಂಗಡಿಸುವ ಮಾರ್ಗವೂ ಇಲ್ಲ. ಅದು ಸದಾ ಮಾನವನ ಊಹಾಶಕ್ತಿಯನ್ನು ನಿರೀಕ್ಷಿಸುವುದು. ವಿಜ್ಞಾನದಲ್ಲಿ ಸೃಜನಶೀಲತೆಗೆ, ಮೂಲ ಚಿಂತನೆಗೆ ಅತಿ ಹೆಚ್ಚು ಗೌರವ ನೀಡಲಾಗುವುದು. ವಿಜ್ಞಾನದಲ್ಲಿ ಪ್ರತಿ ಸಿದ್ಧಾಂತವು ಅಪಾಯದ ಅಂಚಿನಲ್ಲಿಯೇ ಇರುತ್ತದೆ. ಏಕೆಂದರೆ ಸಿದ್ಧಾಂತವು ನಿರಂತರವಾಗಿ ಪರೀಕ್ಷೆಗೆ ಒಳಗಾಗುತ್ತಲೇ ಇರುತ್ತದೆ. ಹಾಗಾಗಿ ಸಿದ್ಧಾಂತಗಳ ಸಾವಿನ ಪ್ರಮಾಣ ಸ್ವಲ್ಪ ಹೆಚ್ಚು. ಆದ್ದರಿಂದ ವಿಜ್ಞಾನದಲ್ಲಿ ವಿಜ್ಞಾನಿಗಳು ಸರಿಯೆಂದು ಗೌರವಿಸುವುದಿಲ್ಲ. ಒಬ್ಬ ವಿಜ್ಞಾನಿ ಸದಾ ಸರಿಯೆಂದು ಪರಿಗಣಿಸುವುದೇ ಇಲ್ಲ. ವಿಜ್ಞಾನಿಗಳು ಮೂಲ ಚಿಂತನೆಗೆ, ಒಂದು ಹೊಸ ಕ್ಷೇತ್ರದ ಕಾರ್ಯವನ್ನು ಆರಂಭಿಸಿದ್ದಕ್ಕಾಗಿ ನಮ್ಮ ಗೌರವಕ್ಕೆ ಪಾತ್ರರಾಗುತ್ತಾರೆ. ಮಾನವನ ಪ್ರಯತ್ನಗಳಲ್ಲಿ ವಿಜ್ಞಾನ ಒಂದು ವಿಶೇಷ ಪ್ರಯತ್ನ. ಏಕೆಂದರೆ ಇದು ಸಹಕಾರವನ್ನು ಅವಲಂಬಿಸಿದೆ, ಒಬ್ಬರು ಕಂಡುಹಿಡಿದಿದ್ದು ಮತ್ತೊಬ್ಬರು ಪರೀಕ್ಷಿಸುವುದನ್ನು ಅವಲಂಬಿಸಿದೆ ಮತ್ತು ಪರಸ್ಪರ ತಿಳುವಳಿಕೆ ಪಡೆಯುವುದನ್ನು ಅವಲಂಬಿಸಿದೆ.'' (೧೯೭೩, ಬಿ.ಬಿ.ಸಿ. ಪ್ರಕಟಿತ)

ಬೊಂಡಿಯವರ ಹೇಳಿಕೆಗೆ ವಿವರಣೆಯ ಅಗತ್ಯವಿದೆ: ''ನ್ಯೂಟನ್ ಅಥವಾ ಐನ್‌ಸ್ಟೈನ್‌ನ ಸಿದ್ಧಾಂತಕ್ಕಿಂತ ತನ್ನದು ಉತ್ತಮವಿದೆ ಎಂದು ಯಾರು ಬೇಕಾದರೂ ಹೇಳಬಹುದು ಎಂಬ ಅರ್ಥವಲ್ಲ. ನನಗೆ ಅಂತಹ ಹಲವು ಅನಿಸಿಕೆ/ಸಿದ್ಧಾಂತಗಳನ್ನು ಹೇಳುವ ಜನರ ಪತ್ರಗಳು ಬರುತ್ತವೆ. ಅವು ಕೇವಲ ಅಂದಾಜು ಊಹೆಗಳೇ ಹೊರತು ಅಂಕಿಅಂಶಗಳ ಸಾಕ್ಷ್ಯಾಧಾರಗಳನ್ನು ಅವಲಂಬಿಸಿದ ಆಧಾರಿತ ಊಹೆಗಳಲ್ಲ.'' ಬೊಂಡಿ ಇಲ್ಲಿ ತಿಳಿಸಿರುವ ಊಹೆಗಳೆಂದರೆ, ಅವನ್ನು ಕರಾರುವಾಕ್ಕಾದ, ಗಣಿತವನ್ನು ಆಧರಿಸಿದ ಊಹೆಗಳು ಹಾಗೂ ಭೌತಿಕ ಸಂಗತಿಗಳ ಆಧಾರದ ಬೆಂಬಲ ಪಡೆದಂಥ ಊಹೆಗಳು. ವಾಸ್ತವವಾಗಿ ಸತ್ಯಕ್ಕೆ ಅದು ಯಾವುದೇ ಆಗಲಿ ಸರಳವಾದ ಮಾರ್ಗವಿಲ್ಲ. ನಮ್ಮ ಸಮಾಜವು ಪ್ರಕೃತಿಯನ್ನು ಅರ್ಥಮಾಡಿಕೊಂಡಿರುವ ಎಲ್ಲ ವಿಷಯಗಳನ್ನು ತಾಳ್ಮೆಯಿಂದ ಒಗ್ಗೂಡಿಸಬೇಕು ಮತ್ತು ಇನ್ನೂ ಹೆಚ್ಚಿನ ತಿಳುವಳಿಕೆ ಪಡೆಯಲು ಪ್ರಯತ್ನಿಸಬೇಕು.

ವಿಜ್ಞಾನದ ಈ ಅಭ್ಯಾಸದಿಂದಲೇ ವೈಜ್ಞಾನಿಕ ಮನೋಭಾವ ವಿಕಾಸಗೊಂಡಿದೆ. ವಾಸ್ತವ ಸಂಗತಿಗಳ ಆಧಾರ ಮತ್ತು ಹೇಳಿಕೆಗಳನ್ನು ಅವಲಂಬಿಸಿಕೊಂಡು ಹಾಲಿ ನಂಬಿರುವ ಸತ್ಯವನ್ನು ವಿಜ್ಞಾನದ ಒರೆಗಲ್ಲಿಗೆ ಹಚ್ಚಲಾಗುವುದು. ಇಲ್ಲಿ ವಾಸ್ತವಕ್ಕೆ ಆದ್ಯತೆ. ಯಾವುದೇ ಸಿದ್ಧಾಂತವು ಸಾಕ್ಷ್ಯಾಧಾರಗಳಿಗೆ ಪೂರಕವಾಗಿಲ್ಲದಿದ್ದರೆ, ಪ್ರಯೋಗಗಳ ಪರಿಶೀಲನೆಯಲ್ಲಿ ಸೋತರೆ, ಅದನ್ನು ಯಾವುದೇ ಮುಲಾಜಿಲ್ಲದೆ ಕೈಬಿಡಲಾಗುವುದು. ಎಲ್ಲ ಪರೀಕ್ಷೆ ಹಾಗೂ ಅಂಕಿಅಂಶಗಳಿಗೆ ಪೂರಕವಾಗಿದ್ದರೆ ಆ ಉತ್ತಮವಾದ ಸಿದ್ಧಾಂತವನ್ನು ಅಂಗೀಕರಿಸಲಾಗುವುದು. ವೈಜ್ಞಾನಿಕ ಮನೋಭಾವವು ಕೇವಲ ವಿಜ್ಞಾನಿಗಳ ಆಸ್ತಿಯೇನೂ ಅಲ್ಲ. ಪ್ರಕೃತಿಯ ಬಗ್ಗೆ ಮಾನವನಿಗೆ ಅನಾದಿಕಾಲದಿಂದ ಇರುವ ಕುತೂಹಲದಿಂದಲೇ ವಿಜ್ಞಾನ ವಿಕಾಸವಾಗಿದೆ. ಆದ್ದರಿಂದ ನಾವು ವಿಜ್ಞಾನಿಯಾಗಿರಲಿ, ಆಗದಿರಲಿ, ಪ್ರತಿಯೊಬ್ಬ ಮಾನವನಿಗೂ ವೈಜ್ಞಾನಿಕ ಮನೋಭಾವ ಹೊಂದುವ ಹಕ್ಕಿದೆ. ವಿಜ್ಞಾನ ಕ್ಷೇತ್ರದಲ್ಲಿರುವಂತೆ, ನಮ್ಮಲ್ಲಿ ಹುಟ್ಟಿನಿಂದ ಬರುವ ಸಂಕುಚಿತವಾದವನ್ನು ಮೀರಿ ವೈಜ್ಞಾನಿಕ ಮನೋಭಾವ ಬೆಳೆಸಿದಾಗ ಮಾತ್ರ ಪ್ರಗತಿಯನ್ನು ಸಾಧಿಸಬಹುದು. ಆದ್ದರಿಂದ ಮಾನವ ಸಮಾಜದಲ್ಲಿ ಪೂರ್ವಗ್ರಹ ಹಾಗೂ ಮೂಢನಂಬಿಕೆಗಳ ವಿರುದ್ಧ ಜಯ ಸಾಧಿಸುವಲ್ಲಿ ವೈಜ್ಞಾನಿಕ ಮನೋಭಾವ ಪರಿಣಾಮಕಾರಿ ಔಷಧದಂತೆ ವರ್ತಿಸುವುದು.

**ವಿಜ್ಞಾನ ಮತ್ತು ಜ್ಯೋತಿಷ್ಯಶಾಸ್ತ್ರ**

ನಿಸರ್ಗದ ಕಾರ್ಯಗಳ ಬಗ್ಗೆ ಇರುವ ಅಜ್ಞಾನದಿಂದ ಮೂಢನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ವಿಜ್ಞಾನವು ನಿಸರ್ಗದ ನಿಗೂಢಗಳನ್ನು ತಿಳಿಯಲು ಬದ್ಧವಾಗಿರುವ ಜ್ಞಾನ ಶಾಖೆ. ನಿಸರ್ಗ ಒಂದು ನಿಗೂಢ ಬಯಲಾದರೆ, ಅದಕ್ಕೆ ಸಂಬಂಧಿಸಿದ್ದ ಮೌಢ್ಯಗಳು ಇಲ್ಲವಾಗುತ್ತವೆ ಎಂದು ನಾವು ನಿರೀಕ್ಷಿಸುತ್ತೇವೆ. ಆದರೆ ವಾಸ್ತವವಾಗಿ ಮೌಢ್ಯ ಈ ರೀತಿ ಮರೆಯಾಗುತ್ತಿಲ್ಲ. ಏಕೆಂದರೆ ಸಾಮಾನ್ಯ ಮನುಷ್ಯನಲ್ಲಿ ವೈಜ್ಞಾನಿಕ ಮನೋಭಾವ ಬೆಳೆದಿಲ್ಲ. ನಾನು ಇಲ್ಲಿ ಒಂದು ಉದಾಹರಣೆ ನೀಡುತ್ತೇನೆ.

ಆದಿಮಾನವ ಸಮಾಜವು ಗ್ರಹಗಳಿಗೆ ವಿಶಿಷ್ಟ ಶಕ್ತಿ ಇದೆ ಎಂದು ನಂಬಿತ್ತು. ಗ್ರಹಗಳ ಬಗ್ಗೆ ಹಾಗೂ ಅವುಗಳ ಚಲನೆಯ ಬಗ್ಗೆ ಇದ್ದ ಅಜ್ಞಾನದಿಂದ ಈ ನಂಬಿಕೆಗಳು ಸೃಷ್ಟಿಯಾಗಿದ್ದವು. ಆದಿಮಾನವ ಗ್ರಹಗಳ ಬಗ್ಗೆ ಹೊಂದಿದ್ದ ಎಲ್ಲ ಅನುಮಾನಗಳನ್ನು ಮತ್ತು ಪ್ರಶ್ನೆಗಳನ್ನು ಇಂದಿನ ಖಗೋಳ ವಿಜ್ಞಾನ ಉತ್ತರಿಸಿದೆ. ಆದ್ದರಿಂದ ಗ್ರಹಗಳ ಬಗ್ಗೆ ಇದ್ದ ಮೂಢನಂಬಿಕೆಗಳಿಗೆ ಆಧಾರವಿಲ್ಲದ ಪ್ರಯುಕ್ತ ಅವು ನಾಶವಾಗುತ್ತವೆಂದು ನಾವು ನಿರೀಕ್ಷಿಸುತ್ತೇವೆ, ಆದರೆ ಆ ಮೌಢ್ಯಗಳು ಹಾಗೆಯೇ ಇವೆ. ತಾಂತ್ರಿಕವಾಗಿ ಅಭಿವೃದ್ಧಿಹೊಂದಿದ ರಾಷ್ಟ್ರಗಳಲ್ಲಿ, ಅದರಲ್ಲಿಯೂ ಸುಶಿಕ್ಷಿತರಲ್ಲಿ ಇನ್ನೂ ಆ ಮೌಢ್ಯಗಳು ಉಳಿದಿವೆ. ೧೯೭೦ರ ದಶಕದ ಮಧ್ಯೆ ನೊಬೆಲ್ ಪ್ರಶಸ್ತಿ ಪಡೆದ ವಿಜ್ಞಾನಿಗಳು ಹಾಗೂ ಕೆಲವು ಪ್ರಮುಖ ವಿಜ್ಞಾನಿಗಳು ಈ ಮೌಢ್ಯಗಳ ಆಧಾರವನ್ನು ಅಲ್ಲಗಳೆದು ಒಂದು ಸುತ್ತೋಲೆ ಹೊರಡಿಸಿದರು. ಅವರ ಹೇಳಿಕೆಯ ಸಂಕ್ಷಿಪ್ತ ರೂಪ ಇಲ್ಲಿದೆ :

''..... ಒಬ್ಬ ವ್ಯಕ್ತಿ ಹುಟ್ಟಿದ ಸಮಯದಲ್ಲಿರುವ ಗ್ರಹಗಳ ಮತ್ತು ನಕ್ಷತ್ರಗಳ ಪ್ರಭಾವದಿಂದ ಆ ವ್ಯಕ್ತಿಯ ಭವಿಷ್ಯ ನಿರ್ಧಾರವಾಗುತ್ತದೆಂದು ಊಹಿಸುವುದು ತಪ್ಪು. ಅದೇ ರೀತಿ ದೂರದಲ್ಲಿರುವ ಆಕಾಶಕಾಯಗಳ ಸ್ಥಾನದಿಂದ ದಿನದ ಕೆಲವು ಸಮಯ ಅಥವಾ ಕೆಲವು ದಿನಗಳು ನಿರ್ದಿಷ್ಟ ಕೆಲಸ ಕಾರ್ಯಗಳಿಗೆ ಶುಭ ಎನ್ನುವುದು ಸಹ ಸತ್ಯವಲ್ಲ. ಅಲ್ಲದೆ ಒಬ್ಬ ವ್ಯಕ್ತಿ ಹುಟ್ಟಿದ

ಸುದ್ದಿ ಚಿತ್ರ




ದಿನಾಂಕ ೧೨-೯-೨೦೦೯ರ ಶನಿವಾರ 'ಹೊಸತು' ಕಚೇರಿಯಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಮಾರ್ಕ್ಸ್ ಮತ್ತು ವಿಜ್ಞಾನ', 'ಜಾಗತಿಕ ಆರ್ಥಿಕ ಮುಗ್ಗಟ್ಟು – ಒಂದು ವಿಶ್ಲೇಷಣೆ' ಮತ್ತು 'ದಲಿತರು – ವಿಮೋಚನೆಯ ಹಾದಿ : ಒಂದು ಅವಲೋಕನ' ಈ ಮೂರು ಕೃತಿಗಳ ಅನಾವರಣ ಕಾರ್ಯಕ್ರಮ ನಡೆಯಿತು. ಎಂ. ಸಿ. ನರಸಿಂಹನ್ ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಅನಾವರಣಗೊಳಿಸಿದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಆರ್. ಎಸ್. ರಾಜಾರಾಮ್, ನಾ. ದಿವಾಕರ, ಎಂ. ಸಿ. ನರಸಿಂಹನ್ ಮತ್ತು ಡಾ. ಜಿ. ರಾಮಕೃಷ್ಣ. 'ವಿಜ್ಞಾನ ಮತ್ತು ಧರ್ಮ' ಕುರಿತು ಡಾ. ಜಿ. ರಾಮಕೃಷ್ಣ ಉಪನ್ಯಾಸ ನೀಡಿದರು.

ಸಮಯದ ರಾಶಿಯಿಂದಾಗಿ ಆತ ಎಲ್ಲರೊಂದಿಗೆ ಹೊಂದಿಕೊಳ್ಳುವ ಅಥವಾ ಹೊಂದಿಕೊಳ್ಳಲಾಗದವ ಎಂದು ತಿಳಿಯುವುದು ತಪ್ಪು. ಇಂದಿನ ಅಶಾಶ್ವತ ಅಭದ್ರತೆಯ ದಿನಗಳಲ್ಲಿ ಅನೇಕರು ಜೀವನದಲ್ಲಿ ತೀರ್ಮಾನಗಳನ್ನು ಕೈಗೊಳ್ಳಲು ಇತರರಿಂದ ಮಾರ್ಗದರ್ಶನ ಪಡೆಯಲು ಹಾತೊರೆಯುತ್ತಾರೆ. ಅವರ ನಿಯಂತ್ರಣದಲ್ಲಿ ಇಲ್ಲದ ಆಕಾಶಕಾಯಗಳ ಪ್ರಭಾವದಿಂದ ಅವರ ಭವಿಷ್ಯ ಪೂರ್ವನಿರ್ಧಾರಿತವಾಗಿದೆ ಎಂದು ನಂಬಲು ಇಚ್ಛಿಸುತ್ತಾರೆ. ಆದರೆ ನಾವೆಲ್ಲರೂ ಈ ಜಗತ್ತನ್ನು ಎದುರಿಸಲೇಬೇಕು. ನಮ್ಮ ಭವಿಷ್ಯವು ನಮ್ಮನ್ನೇ ಅವಲಂಬಿಸಿದೆ, ನಕ್ಷತ್ರಗಳನ್ನಲ್ಲ ಎಂಬುದನ್ನು ಅರಿಯಬೇಕು...'' (ದಿ ಹ್ಯುಮನಿಸ್ಟ್, ಸೆಪ್ಟೆಂಬರ್/ಅಕ್ಟೋಬರ್ ೧೯೭೩)

ಮಾನವನ ಭವಿಷ್ಯವನ್ನು ಗ್ರಹಗಳು ನಿರ್ಧರಿಸುತ್ತವೆಯೇ? ಈ ಪ್ರಶ್ನೆಗೆ 'ಹೌದು' ಎನ್ನುವ ಉತ್ತರ ನೀಡುವುದರಿಂದಾಗಿ ಜ್ಯೋತಿಷ್ಯಶಾಸ್ತ್ರ ಎನ್ನುವ ವಿಷಯವಿದೆ. 'ಹೌದು' ಎನ್ನುವ ಕಲ್ಪನೆಯನ್ನು ಪರೀಕ್ಷಿಸಲು ವಿಜ್ಞಾನಿ ಹೇಗೆ ಪ್ರಯತ್ನಿಸಬಲ್ಲ? ಆತ ಒಬ್ಬ ವ್ಯಕ್ತಿಯ ಜನ್ಮಕುಂಡಲಿಯನ್ನು ಆಧರಿಸಿದ ಘಟನೆಗಳ ಊಹೆಯಿಂದ ತೃಪ್ತನಾಗುವುದಿಲ್ಲ. ಮೊದಲಿಗೆ ಆತ ಅಂತಹ ಭವಿಷ್ಯದ ಮುನ್ಸೂಚನೆಗಳ ಬಗ್ಗೆ ನಿರ್ದಿಷ್ಟವಾಗಿ ರೂಪಿಸಿದ ನಿಯಮಗಳನ್ನು ನಿರೀಕ್ಷಿಸುತ್ತಾನೆ. ಆ ನಿಯಮಗಳು ಕರಾರುವಾಕ್ಕಾಗಿರಬೇಕು. ಅದೇ ಜನ್ಮಕುಂಡಲಿಯಿಂದ ವಿವಿಧ ವ್ಯಕ್ತಿಗಳು ಒಂದೇ ರೀತಿಯ ಭವಿಷ್ಯದ ಮುನ್ಸೂಚನೆಗಳನ್ನು ಮಾಡುವಂತಿರಬೇಕು. ಮತ್ತು ಭವಿಷ್ಯದ ಈ ಮುನ್ಸೂಚನೆಗಳು ಕೇವಲ ಆಕಸ್ಮಿಕದಿಂದ ಸತ್ಯವಾಗಿರದೆ ಅಂಕಿಅಂಶಗಳನ್ನು ಆಧರಿಸಿವೆ ಎಂಬುದನ್ನು ಖಾತ್ರಿಗೊಳಿಸಬೇಕು ಎಂಬುದನ್ನು ವಿಜ್ಞಾನಿ ನಿರೀಕ್ಷಿಸುತ್ತಾನೆ. ಇದನ್ನು ಪ್ರಾಯೋಗಿಕವಾಗಿ ಖಚಿತಪಡಿಸಿಕೊಳ್ಳಬೇಕಾದರೆ ವಿವಿಧ ಸಂದರ್ಭಗಳಲ್ಲಿ ಅಂತಹ ಅಧಿಕ ಸಂಖ್ಯೆಯ ಪ್ರಕರಣಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಬೇಕಾಗುವುದು.

ಈ ಉದ್ದೇಶಕ್ಕಾಗಿ ಜನ್ಮಕುಂಡಲಿಗಳನ್ನು ಪರೀಕ್ಷಿಸಬೇಕಾದಲ್ಲಿ ಭವಿಷ್ಯದ ಮುನ್ಸೂಚನೆಗಳನ್ನು ಕರಾರುವಾಕ್ಕಾಗಿ ತಿಳಿಸಿರಬೇಕು. ವಿಜ್ಞಾನಿಗಳು ಕೈಗೊಂಡ ಅಂತಹ ಪರೀಕ್ಷೆಗಳಿಂದ ನೇತ್ಯಾತ್ಮಕ ಫಲಿತಾಂಶಗಳೇ ದೊರಕಿವೆ. ಪುನಃ ಅಂತಹ ಪ್ರಯೋಗಗಳನ್ನು ಕೈಗೊಳ್ಳಲು ಸದಾ ತಜ್ಞ ವಿಜ್ಞಾನಿಯನ್ನೇ ಕರೆಯಬೇಕಿಲ್ಲ. ಒಬ್ಬ ಶಿಕ್ಷಿತ ಶ್ರೀಸಾಮಾನ್ಯನೇ ವಸ್ತುನಿಷ್ಠ ದೃಷ್ಟಿಯನ್ನು ಅಳವಡಿಸಿಕೊಂಡು ಸಾಕ್ಷ್ಯಾಧಾರಗಳನ್ನು ಪರೀಕ್ಷಿಸಬಹುದು. ಜ್ಯೋತಿಷ್ಯಶಾಸ್ತ್ರದ ಭವಿಷ್ಯ ಹೇಳುವ ವೈಜ್ಞಾನಿಕ ಸಾಮರ್ಥ್ಯವನ್ನು ಪರೀಕ್ಷಿಸಲು ಭಾರತದಲ್ಲಿ ಇತ್ತೀಚೆಗೆ ಕೈಗೊಂಡ ಪ್ರಯೋಗಗಳ ಉದಾಹರಣೆಯನ್ನು ನಾನಿಲ್ಲಿ ನೀಡುತ್ತಿದ್ದೇನೆ.

ಈ ಪ್ರಯೋಗ ಕೈಗೊಳ್ಳುವಾಗ ನಾನು ಅಂಧಶ್ರದ್ಧೆ ನಿರ್ಮೂಲನ ಸಮಿತಿಯ ಮುಖ್ಯಸ್ಥರಾದ ಡಾ॥ ನರೇಂದ್ರ ದಾಭೋಳ್ಕರ್, ಪ್ರಕಾಶ್ ಘಟ್‌ಪಾಂಡೆ ಮತ್ತು ಪುಣೆ ವಿಶ್ವವಿದ್ಯಾಲಯ ಸಂಖ್ಯಾಶಾಸ್ತ್ರ ವಿಭಾಗದ ಸುಧಾಕರ್ ಕುಂಟೆಯವರೊಂದಿಗೆ ಕಾರ್ಯ ನಿರ್ವಹಿಸಿದೆ. ಪ್ರಕಾಶ್ ಘಟ್‌ಪಾಂಡೆಯವರು ಮೊದಲಿಗೆ ಜ್ಯೋತಿಷ್ಯ

## ಹೂಚುಕ್ಕಿ

ನಕ್ಕ ಹೂ
ನೋಡಿ
ಅತ್ತ್ಯಾವು ಚುಕ್ಕಿ
ಮುಡಿಗೇರ್ವ ಭಾಗ್ಯ
ತಮಗಿಲ್ಲ ಎಂದು !

ಮೂಲ : ಹಿಂದಿ
ಸಂತೇಬೆನ್ನೂರು ಫೈಜ್ನಟ್ರಾಜ್
ಕಣಿವೆಬಳಚಿ

ಹೇಳುವವರಾಗಿದ್ದರು. ಈಗ ಅವರು ಜ್ಯೋತಿಷ್ಯಶಾಸ್ತ್ರದ ಕಟು ಟೀಕಾಕಾರರಾಗಿದ್ದಾರೆ. ಈ ಪ್ರಯೋಗ ಸರಳವಾಗಿತ್ತು ಮತ್ತು ಜ್ಯೋತಿಷ್ಯಶಾಸ್ತ್ರದಲ್ಲಿರುವ ಅನೇಕ ಅನುಮಾನಾಸ್ಪದ ವಿಷಯಗಳನ್ನು ಒಳಗೊಂಡಿರಲಿಲ್ಲ. ಇನ್ನೂರು ಮಕ್ಕಳು ಹುಟ್ಟಿದ ಸಮಯ, ದಿನಾಂಕ ಹಾಗೂ ಸ್ಥಳಗಳ ಪಟ್ಟಿಯನ್ನು ಈ ಪ್ರಯೋಗಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು. ಮಕ್ಕಳ ಜನ್ಮಕುಂಡಲಿ ಸಿದ್ಧವಾಗಲು ಇದು ಅಗತ್ಯವಾಗಿತ್ತು. ಇದರಲ್ಲಿ ಅರ್ಧದಷ್ಟು ಮಕ್ಕಳು ಹುಟ್ಟಿನಿಂದಲೇ ಪ್ರತಿಭಾವಂತರಾಗಿದ್ದರು ಮತ್ತು ಮಿಕ್ಕ ಅರ್ಧದಷ್ಟು ಮಕ್ಕಳು ಮಾನಸಿಕ ವೈಕಲ್ಯ ಹೊಂದಿದ್ದರು. ಯಾವುದೇ ಅನುಕ್ರಮವಿಲ್ಲದೆ ಕಣ್ಣು ಮುಚ್ಚಿ ಆಯ್ಕೆಮಾಡಿಕೊಂಡು ೪೦ ಮಕ್ಕಳ ಜನ್ಮಕುಂಡಲಿಗಳ ಸೆಟ್ ಅನ್ನು ಸಿದ್ಧಪಡಿಸಲಾಯಿತು. ಆದ್ದರಿಂದ ಯಾವುದೇ ಒಂದು ಸೆಟ್‌ನಲ್ಲಿ ಪ್ರತಿಭಾವಂತ ಮಕ್ಕಳ N ಜನ್ಮಕುಂಡಲಿಗಳು ಹಾಗೂ ೪೦-N ಸಂಖ್ಯೆಯ ಮಾನಸಿಕ ವೈಕಲ್ಯದ ಮಕ್ಕಳ ಜನ್ಮಕುಂಡಲಿಗಳಿರುತ್ತವೆ. ಈ ಪ್ರಯೋಗದಲ್ಲಿ ಜ್ಯೋತಿಷಿಗಳನ್ನು ಭಾಗವಹಿಸಲು ಆಹ್ವಾನಿಸಲಾಯಿತು. ೫೧ ಜನ ಜ್ಯೋತಿಷಿಗಳು ಈ ಪ್ರಯೋಗದಲ್ಲಿ ಭಾಗಿಯಾಗಲು ಸಮ್ಮತಿಸಿದರು. ಆದರೆ ಕೆಲವು ಪ್ರಮುಖ ಜ್ಯೋತಿಷ್ಯ ಸಂಸ್ಥೆಗಳು ಈ ಪ್ರಯೋಗ ತಮ್ಮನ್ನು 'ಹಿಡಿಯಲು' ಮಾಡಿರುವ ಹುನ್ನಾರವೆಂದು ಭಾವಿಸಿ ಬಹಿಷ್ಕರಿಸಿದವು. ಇದರಲ್ಲಿ ಭಾಗಿಯಾಪ ಪ್ರತಿ ಜ್ಯೋತಿಷಿಗೆ ಒಂದು ಮಾದರಿ ಸೆಟ್‌ಅನ್ನು ಕಳುಹಿಸಲಾಯಿತು. ಸೆಟ್‌ನಲ್ಲಿರುವ ಜನ್ಮಕುಂಡಲಿ ನೋಡಿ, ಪ್ರತಿಭಾವಂತ ಮಕ್ಕಳ ಗುಂಪನ್ನು ಹಾಗೂ ಮಾನಸಿಕ ವೈಕಲ್ಯವಿರುವ ಮಕ್ಕಳ ಗುಂಪನ್ನು ಪ್ರತ್ಯೇಕಿಸಲು ತಿಳಿಸಲಾಯಿತು. ನಮಗಾಗಲೀ ಅಥವಾ ಭಾಗಿಯಾಗಿದ್ದವರಿಗಾಗಲೀ ಅವರಿಗೆ ನೀಡಲ್ಪಟ್ಟ ಸೆಟ್‌ನಲ್ಲಿ 'N' ನ ಮೌಲ್ಯ ತಿಳಿದಿರಲಿಲ್ಲ. ಆ ಅಂಕಿಅಂಶಗಳು ನಮ್ಮ ದಾಖಲೆಯಲ್ಲಿ ಭದ್ರವಾಗಿ ಗೋಪ್ಯವಾಗಿಡಲಾಗಿತ್ತು. ಪ್ರಯೋಗ ಕೈಗೊಳ್ಳುವ ಮುನ್ನವೇ ನಮ್ಮ ಸಂಖ್ಯಾತಜ್ಞರು ಒಂದು ಎಚ್ಚರಿಕೆ ನೀಡಿದ್ದರು. ಭವಿಷ್ಯ ಹೇಳುವುದಕ್ಕೆ ಸಾಮರ್ಥ್ಯವಿದೆ ಎಂದು ಸಾಧಿಸುವವರು ೪೦ರಲ್ಲಿ ಕನಿಷ್ಠ ೨೮ನ್ನು ಸರಿಯಾಗಿ ತಿಳಿಸಬೇಕು. ೫೧ ಜನ ಜ್ಯೋತಿಷಿಗಳಲ್ಲಿ ಕೇವಲ ೨೭ ಜನ ಈ ಪರೀಕ್ಷೆಯಲ್ಲಿ ಭಾಗಿಯಾದರು. ಅವರು ಭವಿಷ್ಯ ತಿಳಿಸಿದ ಸರಾಸರಿ ಪ್ರಮಾಣ ೪೦ರಲ್ಲಿ ಸುಮಾರು ೧೭ ಮಾತ್ರ ಆಗಿತ್ತು. ಒಂದು ವೇಳೆ ಅವರು ಜ್ಯೋತಿಷ್ಯವನ್ನು ಬಿಟ್ಟು ನಾಣ್ಯ ಮೇಲಕ್ಕೆಸೆದು ರಾಜ, ರಾಣಿ ಎಂದು ಆಯ್ಕೆಮಾಡಿದ್ದರೂ ಇದಕ್ಕಿಂತ ಹೆಚ್ಚಿನ ಯಶಸ್ಸನ್ನು ಪಡೆಯಬಹುದಿತ್ತು! ಜೊತೆಗೆ ಜ್ಯೋತಿಷಿಗಳ ಸಂಘವು ಕೂಡ ಈ ಪರೀಕ್ಷೆಯಲ್ಲಿ ಭಾಗಿಯಾಗಿತ್ತು. ಆ ಸಂಸ್ಥೆಗೆ ನಾವು ಇನ್ನೂರು ಜಾತಕಗಳನ್ನು ನೀಡಿದೆವು. ಅವರು ೧೦೨ ಸರಿ ಉತ್ತರಗಳನ್ನು ನೀಡಿದರು. ಸಂಖ್ಯಾತ್ಮಕವಾಗಿ ೫೦:೫೦ ಶುದ್ಧ ಆಕಸ್ಮಿಕ ಅನುಪಾತಕ್ಕಿಂತ ಇದು ಹೆಚ್ಚೇನೂ ವ್ಯತ್ಯಾಸ ಹೊಂದಿಲ್ಲ! ಆದ್ದರಿಂದ ಈ ಪ್ರಯೋಗದಿಂದ ಜ್ಯೋತಿಷ್ಯದಿಂದ ಭವಿಷ್ಯ ಹೇಳುವುದು ಸಾಧ್ಯವಿಲ್ಲ ಎಂಬುದು ಸಾಬೀತಾಯಿತು.

ಅಮೆರಿಕಾ ಹಾಗೂ ಯೂರೋಪಿನಲ್ಲಿ ಜ್ಯೋತಿಷ್ಯಶಾಸ್ತ್ರದ ಭವಿಷ್ಯ ತಿಳಿಸುವ ಶಕ್ತಿಯ ಬಗ್ಗೆ ಕೈಗೊಂಡಿರುವ ಅನೇಕ ಪ್ರಯೋಗಗಳ ವಿವರಣೆಯನ್ನು ನಾನು ನೀಡಬಲ್ಲೆ. ಜ್ಯೋತಿಷ್ಯಶಾಸ್ತ್ರದ ಸಾಮರ್ಥ್ಯವನ್ನು ವಿವಿಧ ಕಾಲಘಟ್ಟದಲ್ಲಿ ಅನೇಕ ಸಂಶೋಧಕರು ವೈಜ್ಞಾನಿಕವಾಗಿ ಪರೀಕ್ಷಿಸಿದ್ದಾರೆ. ಆದರೆ ಆ ಎಲ್ಲ ಪ್ರಯೋಗಗಳು ಜ್ಯೋತಿಷ್ಯಶಾಸ್ತ್ರಕ್ಕೆ ಆ ಸಾಮರ್ಥ್ಯವಿಲ್ಲವೆಂಬುದನ್ನು ತೋರಿಸಿವೆ.

**ಸಂಪ್ರದಾಯಗಳೊಂದಿಗೆ ವಿರೋಧ**

ವ್ಯಕ್ತಿಗತವಾಗಿ ಅಥವಾ ಒಂದು ಸಮುದಾಯದ ಭಾಗವಾಗಿ ಮಾನವ ಯಾವಾಗಲೂ ಕೆಲವು ಸಾಂಪ್ರದಾಯಿಕ ನಂಬಿಕೆಗಳನ್ನು ಇಟ್ಟುಕೊಂಡು ಬದುಕಿದ್ದಾನೆ. ಈ ನಂಬಿಕೆಗಳು ಆತನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಪರಂಪರೆಯೊಂದಿಗೆ ತಳಕು ಹಾಕಿಕೊಂಡಿವೆ. ಆದ್ದರಿಂದ ಇಂತಹ ಪಾರಂಪರಿಕ ನಂಬಿಕೆಗಳನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅಂತರ್ಯದಲ್ಲಿರುವ ವೈಚಾರಿಕ ವಿಶ್ಲೇಷಣೆಗಳಿಗೆ ಒಳಪಡಿಸಿದಾಗ ಅನಿವಾರ್ಯವಾಗಿ ವೈರುಧ್ಯಗಳು ಉಂಟಾಗುತ್ತವೆ. ಕೆಲವು ಪಾರಂಪರಿಕ ನಂಬಿಕೆಗಳಿಗೆ ಅಥವಾ ಸಂಪ್ರದಾಯದ ಆಚರಣೆಗಳಿಗೆ ಹಿಂದಿನ ದಿನಗಳಲ್ಲಿ ವೈಚಾರಿಕ ಹಿನ್ನೆಲೆ ಇತ್ತು. ಆದರೆ ಇಂದಿನ ದಿನಗಳಲ್ಲಿ ಆ ವೈಚಾರಿಕ ಹಿನ್ನೆಲೆ ಇಲ್ಲ. ಆದ್ದರಿಂದ ವೈರುಧ್ಯಗಳು ಉಂಟಾಗುತ್ತವೆ. ಹಲವು ಶತಮಾನಗಳ ಹಿಂದೆ ಕೆಲವು ಸಾಂಪ್ರದಾಯಿಕ ಆಚರಣೆಗಳಿಗೆ ಸಮಾಜದಲ್ಲಿ ಒಂದು ಸಾಂಕೇತಿಕ ಅರ್ಥವಿತ್ತು ಅಥವಾ ವಾಸ್ತವ ಅರ್ಥವೂ ಇದ್ದಿರಬಹುದು. ಆದರೆ ಈಗ ಅವು ಅರ್ಥರಹಿತವಾಗಿವೆ, ಅಪ್ರಸ್ತುತವಾಗಿವೆ. ಅಂತಹ ಸಂದರ್ಭದಲ್ಲಿ ವೈರುಧ್ಯ, ವಿರೋಧ ಉಂಟಾದರೆ ನಾವೇನು ಮಾಡಬಹುದು ಎಂಬ ಪ್ರಶ್ನೆ ಉದ್ಭವಿಸುತ್ತದೆ.

'ಸಂಪ್ರದಾಯ'ದಂತೆ ನಾವು ಸಮಾಜಕ್ಕೆ ನೀಡಬೇಕಾದ ವೈಯಕ್ತಿಕ ಜವಾಬ್ದಾರಿಯ ಸಾಂಪ್ರದಾಯಿಕ ಮೌಲ್ಯಗಳನ್ನು ಹೊಂದಿದ್ದೇವೆ. ವ್ಯಕ್ತಿ ಮತ್ತು ಸಮಾಜದ ಸದಸ್ಯರೆಲ್ಲರ ಕಲ್ಯಾಣವನ್ನು ಖಾತ್ರಿಗೊಳಿಸುವುದು ಮತ್ತು ನಮ್ಮ ಸುತ್ತಲಿರುವ ನೈಸರ್ಗಿಕ ಆವಾಸವನ್ನು ರಕ್ಷಿಸುವುದು ಸಮಾಜದ ಬದ್ಧತೆಯಾಗಿರುತ್ತದೆ. ಈ ಸಾಂಪ್ರದಾಯಿಕ ಮೌಲ್ಯಗಳು ಇರುವುದರಿಂದ ವಿಜ್ಞಾನವು ಏನನ್ನು ನೀಡಬಲ್ಲದು ಎಂಬುದನ್ನು ಮೌಲ್ಯೀಕರಿಸಬಹುದು. ಯಾವುದನ್ನು ಒಪ್ಪಬೇಕು

ಮತ್ತು ಯಾವುದನ್ನು ತಿರಸ್ಕರಿಸಬೇಕು ಎಂಬುದರ ಬಗ್ಗೆ ಮಾನವ ನ್ಯಾಯಯುತ ತೀರ್ಮಾನವನ್ನು ತೆಗೆದುಕೊಳ್ಳಬಹುದು. ಇಂತಹ ಸಂದರ್ಭಗಳಲ್ಲಿ ಒಟ್ಟಾರೆಯಾಗಿ ಸಮಾಜದ ಒಳಿತಿಗೆ ವೈಜ್ಞಾನಿಕ ಮನೋಭಾವ ಸಹಾಯಕ್ಕೆ ಬರುತ್ತದೆ.

ಸಮಾಜದ ಮೇಲೆ ವಿಜ್ಞಾನ ಮತ್ತು ತಂತ್ರಜ್ಞಾನದ ಅನಿಯಂತ್ರಿತ ಪ್ರಭಾವದಿಂದ ಉಂಟಾದ ದುಷ್ಪರಿಣಾಮಗಳನ್ನು ತಾಂತ್ರಿಕವಾಗಿ ಮುಂದುವರೆದ ಪಾಶ್ಚಿಮಾತ್ಯ ದೇಶಗಳು ಅನುಭವಿಸುತ್ತಿವೆ. ವಿನಾಶಕಾರಿ ಪರಮಾಣು ಬಾಂಬುಗಳ ಸಂಗ್ರಹ, ಅಧಿಕವಾದ ಕೈಗಾರಿಕಾ ಮಾಲಿನ್ಯ, ಯಾಂತ್ರೀಕರಣದಿಂದ ಉಂಟಾದ ಸೋಮಾರಿತನ ಮತ್ತು ಅದರಿಂದ ಉಂಟಾದ ಮಾನಸಿಕ ಸಮಸ್ಯೆಗಳು ಮುಂತಾದವು ನಮ್ಮ ಕಣ್ಣ ಮುಂದಿವೆ. ಹಾಗೆಂದಾಕ್ಷಣ ನಾವು ಎಲ್ಲ ವೈಜ್ಞಾನಿಕ ಮತ್ತು ತಾಂತ್ರಿಕ ಅಭಿವೃದ್ಧಿಗೆ ಪೂರ್ಣ ವಿರಾಮವನ್ನು ಹೇಳಬೇಕೇ? ಇಂತಹ ಸಲಹೆಗಳನ್ನು ನೀಡಿದಾಗ ಕೆಲವು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಭಾರಿ ಆತಂಕ ಉಂಟಾಗಿದೆ. ಮೇಲೆ ತಿಳಿಸಿದ ಸಾಂಪ್ರದಾಯಿಕ ಮೌಲ್ಯಗಳನ್ನು ನಾವು ಮಾರ್ಗದರ್ಶಿ ಸೂತ್ರಗಳನ್ನಾಗಿ ತೆಗೆದುಕೊಂಡಾಗ ಅನಿಯಂತ್ರಿತ ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಉಂಟಾಗಿರುವ ದುಷ್ಪರಿಣಾಮ, ತೊಂದರೆಗಳನ್ನು ನಿವಾರಿಸಿಕೊಳ್ಳುವ ವೈಚಾರಿಕ ಮಾರ್ಗವನ್ನು ಗುರುತಿಸಿಕೊಳ್ಳುವ ಸಾಧ್ಯತೆ ಇದೆ.

**ಪ್ರಸ್ತುತ ಪರಿಸ್ಥಿತಿ**

''ನಾವು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಸ್ವತಂತ್ರವಾಗಿದ್ದಾಗ ಮಾತ್ರ ಮನಸ್ಸು ಸಹಜವಾಗಿ ಮತ್ತು ವೈಚಾರಿಕವಾಗಿ ಕಾರ್ಯ ನಿರ್ವಹಿಸಬಲ್ಲದು'' – ಎಂಬ ನೆಹರೂ ಅವರ ನಿರೀಕ್ಷೆಗೆ ಹೋಲಿಸಿದರೆ ಭಾರತೀಯರಾದ ನಾವು ಎಲ್ಲಿದ್ದೇವೆ ಎಂಬುದನ್ನು ನಾನು ಸಂಕ್ಷಿಪ್ತವಾಗಿ ವಿಮರ್ಶಿಸುತ್ತೇನೆ.

ಈ ಬಗ್ಗೆ ಯಾವುದೇ ಪೂರ್ವಗ್ರಹವಿಲ್ಲದ ವಿಶ್ಲೇಷಣಾ ಕಾರ್ಯವು ಸುಮಾರು ಮಿಶ್ರನೋಟವನ್ನು ಪ್ರಸ್ತುತಪಡಿಸುತ್ತದೆ.

ನಾನು ಆಗಲೇ ತಿಳಿಸಿದಂತೆ ನಮ್ಮಲ್ಲಿನ ಕೆಲವು ಸ್ವಯಂಸೇವಾ ಸಂಸ್ಥೆಗಳು ವೈಚಾರಿಕತೆಯನ್ನು ಬೆಳೆಸಲು ಮತ್ತು ಮೌಢ್ಯಗಳನ್ನು ನಿವಾರಿಸಲು ಬದ್ಧತೆಯಿಂದ ಕಾರ್ಯನಿರತವಾಗಿವೆ. ವೈಜ್ಞಾನಿಕ ಮನೋಭಾವ ಮತ್ತು ಇತರೆ ವೈಚಾರಿಕ ವಿಷಯಗಳ ಬಗ್ಗೆ ಉಪನ್ಯಾಸ, ಬೀದಿನಾಟಕ, ಪವಾಡ ಬಯಲು ಕಾರ್ಯಕ್ರಮಗಳ ಮೂಲಕ ಸಾರ್ವಜನಿಕ ಜಾಗೃತಿ ಮೂಡಿಸುತ್ತಿರುವ ಸಂಘಟನೆಗಳಿವೆ. ನವದೆಹಲಿಯ ರಾಷ್ಟ್ರೀಯ ವಿಜ್ಞಾನ ಮತ್ತು ತಂತ್ರಜ್ಞಾನ ಸಂವಹನ ಮಂಡಳಿಯು (ಎನ್.ಎಸ್.ಟಿ.ಸಿ.) ಇಂತಹ ಕಾರ್ಯಕ್ರಮಗಳಿಗೆ ನೆರವು, ಪ್ರೋತ್ಸಾಹ ನೀಡುತ್ತಿದೆ. ಪ್ರತಿವರ್ಷ ಫೆಬ್ರವರಿ ೨೮ರಂದು ರಾಷ್ಟ್ರೀಯ ವಿಜ್ಞಾನ ದಿನಾಚರಣೆಯನ್ನು ಈ ಸಂಸ್ಥೆ ಜಾರಿಗೆ ತಂದಿದೆ. ಸರ್ ಸಿ. ವಿ. ರಾಮನ್ ಅವರು ನೊಬೆಲ್ ಪ್ರಶಸ್ತಿ ಪಡೆಯಲು ಕಾರಣವಾದ ಸಂಶೋಧನೆಯನ್ನು ೧೯೨೮ರ ಫೆಬ್ರವರಿ ೨೮ರಂದು ಕೈಗೊಂಡರು. ಆ ಸವಿನೆನಪಿಗಾಗಿ ರಾಷ್ಟ್ರೀಯ ವಿಜ್ಞಾನ ದಿನಾಚರಣೆಯನ್ನು ಆಚರಿಸಲಾಗುತ್ತಿದೆ. ಆ ದಿನ ಹಾಗೂ ಆ ವಾರದಂದು ವಿಜ್ಞಾನದ ಪರಿಕಲ್ಪನೆಗಳು ಮತ್ತು ವೈಜ್ಞಾನಿಕ ಮನೋಭಾವಕ್ಕೆ ಸಂಬಂಧಿಸಿದ ವಿವಿಧ ಕಾರ್ಯಕ್ರಮಗಳನ್ನು ರಾಷ್ಟ್ರಾದ್ಯಂತ ಸಂಘಟಿಸಲಾಗುತ್ತಿದೆ. ಅಂದು ಅನೇಕ ವಿಜ್ಞಾನ ಸಂಸ್ಥೆಗಳು ಸಾರ್ವಜನಿಕರ ವೀಕ್ಷಣೆಗೆ ತೆರೆಯಲ್ಪಟ್ಟಿರುತ್ತವೆ. ಅವು ಪ್ರಾತ್ಯಕ್ಷಿಕೆಗಳನ್ನು, ಪ್ರಯೋಗಗಳನ್ನು, ವಸ್ತುಪ್ರದರ್ಶನವನ್ನು, ಉಪನ್ಯಾಸಗಳನ್ನು ಏರ್ಪಡಿಸುತ್ತವೆ. ಕೆಲವು ಸಂಸ್ಥೆಗಳು ಶಾಲಾ ಮಕ್ಕಳಿಗಾಗಿ ವಿಶೇಷ ರಸಪ್ರಶ್ನೆ ಮತ್ತು ವಿವಿಧ ಸ್ಪರ್ಧೆಗಳನ್ನು ಸಂಘಟಿಸುತ್ತವೆ.

ಸರ್ಕಾರದ ಒಳಗೆ ಮತ್ತು ಹೊರಗೆ ಇಂತಹ ಕೆಲವು ಸಂಘಟಿತ ಪ್ರಯತ್ನಗಳು ನಡೆಯುತ್ತಿದ್ದರೂ ಸಹ 'ದಾರಿಯಲ್ಲಿರುವ ಶ್ರೀಸಾಮಾನ್ಯ'ರ ಮನಃಸ್ಥಿತಿಯಾದರೂ ಏನು? ಶತಶತಮಾನಗಳಿಂದ ನಿರಂತರವಾಗಿ ಹೆಚ್ಚು ಗಟ್ಟಿಗೊಳ್ಳುತ್ತಿರುವ ಮೌಢ್ಯದ ಗೋಡೆಯನ್ನು ಸ್ವಾತಂತ್ರ್ಯ ಬಂದ ಅರ್ಧ ಶತಮಾನದ ನಂತರ ನಾವು ಸಾಕಷ್ಟು ತೆಳುವು ಮಾಡಿದ್ದೇವೆಂದು ವಿಶ್ವಾಸದಿಂದ

**ಕೊ**ಳ್ಳು ಕಾಂಡಗಳ ಮೇಲೆ ಸಾಗುವ
ಸಿಂಪಿಗಳನ್ನು ತಲೆಕೆಳಗಾಗಿ ಹಿಡಿದುಕೊಂಡು
ಬುಟ್ಟಿಯ ಕುತ್ತಿಗೆವರೆಗೂ ತುಂಬಿಕೊಳ್ಳುತ್ತಿದ್ದೆ.
ಕುದಿಸುವ ಮುನ್ನ ಚಿಪ್ಪಗಳನ್ನು ಸುಲಿದಾಗ
ಉದ್ದನೆ ದೇಹ ಸುತ್ತಿಕೊಳ್ಳುವುದು
ವಿನೋದವಾಗಿ ಕಾಣಿಸುತ್ತಿತ್ತು.
ಕುದಿಸಿದ ಚಿಪ್ಪಗಳನ್ನು ಬಿಚ್ಚಿ ಜೀವರಸ
ಹೀರಿಕೊಂಡು ನೆಲದ ಮೇಲೆ ಎಸೆದಾಗ
ಚಿಪ್ಪುಗಳು ವಿಚಿತ್ರ ಧ್ವನಿಯಲ್ಲಿ ಕಿರುಗುಟ್ಟುವ
ಆಕ್ರಂದನ ಕೇಳಿಸುತ್ತಿತ್ತು.

ಈಗ ನಾನು ಸಮುದ್ರ ತಟಗಳಲ್ಲಿ
ತೆವಳುತ್ತಿದ್ದೇನೆ ನೆಲ ನೀರಿನ ದಡಗಳ
ನಡುವೆ ಏರಿ ಇಳಿಯುತ್ತಿದ್ದೇನೆ,
ದಡಗಳ ಮೇಲೆ ಧಾಳಿ ಮಾಡುವ ಅಲೆಗಳು
ಒಳಕ್ಕೆ ಎಳೆದುಕೊಳ್ಳುತ್ತ ಹೊರಕ್ಕೆ ಒಗೆಯುವ
ಆ ಅಪರಿಚಿತ ಲಯಬದ್ಧ ಚಲನೆ ಎಲ್ಲಿದೆಯೊ?
ಕಾಣದ ಕೈಯೊಂದು ಹಿಡಿದುಕೊಂಡು
ನನ್ನ ಜೀವರಸ ಹೀರಿಕೊಂಡು ಖಾಲಿಯಾಗಿಸುತ್ತಿದೆ.
ನನ್ನ ದೇಹದ ಕರಟ ವಿಚಿತ್ರವಾಗಿ ಕಿರುಗುಟ್ಟುತ್ತಿದೆ.
ಹೃದಯ ಒಡೆದುಕೊಂಡು ಪ್ರಾಣ ಸಂಕಟವಾಗಿ
ದುಃಖದ ಎಲ್ಲೆಡೆ ಗಾನ ಮೊಳಗುತ್ತಿದೆ.




ಅಸ್ಸಾಮಿ : ಅನುಪಮಾ ಬಸು ಮತಾರಿ ಆಂಗ್ಲ: ಪ್ರದೀಪ್ ಆಚಾರ್ಯ

ಕನ್ನಡಕ್ಕೆ : ಡಾ|| ಎಂ. ವೆಂಕಟಸ್ವಾಮಿ

[illegible], ಸಿಸಿಜೆ ಹಾಸ್ಟೆಲ್, ಸಿ.ಪಿ.ಡಬ್ಲ್ಯು. ಕ್ವಾರ್ಟರ್ಸ್, ದೊಮ್ಮಲೂರು ಅಂಚೆ, ಬೆಂಗಳೂರು - [illegible]

ಹೇಳಬಹುದೇ ? ಉದಾಹರಣೆಗೆ, ಸತಿಪದ್ಧತಿಯ ವಿರುದ್ಧ ಪ್ರಖ್ಯಾತ ಸಮಾಜ ಸುಧಾರಕ ರಾಜಾ ರಾಮಮೋಹನ ರಾಯ್ ಅವರ ಹೋರಾಟವನ್ನು ನಾವು ನೆನಪಿಸಿಕೊಳ್ಳಬಹುದು. ಆದರೆ ಇಂದಿಗೂ ಎಲ್ಲೋ ಒಂದು ಕಡೆ ಸತಿಪದ್ಧತಿ ಜಾರಿಯಲ್ಲಿರುವುದನ್ನು ಕಾಣಬಹುದು. ಅಂತಹ ಅಪರೂಪದ ಪ್ರಕರಣಗಳು ಅಂಧವಿಶ್ವಾಸಿಗಳನ್ನು ಆಕರ್ಷಿಸುತ್ತವೆ.

ಮೂಢನಂಬಿಕೆಗಳು ಹಳ್ಳಿಗಳಿಗೆ ಮಾತ್ರ ಸೀಮಿತವಾಗಿಲ್ಲ. ಗಣಪತಿ ಹಾಲು ಕುಡಿದ ಪ್ರಕರಣವು ದೆಹಲಿ, ಮುಂಬಯಿ ಮತ್ತು ಭಾರತದ ಅನೇಕ ನಗರಗಳಲ್ಲಿ ಲಕ್ಷಾಂತರ ಜನರನ್ನು ಆಕರ್ಷಿಸಿತು. ಅನೇಕ ಸಚಿವರು ಸಹ ಈ ಪವಾಡಕ್ಕೆ ಆಶ್ಚರ್ಯ, ಧನ್ಯತೆ ಮತ್ತು ಸಂತಸಗಳನ್ನು ವ್ಯಕ್ತಪಡಿಸಿದರು. ನಮಗೆ ತಿಳಿದಿರುವ ವಿಜ್ಞಾನದಿಂದ ಈ ಪವಾಡವನ್ನು ಅಲ್ಲಗಳೆಯುವುದಕ್ಕೆ ಹೆಚ್ಚು ಸಮಯವೇನೂ ಬೇಕಾಗಲಿಲ್ಲ. ಆದರೆ ಈ ಪವಾಡದ ಬಗ್ಗೆ ನಂಬಿಕೆ ಕಾಳ್ಗಿಚ್ಚಿನಂತೆ ಹರಡಿದ್ದನ್ನು ಗಮನಿಸಿದರೆ ಸಮಾಜದ ಮೇಲೆ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಭಾವ ತುಂಬ ತೆಳುವಾದುದು – ಎಂಬುದು ಸ್ಪಷ್ಟ.




ಇತ್ತೀಚೆಗೆ ಮೂಢನಂಬಿಕೆಗಳು ಅಧಿಕವಾಗುತ್ತಿರುವುದು ತೀರ ಆತಂಕದ ವಿಷಯ. ಈ ಬದಲಾವಣೆಯ ಬಗ್ಗೆ ಕೆಲವು ಉದಾಹರಣೆಗಳನ್ನು ನೀಡಬಹುದು :

೧. ಹಿಂದಿನ ತಲೆಮಾರಿಗಿಂತ ಇಂದು ಬಹುತೇಕ ಮದುವೆಗಳು ಜಾತಕಗಳ ಹೊಂದಾಣಿಕೆಯ ಆಧಾರದಲ್ಲಿ ತೀರ್ಮಾನವಾಗುತ್ತಿವೆ. 'ಜಾತಕದ ಸೋಸುಬಟ್ಟೆ'ಯಲ್ಲಿ ಪಾಸಾಗದ ಕಾರಣದಿಂದ ಪೋಷಕರು ಮದುವೆಯನ್ನು ನಿಲ್ಲಿಸಿದ, ಆದರೆ ಅವರ ಮಕ್ಕಳು ಮದುವೆಗಾಗಿ ವೈಜ್ಞಾನಿಕ ಮನೋಭಾವ ಅಳವಡಿಸಿಕೊಳ್ಳಲು ಒತ್ತಾಯ ಮಾಡುವ ಅನೇಕ ಪ್ರಸಂಗಗಳು ನನಗೆ ಗೊತ್ತಿವೆ.

೨. ಆಧುನಿಕ ತಂತ್ರಜ್ಞಾನದೊಂದಿಗೆ, ಆಧುನಿಕ ಮೂಢನಂಬಿಕೆಗಳು ಸಮಾಜದ ಮೇಲೆ ಹಿಡಿತ ಸಾಧಿಸುತ್ತಿವೆ. ಉದಾಹರಣೆಗೆ, ವಾಸ್ತುಶಾಸ್ತ್ರ ಮತ್ತು ಅದರ ಸಂಬಂಧಿಯಾದ ಚೀನಾದ 'ಫೆಂಗ್‌ಶೂಹಾಯ್'ಗಳ ಬಗೆಗಿನ ಹುಚ್ಚು. ಸಮಾಜದ ಪ್ರಭಾವಿ ವ್ಯಕ್ತಿಗಳು ಮತ್ತು ಪ್ರಭಾವಿ ರಾಜಕಾರಣಿಗಳು ಈ ಆಧುನಿಕ ಮೂಢನಂಬಿಕೆಗೆ ಮಾರುಹೋಗಿದ್ದಾರೆ. ಈ ಮೂಢನಂಬಿಕೆಗಳ ಆಚರಣೆಯಿಂದ ಪ್ರಯೋಜನಗಳು ಲಭಿಸುತ್ತವೆ ಎಂಬುದು ವೈಜ್ಞಾನಿಕ ಪರೀಕ್ಷೆಯಲ್ಲಿ ಸಂಪೂರ್ಣ ಸೋತಿದೆ.

೩. ದೇವಮಾನವರೆಂದು ಪರಿಗಣಿಸುವವರು ಕೈಗೊಳ್ಳುವ ಪವಾಡಗಳನ್ನು ವಿಜ್ಞಾನ ಅಲ್ಲಗಳೆದಿದ್ದರೂ ಸಮಾಜದ ಒಂದು ದೊಡ್ಡ ವಿಭಾಗ, ನಗರಗಳ ಸುಶಿಕ್ಷಿತರು ಸಹ 'ಬಾಬಾಗಳ' ಅತಿಮಾನುಷ ಶಕ್ತಿಯ ಬಗ್ಗೆ, ಪವಾಡಗಳ ಬಗ್ಗೆ ಇನ್ನೂ ನಂಬಿಕೆ ಇಟ್ಟುಕೊಂಡಿದ್ದಾರೆ. ಇಂತಹ ಬಾಬಾಗಳ ಪವಾಡಗಳನ್ನು ಬಯಲುಮಾಡಲು ವಿಜ್ಞಾನ ಪತ್ರಿಕೋದ್ಯಮವು ಪ್ರಮುಖಪಾತ್ರ ವಹಿಸಬೇಕಿದೆ.

೪. ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಜ್ಯೋತಿಷ್ಯಶಾಸ್ತ್ರವನ್ನು ವಿಜ್ಞಾನವೆಂದು ಪರಿಗಣಿಸಿರುವುದು ಈ ದುರದೃಷ್ಟಕರ ಬೆಳವಣಿಗೆಯ ಮತ್ತೊಂದು ಸಂಕೇತ. ಇದು ವೇದಗಳಿಂದ ಹುಟ್ಟಿದೆ ಎಂಬ ಅರ್ಥ ಬರುವಂತೆ ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು 'ವೇದಗಳ ಜ್ಯೋತಿಷ್ಯ ಶಾಸ್ತ್ರ' ಎಂಬ ಪದ ಬಳಸಿದರು. ಆದರೆ ಗ್ರೀಸ್, ಬ್ಯಾಬಿಲೋನ್ ಮುಂತಾದ ಪಾಶ್ಚಿಮಾತ್ಯ ದೇಶಗಳಿಂದ ಜಾತಕ ಬಳಸುವ ಗ್ರಹಬಲಗಳ ಜ್ಯೋತಿಷ್ಯಶಾಸ್ತ್ರ ಬಂದಿದೆ ಎಂಬುದನ್ನು ಎಲ್ಲ ಐತಿಹಾಸಿಕ ಆಧಾರಗಳು ತೋರಿಸುತ್ತವೆ.

**ವಿಜ್ಞಾನದ ಕೌತುಕಗಳು ಎಲ್ಲರಿಗೂ ಪ್ರಯೋಜನಕಾರಿ**

ವಿಜ್ಞಾನದಿಂದ ಸರ್ವರಿಗೂ ಉಪಯೋಗವಿದೆ. ಇದರ ಪಟ್ಟಿಯನ್ನು ಹೆಚ್ಚಿಸುತ್ತಾ ಹೋಗಬಹುದು. ಯಾಂತ್ರೀಕರಣವನ್ನು ಅತಿಯಾಗಿ ಅವಲಂಬಿಸಿದಾಗ ಹಲವು ಸಮಸ್ಯೆಗಳು ಉದ್ಭವಿಸುತ್ತವೆ ಎಂಬುದೇನೋ ಸತ್ಯ. ಅದೇ ರೀತಿ ತಂತ್ರಜ್ಞಾನದ ಅನಿಯೋಜಿತ ಬಳಕೆಯಿಂದ ಪರಿಸರ ಮಾಲಿನ್ಯದ ಅಪಾಯವಿದೆ. ಕೆಲವು ವಿಜ್ಞಾನ ಕ್ಷೇತ್ರಗಳಲ್ಲಿ ಸಂಶೋಧನೆ ಮುಂದುವರೆಸಿದರೆ ಸಮಾಜಕ್ಕೆ ತೀವ್ರ ಅಪಾಯ ಬರಬಹುದು ಎಂದಾಕ್ಷಣ ನಾವು ವಿಜ್ಞಾನದ ಮಾರ್ಗದಿಂದ ದೂರ ಸರಿಯುವ ಅಗತ್ಯವಿಲ್ಲ ಮತ್ತು ಅಪ್ರಯೋಜಕ, ಅನರ್ಥಕಾರಿ ಎನಿಸಿಕೊಂಡಿರುವ ಪುರಾತನ ಮೂಢನಂಬಿಕೆಗಳಿಗೆ ಪುನಃ ಜೋತು ಬೀಳುವ ಅಗತ್ಯವೂ ಇಲ್ಲ.

ಪ್ರಥಮ ನೋಟಕ್ಕೆ ನಮ್ಮ ಮುಂದಿರುವ ಸಮಸ್ಯೆಗಳು ಅಗಾಧವೆಂದೆನಿಸಬಹುದು. ಆದರೆ ಅವು ಪರಿಹರಿಸಲಾಗದಂತಹ ಸಮಸ್ಯೆಗಳೇನಲ್ಲ. ಕಳೆದ ಕೆಲವು ದಶಕಗಳಲ್ಲಿ ವಿಜ್ಞಾನ ಸಾಧಿಸಿರುವ ಗಮನಾರ್ಹ ಪ್ರಗತಿಯನ್ನು ನಾವು ಮನಗಾಣಬೇಕು. ವೈಜ್ಞಾನಿಕ ವಿಧಾನವನ್ನು ಸರಿಯಾದ ಮಾರ್ಗದಲ್ಲಿ ಅನುಸರಿಸಿದಾಗ ಭವಿಷ್ಯ ಉತ್ತಮವಾಗಲಿದೆ ಎಂಬುದು ವಾಸ್ತವ. ಚಂದ್ರನಲ್ಲಿಗೆ ಮಾನವನ ಪಯಣ, ಮಂಗಳನ ಅಂಗಳದಲ್ಲಿ ಇಳಿದ ನೌಕೆ, ಉಪಗ್ರಹಗಳ ಮೂಲಕ ನೀಡಿದ ದೂರದರ್ಶನದ ಶಿಕ್ಷಣ, ಸಂವಹನದಲ್ಲಿ ಉಂಟಾದ ಕ್ರಾಂತಿಯಿಂದ ಅತಿದೂರದಲ್ಲಿರುವವರೂ ಸಮೀಪವಾಗಿರುವುದು, ವೈದ್ಯಕೀಯ ವಿಜ್ಞಾನ, ಜೀವಶಾಸ್ತ್ರ, ಕೃಷಿಕ್ಷೇತ್ರಗಳಲ್ಲಾಗಿರುವ ಪ್ರಗತಿ – ನಮ್ಮ ಕಣ್ಣ ಮುಂದಿರುವ ವೈಜ್ಞಾನಿಕ ಪವಾಡ - ಅಚ್ಚರಿಗಳಲ್ಲವೇ ? ಇವೆಲ್ಲವನ್ನು ಒಂದು ತಲೆಮಾರಿನ ಸಮಯಕ್ಕಿಂತ ಕಡಿಮೆ ಅವಧಿಯಲ್ಲಿ ಸಾಧಿಸಿದ್ದೇವೆ, ಅಲ್ಲವೇ ? ದೇವಮಾನವರ 'ಪವಾಡ'ವೆಂದು ಹೇಳುವ ಕೈಚಳಕಗಳಿಗೆ ಹೋಲಿಸಿದರೆ, ವಿಜ್ಞಾನದ ಪವಾಡಗಳು ಒಬ್ಬ ವ್ಯಕ್ತಿಗಲ್ಲ, ಇಡೀ ಮಾನವ ಸಮಾಜಕ್ಕೆ ಒಳಿತನ್ನು ಉಂಟುಮಾಡಿವೆ. ಇವು ಬಡವ ಬಲ್ಲಿದ ಎಂಬ ಭೇದಭಾವ ಮಾಡದೆ ಎಲ್ಲರಿಗೂ ಪ್ರಯೋಜನಕಾರಿಯಾಗಿವೆ. ವಿದ್ಯುತ್‌ಶಕ್ತಿಯ ಆವಿಷ್ಕಾರದಿಂದ ದೂರದ ಹಳ್ಳಿಗಳಲ್ಲೂ ಬೆಳಕು ಲಭ್ಯವಿರುವಂತಾಗಿದೆ.

ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಈ ಸತ್ಯಾಂಶವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡಿವೆ. ಆ ದೇಶಗಳು ವಿಜ್ಞಾನವನ್ನು ಒಟ್ಟಾರೆಯಾಗಿ ಬೆಂಬಲಿಸುತ್ತವೆ. ಅಲ್ಲದೆ ಮೂಲ ಸಂಶೋಧನೆಗೆ ಪ್ರೋತ್ಸಾಹವನ್ನು ಮುಂದುವರೆಸುತ್ತಿವೆ. ಮೂಲ ಸಂಶೋಧನೆಯು ಮೇಲ್ನೋಟಕ್ಕೆ ''ಉಪಯೋಗವಿಲ್ಲದ್ದು'' ಎಂದು ಕಾಣಬಹುದು. ಆದರೆ ಅದು ಮೇಲೆ ತಿಳಿಸಿದಂತಹ ಪ್ರಯೋಜನಗಳಿಗೆ ಕಾರಣವಾಗುವುದರಲ್ಲಿ ಸಂದೇಹವಿಲ್ಲ. ಈ ಹಂತದಲ್ಲಿ ನಾವು ಮೂಲ ಸಂಶೋಧನೆಯನ್ನೂ ಅಲ್ಲಗಳೆದರೆ, ವಿದೇಶಗಳಿಂದ ಹೊಸ ಕಲ್ಪನೆಗಳನ್ನು, ಹೊಳಹುಗಳನ್ನು ಆಮದು ಮಾಡಿಕೊಳ್ಳಬೇಕಾಗುವುದು. ಇದು ನಮ್ಮ ಸ್ವಾವಲಂಬನೆಗೆ ವಿರುದ್ಧವಾದುದು. ಭಾರತದಲ್ಲಿ ಮೂಲ ಸಂಶೋಧನೆಗೆ ಹೇರಳವಾದ ಪ್ರತಿಭೆ ಇದೆ. ಆದರೆ ಬಹುತೇಕ ಅಂತಹವರ ಸಾಮರ್ಥ್ಯವನ್ನು ಬಳಸಿಕೊಂಡಿಲ್ಲ. ಮೂಲ ಸಂಶೋಧನೆಗೆ ಅಗತ್ಯವಾದ ಬೆಂಬಲ ನೀಡುವುದರಿಂದ ಈ ಪ್ರತಿಭೆಗಳು ಅರಳುತ್ತವೆ ಮತ್ತು ತಕ್ಷಣದಲ್ಲಲ್ಲದಿದ್ದರೂ ದೀರ್ಘಾವಧಿಯಲ್ಲಿ ಪ್ರತಿಫಲ ದೊರಕಲಿದೆ. ನನ್ನ ಈ ದೃಷ್ಟಿಕೋನವನ್ನು ವಿವರಿಸಲು ಒಂದು ಉದಾಹರಣೆ ನೀಡುತ್ತೇನೆ. ಒಂದು ದೇಶದಲ್ಲಿ ಸೂರೆಗೊಳ್ಳದ ಅಪಾರ ತೈಲ ನಿಕ್ಷೇಪಗಳಿವೆಯೆಂದು ಭಾವಿಸೋಣ. ಅಧಿಕ ಬಂಡವಾಳ ಬೇಕಾಗುವುದೆಂದು ಆ ತೈಲನಿಕ್ಷೇಪಗಳನ್ನು ಬಳಸಿಕೊಳ್ಳದೇ ಹೋದರೆ ಆ ದೇಶವು ತೈಲಕ್ಕಾಗಿ ಸದಾ ವಿದೇಶಗಳಿಂದ ಆಮದು ಮಾಡಿಕೊಳ್ಳಬೇಕಾಗುತ್ತದೆ. ಮೂಲ ಸಂಶೋಧನೆ ನೀಡುವ ಫಲಕ್ಕೆ ಹೋಲಿಸಿದರೆ ಅದರ ಸಂಶೋಧನೆಗೆ ಅತಿಯಾದ ಬಂಡವಾಳ ಬೇಕಿಲ್ಲವೆಂಬುದನ್ನು ನಾವಿಲ್ಲಿ ಒತ್ತಿಹೇಳಬೇಕಿದೆ. ಆದಾಗ್ಯೂ ನಾವು ಉತ್ಕೃಷ್ಟ ಮಟ್ಟದ ಸಂಶೋಧನೆ ಕೈಗೊಳ್ಳುವುದನ್ನು ಖಾತ್ರಿಗೊಳಿಸಬೇಕು. ನಮ್ಮ ಒಳಗಣ್ಣುಗಳನ್ನು ತೆರೆದಷ್ಟು ಸದಾ ಜಾಗೃತರಾಗಿರಬೇಕು. ನಾವೆಲ್ಲರೂ ಗೊಡ್ಡು ಸಂಪ್ರದಾಯಗಳಿಂದ ಅಂಧರಾಗದೆ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಆಗ ಮಾತ್ರ ನಾವು ಪ್ರಗತಿಪಥದಲ್ಲಿ ಸಾಗಿ ಯಶಸ್ಸು ಸಾಧಿಸಬಹುದು ಎಂಬ ದೃಢ ವಿಶ್ವಾಸ ನನಗಿದೆ.

ಮೂಲ : **ಡಾ|| ಜಯಂತ್ ವಿಷ್ಣು ನಾರ್ಲಿಕರ್**
ಅನುವಾದ : **ಡಾ|| ಎಚ್. ಎಸ್. ನಿರಂಜನಾರಾಧ್ಯ**
ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬನಶಂಕರಿ ೨ನೇ ಹಂತ, ಬೆಂಗಳೂರು -

# ಸರ್ವಂ ಕಾಫಿಮಯಂ

''ಒಂದು ಬಟ್ಟಲು ಕಾಫಿಗೆ ಯಾವಾಗಲೂ ಸ್ವಾಗತವಿದೆ'' ಎಂಬ ನುಡಿಯುಂಟು. ಅರ್ಧ ಬಟ್ಟಲಿನಷ್ಟಾದರೂ ಸರಿಯೆ. ಮನೆಗೆ ಹೋದಾಗ ಕಾಫಿ ನೀಡದಿದ್ದರೆ ಅಂತಹ ಅತಿಥೇಯನಷ್ಟು ಅನಾಗರಿಕ, ಜಿಪುಣ, ಭ್ರಷ್ಟ ಜಗತ್ತಿನಲ್ಲಿ ಮತ್ತಾರೂ ಇಲ್ಲವೆಂದೇ ಗಣನೆ. ಮೊಟ್ಟಮೊದಲಿಗೆ ಗಿಡದಿಂದ ಬೀಜ ಕಿತ್ತು ಹುರಿದು ಪುಡಿಮಾಡಿ ಕಷಾಯ ತಯಾರಿಸಿ ಹಾಲು, ಸಕ್ಕರೆ ಸೇರಿಸಿ ಕಾಫಿ ಸಿದ್ಧಮಾಡಿ ಆಹ್ಲಾದ ಅನಾಮಿಕ ಹೀರಿ ಚಪ್ಪರಿಸಿದನೋ ಕಾಣೆ. ಇತಿಹಾಸ ಅದನ್ನು ದಾಖಲಿಸಿಲ್ಲ. ಆ ಜಗಜ್ಜ್ಯೋತಿ ಅಭಿನಂದನಾರ್ಹನಲ್ಲವೆ ? ಕಾಫಿ ಬಹುಮುಖತೆಯುಳ್ಳ ಅದ್ಭುತ ಪೇಯ. ಅದರ ಸುತ್ತ ಏನೆಲ್ಲ ಆಗುತ್ತದೆ. ಸ್ನೇಹಿಗಳು ಒಂದಾಗುತ್ತಾರೆ. ಮಹತ್ವದ ನಿರ್ಣಯಕ್ಕೆ ಕಾಫಿ ಪ್ರೇರಣೆಯಾಗುತ್ತದೆ. ಕಚೇರಿಯಲ್ಲಿ ಅರ್ಜಿದಾರರು ತಳಮಳಿಸುತ್ತಿದ್ದಾರೆ. ಬಹಳ ದಿನಗಳಿಂದಲೂ ಅಲೆದಾಡುತ್ತಿದ್ದೇವೆ. ತಮಗೆ ಇನ್ನೂ ಪರವಾನಗಿ ಕನಸಾಗಿದೆ ಎಂದೆಲ್ಲ ಮೂದಲಿಸುತ್ತಾರೆನ್ನಿ. ಸಾಹೇಬರು ಬರ್ತಾರೆ ಕೂತ್ಕೊಳ್ಳಿ... ಇಲ್ಲೇ ಕಾಫಿಗೆ ಹೋಗಿದ್ದಾರೆ ಅಂದರಾಯಿತು. ಅಹವಾಲುದಾರರ ತಂಪಾಗುವುದು ಖಾತರಿ. ಜೊತೆಗೆ ಬನ್ನಿ, ಕಾಫಿ ತರಿಸ್ತೀನಿ, ಕುಡಿಯೋಣ, ಅಂದರಂತೂ ಮುಗಿಯಿತು. ಸಮಸ್ಯೆ ಚಿಟಿಕೆ ಹೊಡೆದ ಹಾಗೆ ಕರಗಿರುತ್ತದೆ. ಕಛೇರಿಯ ಕುರ್ಚಿಗೂ ಕಾಫಿಗೂ ಅವಿನಾಭಾವ ನಂಟು. ಆಯಾ ಕುರ್ಚಿಗೆ ಕೋಟು, ಕೊಡೆ, ಟೋಪಿ ವಗೈರೆ ಲಗತ್ತಿಸಿ ಕ್ಯಾಂಟೀನಿಗೆ ದಾಪುಗಾಲು ಹಾಕುವ ಸಂದರ್ಭಗಳೇನು ವಿರಳವೆ ಹೇಳಿ. ನಾನು ಮೈಸೂರಿನಲ್ಲಿ ಬಿ.ಎಸ್‌ಸಿ. ಮುಗಿಸಿ ಬೆಂಗಳೂರಿನಲ್ಲಿ ಒಂದು ಸರ್ಕಾರಿ ಕಛೇರಿಯಲ್ಲಿ ತಾತ್ಕಾಲಿಕವಾಗಿ ಗುಮಾಸ್ತನಾಗಿ ಕೆಲಸಮಾಡುತ್ತಿದ್ದೆ. ನಾವೆಲ್ಲ ನಿರ್ಭಯವಾಗಿ ಯಾವಾಗ ಅಂದರೆ ಆವಾಗ ಸೀರಿಯಲ್ ನಂಬರ್ ಮರೆಯುವಷ್ಟು ಬಾರಿ ಕಾಫಿಗಾಗಿ ಕ್ಯಾಂಟೀನಿಗೆ ಹಾರಿಕೊಳ್ಳುತ್ತಿದ್ದೆವು. ನಮ್ಮ ಸಾಹೇಬರು ಮೀಟಿಂಗ್ ಕರೆದು ಒಂದು ಜನಾತಿ ಕಿವಿಮಾತು ಹೇಳಿದ್ದರು : ''ನೀವೆಲ್ಲ ಕ್ಯಾಂಟೀನಿಗೆ ಬಂದು ಬಿಡುವಿನಲ್ಲಿ ಕುರ್ಚಿಗೆ ಬರುತ್ತೀರಿ. ನಾಳೆಯಿಂದ ಕ್ಯಾಂಟೀನಿನ ಕ್ಯಾಷಿಯರ್ ಬಳಿಯೆ ಹಾಜರಾತಿ ಪುಸ್ತಕ ಇರುತ್ತೆ. ಅಲ್ಲೇ ರುಜು ಮಾಡಿಬಿಡಿ.''

ನಮ್ಮ ಶೇಷು ಅಂಕಲ್ ಅನನ್ಯ ಕಾಫಿಭಕ್ತರು. ಚೊಂಬುಗಟ್ಟಲೆ ಕಡುಕಾಫಿಯನ್ನು ಗಟಗಟನೆ ಕುಡಿಯುವ ಅವರು ಅಂದಕಾಲತ್ತಿಲ್ ಕಾಫಿ ತಯಾರಿಸುವ ವಿಧಾನವನ್ನು ಹೇಳುತ್ತಿರುತ್ತಾರೆ. ಆಗ ಫಿಲ್ಟರ್ ಇನ್ನೂ ಬಳಕೆಗೆ ಬಂದಿರಲಿಲ್ಲವಂತೆ. ಬಟ್ಟೆಯನ್ನು ಪಾತ್ರೆಯ ಬಾಯಿಗೆ ಮುಚ್ಚಿ ಅದರ ಮೇಲೆ ಕಾಫಿ ಪುಡಿಯನ್ನು ಅದರ ಮಧ್ಯದಲ್ಲಿ ಹಾಕುತ್ತಿದ್ದರು. ಕುದಿಯುವ ಬೆಲ್ಲದ ನೀರನ್ನು ಅದರ ಮೇಲೆ ಸುರಿಯುತ್ತಿದ್ದರಂತೆ. ಕಷಾಯ ಪಾತ್ರೆಯಲ್ಲಿ ಇಳಿಯುತ್ತಿತ್ತು. ಬಿಸಿ ಹಾಲು ಬೆರೆಸಿದರೆ ಸ್ವರ್ಗಕ್ಕೂ ಮಿಗಿಲಾದ ಕಾಫಿ ! ಅಂಕಲ್ ಅತಿಥಿಯಾಗಿ ಯಾರ ಮನೆಗಾದರೂ ವಕ್ಕರಿಸಿದರೆ ಆತಿಥೇಯರ ಕಥೆ ಹೇಳತೀರದು. ಅವರಿಗೆ ತಿಂಡಿ, ಊಟಕ್ಕಿಂತಲೂ ಕಾಫಿ ಉಪಚರಿಸುವುದರಲ್ಲೇ ಸುಸ್ತಾಗಿಬಿಡುತ್ತಿತ್ತು. ಶೇಷು ಅಂಕಲ್‌ಗೆ ಅವರ ಆಪ್ತರೊಬ್ಬರು ಒಂದು ಭರ್ಜರಿ ಸಲಹೆಯನ್ನು ನೀಡಿದ್ದರಂತೆ: ''ಒಂದು ಕೆಲ್ಸ ಮಾಡು ಮಾರಾಯ. ನಿನ್ನ ಬಾಯಿಯನ್ನು ಬಟ್ಟೆಯಿಂದ ಮುಚ್ಚು. ಅದರ ಮೇಲೆ ಪುಡಿ ಹಾಕಿ ಬಿಸಿ ನೀರು ಸುರಿಯೋಣ'' ಅಂತ !

ಕಾಫಿ ತರಾವರಿ – ಲೈಟ್ ಕಾಫಿ, ಸ್ಟ್ರಾಂಗ್ ಕಾಫಿ, ಡಬಲ್ ಸ್ಟ್ರಾಂಗ್ ಕಾಫಿ, ಮೀಡಿಯಂ ಕಾಫಿ, ಶುಗರ್‌ಲೆಸ್ ಕಾಫಿ ಹೀಗೆ. ಅಂದಹಾಗೆ ಎಷ್ಟು ಸಲೀಸಾಗಿ 'ನಂಗೆ ಶುಗರ್‌ಲೆಸ್ಸು' ಅಂತ ಹೇಳಿಸಿ ಅವರ ವ್ಯಾಧಿಯನ್ನು ರಟ್ಟು ಮಾಡಿಬಿಡುತ್ತದಲ್ಲ ಕಾಫಿ ! ಮರೆತಿದ್ದೆ, ಬೆಡ್ ಕಾಫಿ ಅಂತ ಬೇರೆ ಬಗೆ. ಹಗುರವಾಗಿ ವ್ಯಾಖ್ಯಾನಿಸುವುದಾದರೆ ಹಲ್ಲುಜ್ಜದೆಯೆ ಅನ್ನುವುದಿರಲಿ, ಹಾಸಿಗೆಯಿಂದ ಸರಿಯಾಗಿ ಮೇಲೆ ಏಳದೆಯೆ ಗುಟುಕರಿಸುವ ಕಾಫಿಯದು ! ಪತಿರಾಯ ಅರ್ಧಾಂಗಿಯನ್ನು ಪದೇ ಪದೇ ಕಾಫಿಗೆ ಪೀಡಿಸುತ್ತಿದ್ದರೆ ಪಾಪ ಆಕೆ ತಾನೆ ಏನು ಮಾಡಿಯಾಳು ? ಬೆಳಗಿನ ಮೊದಲ ಡೋಸು ಸರಿ. ಎರಡನೆಯ ಡೋಸಿಗೆ ಅದರ ಗುಣಮಟ್ಟ ಅಂದರೆ ಕಡುತ್ವ ಸೊರಗಿರುತ್ತದೆ ! ಮೂರನೆಯ ಡೋಸು ಸಕ್ಕರೆ ಅಥವಾ ಹಾಲು (ಅದು ಮನೆಯಲ್ಲಿ ತೀರದೆ ಉಳಿದಿದ್ದರೆ) ಜಾಸ್ತಿ. ಇನ್ನು ನಾಲ್ಕನೆಯದಂತೂ ಕೇಳಲೇಬೇಡಿ. ಅದು ಕಾಫಿಯೋ ಟೀಯೋ ತಿಳಿಯದಷ್ಟು ವ್ಯತ್ಯಯಗೊಂಡಿರುತ್ತದೆ. ನಮ್ಮ ಚಿಕ್ಕಪ್ಪ ರಾಘಣ್ಣ ಎಂಭತ್ತರ ಇಳಿವಯಸ್ಸಿನಲ್ಲೂ ಕಾಫಿಯನ್ನು ಹೆಚ್ಚೆಚ್ಚು ರುಚಿಕರವಾಗಿ ತಯಾರಿಸಲು ನಾನಾ ಪ್ರಯೋಗಗಳನ್ನು ಮಾಡುತ್ತಾರೆ. ಫಿಲ್ಟರಿಗೆ ಕಲ್ಲಿದ್ದಲ ಚೂರು ಹಾಕಿದ್ದರೆ ಕಾಫಿ ಸ್ವಾದಮಯವಾಗಿರುತ್ತದಂತೆ. ಆಗಿಂದಾಗ್ಗೆ ಅವರು ''ಕುದಿಸಿದ ಕಾಫಿ ಕೆಡಿಸಿದ ಕಾಫಿ'' ಎಂಬ ಉಕ್ತಿಯನ್ನು ಉದ್ಧರಿಸುತ್ತಾರೆ.







ಅವರೆಷ್ಟು ಸೂಕ್ಷ್ಮವೆಂದರೆ ಕಷಾಯವನ್ನು ಇಷ್ಟೇ ನಿಮಿಷಗಳ ಹಿಂದೆ ಇಳಿಸಲಾಗಿದೆ. ಇಷ್ಟೇ ಪ್ರಮಾಣದ ಚಿಕೋರಿಯಿದೆ. ಹುಣಸೆಬೀಜ ಹಾಕಿದೆ... ಎಂದು ನಿಖರವಾಗಿ ಹೇಳುತ್ತಾರೆ. ಆಕಸ್ಮಿಕವಾಗಿ ಜಿಡ್ಡು, ಎಣ್ಣೆ ಏನಾದರೂ ಸೋಕಿದ್ದರೆ ಸಿಂಹದಂತೆ ವ್ಯಗ್ರರಾಗುತ್ತಾರೆ. ಕಾಫಿಯ ಕಡುಶತ್ರು ಜಿಡ್ಡು ಎನ್ನುವುದು ದಿಟವೆ ಅನ್ನಿ.

ಇಸವಿ ೧೯೫೫. ಬೆಂಗಳೂರಿನಲ್ಲಿ ನಮ್ಮ ದೊಡ್ಡಪ್ಪನ ಹಿರಿಮಗಳು ರಂಗಮಣಿಯ ವಿವಾಹ. ಆ ಛತ್ರ ಲಾಲ್‌ಬಾಗ್ ರಸ್ತೆಯಲ್ಲಿತ್ತು. ಇಂದು ಕಾಂಪ್ಲೆಕ್ಸ್ ಆಗಿದೆ. ನಾಲ್ಕುದಿನಗಳವರೆಗೆ ಅದ್ದೂರಿಯಾಗಿ ನೆರವೇರಿದ ಮದುವೆ. ಬೀಗರೌತಣದ ಹಿಂದಿನ ದಿನ ರಾತ್ರಿಯೆ ಅಡಿಗೆಮನೆಯಲ್ಲಿ ದೊಡ್ಡ ಫಿಲ್ಟರಿನಲ್ಲಿ ಕಷಾಯ ಸಿದ್ಧವಾಗಿತ್ತು. ನಾನು ಹೇಳಿಕೇಳಿ ಕೀಟಲೆ ಹುಡುಗ. ತಿಳಿದೋ ತಿಳಿಯದೆಯೋ ಫಿಲ್ಟರಿನ ತಳಭಾಗದಲ್ಲಿನ ತಿರುಪನ್ನು (ನಲ್ಲಿಯ) ಸುತ್ತು ತಿರುಗಿಸಿಬಿಟ್ಟಿದ್ದೆ. ಕಷಾಯವೆಲ್ಲ ಬಚ್ಚಲಿಗೆ ಹರಿದುಹೋಗಿತ್ತು. ಮರುದಿನ ಕಾಫಿ ಉಸ್ತುವಾರಿ ವಹಿಸಿದ್ದ ಕಲಿರಾಮ (ಅದು ಅವರ ಅಡ್ಡಹೆಸರು) ಸ್ವತಃ ನಮ್ಮ ದೊಡ್ಡಮ್ಮನ ತಮ್ಮ ನಾನು ಎಸಗಿದ ಪ್ರಮಾದದಿಂದಾಗಿ ಛತ್ರದಿಂದ ನಾಪತ್ತೆಯಾಗಿದ್ದ ! ನನ್ನ ಲೇಖನವನ್ನು ಇಂತಹ ಪತ್ರಿಕೆ ಮ್ಯಾಗಜೈನ್‌ನಲ್ಲಿ ನೋಡಿದಿರಾ. ಎಂದು ಕೇಳಿದರೆ ಸಾಕು ನನ್ನ ಆಪ್ತಗೆಳೆಯರು ನಡಿಯಿರಿ ಕಾಫಿ ಹಾಕಿಸಿ ಅನ್ನುತ್ತಾರೆ.

ಬಿಂಡಿಗನವಿಲೆ ಭಗವಾನ್

೩೬ ಇ, ೫ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦೦೫೦

# ಚಿತ್ರದುರ್ಗ ಜಿಲ್ಲೆಯ ಗುಡಿ ಕೈಗಾರಿಕೆಗಳು

## ಒಂದು ವಿಶ್ಲೇಷಣೆ





**ಯಾ**ವುದೇ ದೇಶ, ಪ್ರದೇಶದ ಆರ್ಥಿಕತೆ ಅಲ್ಲಿನ ಉದ್ಯಮ ವ್ಯವಸ್ಥೆಯನ್ನು ಆಧರಿಸಿರುತ್ತದೆ. ಎಲ್ಲಿ ಉದ್ಯೋಗ, ಕಸುಬು ಅಥವಾ ವೃತ್ತಿಗಳು ಜೀವನದ ಕನಿಷ್ಠ ಅವಶ್ಯಕತೆಗಳನ್ನು ಪೂರೈಸುತ್ತವೆಯೋ ಅಲ್ಲಿ ನೆಮ್ಮದಿಯ ಬದುಕು ಇರಲು ಸಾಧ್ಯ. ಎಲ್ಲಿ ಉದ್ಯೋಗ ವ್ಯವಸ್ಥೆ ಅಭದ್ರವಾಗಿರುತ್ತದೋ ಅಲ್ಲಿ ಜನರಲ್ಲಿ ತಲ್ಲಣ, ಆತಂಕ, ಅರಾಜಕತೆಗಳು ತಾನೇ ತಾನಾಗಿ ತಲೆ ಎತ್ತುತ್ತವೆ. ಅಂಥ ಸಂದರ್ಭಗಳಲ್ಲಿ ಜನರ ಅಸಹನೆ, ಆಕ್ರೋಶಗಳು ಪ್ರತಿಭಟನೆ, ಚಳವಳಿ ಮುಂತಾದ ರೀತಿಯಲ್ಲಿ ಅಭಿವ್ಯಕ್ತವಾಗುತ್ತವೆ ಇಲ್ಲವೆ ಬೂದಿಮುಚ್ಚಿದ ಕೆಂಡದಂತೆ ಸುಪ್ತವಾಗಿಯಾದರೂ ಉರಿಯುತ್ತಿರುತ್ತವೆ. ಜಗತ್ತಿನಾದ್ಯಂತ ಜಾಗತೀಕರಣದ ಹೆಸರಿನಲ್ಲಿ ಇಂದು ನಡೆಯುತ್ತಿರುವ ವಿದ್ಯಮಾನಗಳು ಉದ್ಯೋಗ ವ್ಯವಸ್ಥೆಯಲ್ಲಿ ತಲ್ಲಣ ಉಂಟುಮಾಡುತ್ತಿರುವುದರಿಂದಲೇ ಶೋಷಣೆರಹಿತವಾದ ಸುಭದ್ರ ಉದ್ಯೋಗ ವ್ಯವಸ್ಥೆಯ ಬಗ್ಗೆ ಗಂಭೀರವಾಗಿ ಆಲೋಚಿಸಬೇಕಿದೆ. ಉದ್ಯೋಗವನ್ನರಸಿ ಜಗತ್ತಿನ ಮೂಲೆ ಮೂಲೆಗಳಿಗೆ ವಲಸೆಹೋಗಿ ಬದುಕನ್ನು ಕಟ್ಟಿಕೊಳ್ಳುವುದು ಎಲ್ಲರಿಗೂ ಸಾಧ್ಯವಾಗದ ಮಾತು. ಹಾಗಿರುವಾಗ ಬಹುಸಂಖ್ಯಾತ ಜನರಿಗೆ ಅವರಿರುವ ಜಾಗದಲ್ಲೇ, ಅಲ್ಲಿನ ಸಂಪನ್ಮೂಲಗಳನ್ನು ಬಳಸಿಯೇ, ಅವರ ಅವಶ್ಯಕತೆಗಳಿಗೆ ತಕ್ಕಂತಹ ಸರಕು ಮತ್ತು ಸೇವೆಗಳನ್ನು ಉತ್ಪಾದಿಸಿ ಅನುಭೋಗಿಸುವ ಅವಕಾಶ ಕಲ್ಪಿಸಿಕೊಡುವ ಉದ್ಯಮ ಮತ್ತು ಉದ್ಯೋಗ ವ್ಯವಸ್ಥೆ ನಮ್ಮ ಉದ್ದೇಶವಾಗಬೇಕು.

ಭಾರತದಂತಹ ಕೃಷಿಪ್ರಧಾನ ರಾಷ್ಟ್ರದಲ್ಲಿ ಅಂಥ ಆದರ್ಶ ಉದ್ಯೋಗ ವ್ಯವಸ್ಥೆಯನ್ನು ಗುಡಿ ಕೈಗಾರಿಕೆಗಳು ನೀಡುತ್ತ ಬಂದಿವೆ. ಅದರಲ್ಲೂ ಗ್ರಾಮೀಣ ಪ್ರದೇಶದ ಸಾಂಪ್ರದಾಯಿಕ ಕಸುಬುಗಾರಿಕೆಗಳಂತೂ ಪ್ರಜಾಸತ್ತಾತ್ಮಕ ವ್ಯವಸ್ಥೆಯ ಆಶಯದ ಬದುಕನ್ನು ನೀಡುವಲ್ಲಿ ಅತ್ಯಂತ ಯಶಸ್ವಿಯಾದವುಗಳು. ದಿಢೀರ್ ಏಳು-ಬೀಳುಗಳ ಅವಾಂತರವಿಲ್ಲದೆ ಸ್ವಾಭಿಮಾನದ ಸುಸ್ಥಿರ ಬದುಕನ್ನು ಇವುಗಳಲ್ಲಿ ತೊಡಗಿರುವವರಿಗೆ ನೀಡಿವೆ. ಬಂಡವಾಳ, ತಂತ್ರಜ್ಞಾನ, ಕಚ್ಚಾವಸ್ತು ಮುಂತಾದವುಗಳಿಗೆ ಹೊರಗಿನಿಂದ ಆಶ್ರಯ ಬೇಡದೆ ತಮ್ಮಷ್ಟಕ್ಕೆ ತಾವೇ ಸ್ವತಂತ್ರವಾಗಿ ನಿರ್ವಹಿಸಲ್ಪಡುವ ಈ ಕೈಗಾರಿಕೆಗಳು ಪರಿಸರಕ್ಕಂತೂ ಯಾವತ್ತೂ ಮಾರಕವಾಗಿಲ್ಲ. ಬದಲಾಗಿ ನಿಸರ್ಗದೊಂದಿಗೆ ಸಮ್ಮಿಳಿತಗೊಂಡು ಸಾಗಿಬಂದಿವೆ. ವಿದ್ಯುಚ್ಛಕ್ತಿ, ಪೆಟ್ರೋಲ್, ಡೀಸೆಲ್‌ಗಳಂಥ ಇಂಧನಗಳ ಮೇಲೆ ಯಾವತ್ತೂ ಅವಲಂಬಿತವಾಗಿಲ್ಲ. ಸ್ಥಳೀಯ ಬಳಕೆಗೆ ಒಂದಿಷ್ಟೂ ಲಭ್ಯವಿಲ್ಲದೆ ಕೇವಲ ಜಾಗತಿಕ ಮಾರುಕಟ್ಟೆಗಾಗಿಯೇ ಸರಕು-ಸೇವೆಗಳನ್ನು ಉತ್ಪಾದಿಸುವುದು ಉದ್ಯೋಗಾವಕಾಶಗಳ ದೃಷ್ಟಿಯಿಂದ ಅದೆಷ್ಟು ಅಪಾಯಕರ ಎನ್ನುವುದನ್ನು ಇತ್ತೀಚಿನ ಜಾಗತಿಕ ಆರ್ಥಿಕ ಬಿಕ್ಕಟ್ಟುಗಳು ಸಾಬೀತುಪಡಿಸಿವೆ. ಇಂದು ಗುಡಿ ಕೈಗಾರಿಕೆಗಳ ಇಂಥ ಅನುಕೂಲಗಳನ್ನು ವಿವರಿಸಿದರೆ ಒಂದು ಕಾವ್ಯದ ಅಥವಾ ಸಾಹಿತ್ಯ ಕೃತಿಯ ಸೊಬಗನ್ನು ಕುರಿತು ವಿವರಿಸಿದಂತಾಗುತ್ತದೆ. ಅವುಗಳ ಸೊಬಗು ಅಂತಹುದು.

ಈ ಕಾರಣದಿಂದಾಗಿಯೇ ಎಲ್ಲ ಕಾಲಘಟ್ಟಗಳಲ್ಲಿ ವ್ಯವಸ್ಥೆಯ ಆಡಳಿತದ ಹೊಣೆ ಹೊತ್ತ ಪ್ರಭುತ್ವಗಳು ಇವುಗಳನ್ನು ಪೋಷಿಸುತ್ತಲೂ ಬಂದಿವೆ. ಇವತ್ತಿನ ಆಧುನಿಕ ಸಂದರ್ಭದಲ್ಲೂ, ನಮ್ಮ ದೇಶವನ್ನೂ ಒಳಗೊಂಡಂತೆ ಜಪಾನ್, ಚೀನಾ ಮುಂತಾದ ದೇಶಗಳು, ''ಚಿಕ್ಕದು ಸುಂದರ'' ಎಂಬ ಪ್ರಶಂಸೆಗೆ ಪಾತ್ರವಾದ ಈ ಕೈಗಾರಿಕೆಗಳಿಗೆ ಮೆಚ್ಚಿನ ಒತ್ತು ನೀಡಿವೆ. ಬದಲಾದ ಸಂದರ್ಭಗಳಿಗೆ ತಕ್ಕಂತೆ ಅವುಗಳನ್ನು ರೂಪಾಂತರಗೊಳಿಸುತ್ತಲೂ ಇವೆ. 'ಸ್ಮಾಲ್ ಈಸ್ ಬ್ಯೂಟಿಫುಲ್' ಪುಸ್ತಕ ಖ್ಯಾತಿಯ ನೊಬೆಲ್ ಅರ್ಥಶಾಸ್ತ್ರಜ್ಞ ಶೂಮೇಕರ್ ಇಂಥ ಆರ್ಥಿಕ ಸಂಸ್ಥೆಗಳನ್ನು ಸ್ವಚ್ಛ ಸಂಸ್ಕೃತಿಯ ಮತ್ತು ಸುಸ್ಥಿರ ಅಭಿವೃದ್ಧಿಯ ಆಧಾರಸ್ತಂಭಗಳೆಂದು ಬಣ್ಣಿಸಿದ್ದಾರೆ. ವಿಷಾದನೀಯ ಸಂಗತಿ ಎಂದರೆ ಇಂಥವುಗಳು ಇತ್ತೀಚೆಗೆ ನಿರ್ಲಕ್ಷ್ಯಕ್ಕೆ ಒಳಗಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಇವುಗಳಲ್ಲಿ ತೊಡಗಿರುವ ಕರಕುಶಲಕರ್ಮಿಗಳು ಬಡತನದ ಅಂಚಿಗೆ ಜಾರುತ್ತಿದ್ದಾರೆ. ಸುಮಾರು ಮೂರೂವರೆ ಕೋಟಿ ಜನರಿಗೆ ಉದ್ಯೋಗಾವಕಾಶ ಕಲ್ಪಿಸುವ ಈ ವಲಯಕ್ಕೆ ಪಂಚವಾರ್ಷಿಕ ಯೋಜನೆಗಳಲ್ಲಿ ಪ್ರಾಶಸ್ತ್ಯ ನೀಡಿದ್ದೂ ಅನುಷ್ಠಾನದಲ್ಲಿ ಏರುಪೇರಾಗುವುದು ವಾಸ್ತವದ ಸಂಗತಿ.

### ಸ್ಥಿತ್ಯಂತರ

ಗ್ರಾಹಕರ ಮತ್ತು ಅನುಭೋಗಿಗಳ ಅನುಭೋಗದ ವಿಧಾನಗಳು ವೈವಿಧ್ಯಗೊಂಡಂತೆ ಮತ್ತು ತಂತ್ರಜ್ಞಾನ ಬೆಳೆದಂತೆ ಗೃಹ ಕೈಗಾರಿಕೆಗಳಲ್ಲೂ ರೂಪಾಂತರಗಳಾಗಿವೆ, ಸ್ಥಿತ್ಯಂತರಗಳಾಗಿವೆ. ಅಪ್ಪಟ ಸಾಂಪ್ರದಾಯಿಕ ಗುಡಿ ಕೈಗಾರಿಕೆಗಳಾದ ನೇಯ್ಗೆ, ಮಡಕೆ ಮಾಡುವುದು, ಚಮ್ಮಾರಿಕೆ, ಸುಣ್ಣ ಸುಡುವುದು, ಬಡಗಿ ಕೆಲಸ, ಕಮ್ಮಾರಿಕೆ, ಕುಸುರಿ ಕಲೆ, ಚಿನ್ನ-ಬೆಳ್ಳಿ ಒಡವೆ ತಯಾರಿಕೆ ಮುಂತಾದ ಕೆಲಸಗಳಲ್ಲಿ ಪೂರ್ಣವಾಗಿ ಅಥವಾ ಭಾಗಶಃ ಯಂತ್ರಗಳ ಬಳಕೆಯಾಗುತ್ತಿದೆ. ವಿದ್ಯುಚ್ಛಕ್ತಿಯಂತಹ ಇಂಧನಗಳ ಮೇಲಿನ ಅವಲಂಬನೆ ಹೆಚ್ಚಾಗುತ್ತಿದೆ. ಜೊತೆಗೆ ಸೋಪು, ಶಾಂಪೂ, ರೇಡಿಯೋ ಜೋಡಣೆ, ಟೆಲಿವಿಷನ್ ಭಾಗಗಳ ಜೋಡಣೆ, ಯಂತ್ರ ರಿಪೇರಿ, ಬ್ಯೂಟಿ ಪಾರ್ಲರ್, ಟೈಲರಿಂಗ್, ಪ್ಲಾಸ್ಟಿಕ್ ಉಪಕರಣಗಳ ತಯಾರಿಕೆ ಮುಂತಾದ ಹಲವಾರು ಹೊಸಬಗೆಯ ಕಸುಬುಗಳು ಹುಟ್ಟಿಕೊಂಡಿವೆ. ನಗರೀಕರಣದ ಪ್ರಭಾವದಿಂದಾಗಿ ಅಂಥ ಗುಡಿ ಕೈಗಾರಿಕೆಗಳು ಹೆಚ್ಚುತ್ತಿವೆ. ಆದರೆ ಸಾಂಪ್ರದಾಯಿಕ ಗುಡಿ ಕೈಗಾರಿಕೆಗಳಲ್ಲಿದ್ದಂತೆ ಕಸುಬುದಾರನ ವಾಸ ಮತ್ತು ಉದ್ಯೋಗ ಒಂದೇ ಕಡೆ ಇರದೆ, ಕಸುಬು ಒಂದು ಮೂಲೆಯಲ್ಲಾದರೆ ವಾಸ ಮತ್ತೊಂದು ಮೂಲೆಯಲ್ಲಾಗುತ್ತಿದೆ. ಆಧುನಿಕ ಕೈಗಾರಿಕೀಕರಣದ ಪ್ರಭಾವದಿಂದ. ಏಕೆಂದರೆ ಈಗ ಆಧುನಿಕ ಗುಡಿ ಕೈಗಾರಿಕೆಗಳೆಂದು ಕರೆಯಲ್ಪಡುವ ಘಟಕಗಳು ಒಂದಲ್ಲ ಒಂದು ರೀತಿಯಲ್ಲಿ ದೊಡ್ಡ ಪ್ರಮಾಣದ ಕೈಗಾರಿಕೆಗಳ ಸರಕು-ಸೇವೆಗಳಿಗೆ ಪೂರಕ ಘಟಕಗಳಾಗಿವೆ. ತುಂಬ ಗಣನೀಯವಾಗಿ ಕಾಣಬರುತ್ತಿರುವ ಬದಲಾವಣೆ ಅಥವಾ ಸ್ಥಿತ್ಯಂತರವೆಂದರೆ ಸಾಂಪ್ರದಾಯಿಕ ಕಸುಬುಗಳಿಗೆ ಅಂಟಿಕೊಂಡಿದ್ದ ಕೃಷಿಭೂಮಿ ಹೊಂದಿರದ ಕುಟುಂಬಗಳ ಯುವಕರು ನಗರ-ಪಟ್ಟಣಗಳಿಗೆ ವಲಸೆ ಬಂದು, ಯಾವ ಔಪಚಾರಿಕ ತರಬೇತಿಯೂ ಇಲ್ಲದೆ ಅಲ್ಲಿನ ಅಸಾಂಪ್ರದಾಯಿಕ ಕಸುಬುಗಳಲ್ಲಿ ಅರೆಬರೆಯಾಗಿ ಸೇರ್ಪಡೆಯಾಗುತ್ತಿರುವುದೇ ಆಗಿದೆ. ಈ ಪರಿಸ್ಥಿತಿಯನ್ನು ಬದಲಿಸಬೇಕಾದ ಅಗತ್ಯವಿದೆ.

ಚಿತ್ರ-ಲೇಖನ

**ಡಾ॥ ಜಿ. ಎನ್. ಮಲ್ಲಿಕಾರ್ಜುನಪ್ಪ**



ಬಯಲುಸೀಮೆಯ ಬಿಸಿಲಿನಿಂದ, ಹಿಂದುಳಿದ, ಯಾವ ದೊಡ್ಡ ಕೈಗಾರಿಕಾ ಘಟಕಗಳೂ ಇರದ, ಹಾಗೆಯೇ ಕೇಂದ್ರವೂ ಇಗಿರದ ಚಿತ್ರದುರ್ಗದಂತಹ ಜಿಲ್ಲೆಯಲ್ಲಿ ಅಭಿವೃದ್ಧಿಯ ದೃಷ್ಟಿಯಿಂದ ಸಣ್ಣ ಮತ್ತು ಗುಡಿ ಕೈಗಾರಿಕೆಗಳನ್ನು ಬೆಳೆಸಲು ವಿಪುಲ ಅವಕಾಶಗಳಿವೆ. ಈ ಕೈಗಾರಿಕೆಗಳ ಉತ್ಪನ್ನಗಳನ್ನು ಜಾಗತಿಕ ಮಾರುಕಟ್ಟೆಯವರೆಗೂ ಒಯ್ಯುವ ಅವಕಾಶಗಳಿವೆ. ಚಿತ್ರದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳು ಹತ್ತಿ ಬಟ್ಟೆ ಉತ್ಪಾದಿಸುವಲ್ಲಿ ಈ ಹಿಂದೆ ನಾಡಿನಲ್ಲೇ ಹೆಸರಾಗಿದ್ದವು. ನೂರಾರು ಕುಟುಂಬಗಳು ಇಂದೂ ಕೂಡ ಈ ಕಸುಬಿನಲ್ಲಿ ತೊಡಗಿವೆ. ರೇಷ್ಮೆ ಸೀರೆ ನೇಯ್ಗೆಗೆ ಮೊಳಕಾಲ್ಮೂರು ತಾಲ್ಲೂಕು ಹೆಸರುವಾಸಿ. ಚಳ್ಳಕೆರೆ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲ್ಲೂಕುಗಳ ಕಂಬಳಿ ಉದ್ಯಮ ರಾಜ್ಯದಲ್ಲೇ ಪ್ರಥಮ ಸ್ಥಾನದಲ್ಲಿದೆ. ದುರಂತವೆಂದರೆ ಇದರಲ್ಲಿ ತೊಡಗಿರುವ ಯಾರೂ ಬಡತನದ ರೇಖೆಯಿಂದ ಮೇಲೆದ್ದಿಲ್ಲ, ಮಧ್ಯಮವರ್ಗದವರೆಂತೂ ತುಂಬಾ ಕಡಿಮೆ. ಸರ್ಕಾರದ ಹಾಲಿ ಅಂಕಿ-ಅಂಶಗಳ ಪ್ರಕಾರ ಇಂಥ ೨೪ ಗುಡಿ ಕೈಗಾರಿಕೆಗಳಲ್ಲಿ ಸುಮಾರು ೧೭ ಸಾವಿರ ಕಸುಬುದಾರರಿದ್ದಾರೆ.

ಎಲ್ಲ ದೇಶ-ಪ್ರದೇಶಗಳಂತೆ ಇತ್ತೀಚೆಗೆ ಚಿತ್ರದುರ್ಗ ಜಿಲ್ಲೆಯಲ್ಲೂ ಆಧುನಿಕ ಸರಕು-ಸೇವೆಗಳ ಘಟಕಗಳಿವೆ. ಎಲೆಕ್ಟ್ರಿಕಲ್, ಎಲೆಕ್ಟ್ರಾನಿಕ್ ಮತ್ತು ಯಂತ್ರೋಪಕರಣ ಆಧಾರಿತ ಕ್ಷೇತ್ರಗಳಲ್ಲಿ ಹೊಸ ಘಟಕಗಳು ಆರಂಭವಾಗುತ್ತಿವೆ. ಭಾರತ ಸರ್ಕಾರದ ಖಾದಿ ಮತ್ತು ಗ್ರಾಮೋದ್ಯೋಗ ಕೈಗಾರಿಕಾ ಇಲಾಖೆ ಗುರುತಿಸಿರುವ ಗಣಿಗಾರಿಕೆ, ಅರಣ್ಯ, ಕೃಷಿ, ತಾಂತ್ರಿಕ, ಬಟ್ಟೆ ಉತ್ಪಾದನೆ ಸೇವೆ ಮುಂತಾದ ಎಲ್ಲ ವರ್ಗಗಳಿಗೆ ಸೇರಿದ ಹಲವು ಗುಡಿ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದಿವೆ. ಮೊಳಕಾಲ್ಮೂರು ತಾಲ್ಲೂಕಿನ ಬಿ. ಜಿ. ಕೆರೆಯು ಎತ್ತಿನ ಗಾಡಿಗಳನ್ನು ಮಾಡುವುದರಲ್ಲಿ ಮತ್ತು ಹೊಳಲ್ಕೆರೆಯ ಎಸ್. ಜಿ. ಹಳ್ಳಿಯು ಕಲ್ಲಿನ ವಿಗ್ರಹಗಳನ್ನು ಕೆತ್ತುವುದರಲ್ಲಿ ಅತ್ಯಂತ ಹೆಸರುವಾಸಿಯಾದ ಸ್ಥಳಗಳಾಗಿದ್ದವು. ಸುಣ್ಣ ಸುಡುವ ಗುಮ್ಮಿಗಳು ಸಾಮಾನ್ಯವಾಗಿ ಚಿತ್ರದುರ್ಗ ಪಟ್ಟಣದ ಹೊರವಲಯವೂ ಸೇರಿದಂತೆ ಎಲ್ಲೆಡೆ ಇದ್ದವು. ಇಂದು ಅವುಗಳ ಸಂಖ್ಯೆ ಕಡಿಮೆಯಾಗುತ್ತಿದೆ.

ಗುಡಿ ಕೈಗಾರಿಕೆಗಳ ಬಹುಮುಖ್ಯ ಲಕ್ಷಣ ಎಂದರೆ ಇವುಗಳಲ್ಲಿ ತೊಡಗಿಸಿಕೊಂಡವರು ತಂದೆಯಿಂದ ಮಕ್ಕಳು, ಮಕ್ಕಳಿಂದ ಮೊಮ್ಮಕ್ಕಳು ಹೀಗೆ ಕಸುಬನ್ನು ತಲೆತಲಾಂತರದಿಂದ ಒಬ್ಬರಿಂದೊಬ್ಬರು ಕಲಿಯುತ್ತಾ ಬಂದವರೇ ಹೊರತು ಹೊರಗಿನಿಂದ ತರಬೇತಿ ಪಡೆದು ಕಸುಬಿನಲ್ಲಿ ತೊಡಗಿಕೊಂಡವರಲ್ಲ. ಹಾಗಾಗಿ ಕರಕುಶಲ ಕಸುಬುದಾರಿಕೆ ಎನ್ನುವುದು ಕೌಟುಂಬಿಕ ವೃತ್ತಿಯಾಗಿ, ಗ್ರಾಮದ ಕಸುಬಾಗಿ, ಅಂತಿಮವಾಗಿ ಒಂದು ಜಾತಿಯ ಕಸುಬಾಗಿ ಪರಿಗಣಿತವಾಗಿದೆ. ಕಸುಬು ಮತ್ತು ಜಾತಿಯ ನಂಟು ಅದೆಷ್ಟು ಕಬಿಮುಷ್ಟಿಯಾಯ್ತೆಂದರೆ, ಒಂದು ಕಸುಬಿನ ಜಾತಿಯವರು ಮತ್ತೊಂದು ಕಸುಬನ್ನು ಕಲಿಯಲು ಪ್ರಯತ್ನಿಸಲೇ ಇಲ್ಲ. ಕೃಷಿ ಭೂಮಿ ಇರದ ಕೃಷಿ ಕಾರ್ಮಿಕೇತರ ಜನರಿಗೆ ಈ ಉದ್ಯೋಗಗಳು ಭರವಸೆಯ ಬದುಕಿನ ಆಸರೆಯಾಗಿದ್ದವು. ಮನೆತನದ ಮತ್ತು ಕುಲಕಸುಬು ಎಂದು ಜನ ಅಭಿಮಾನದಿಂದ ಇವುಗಳಲ್ಲಿ ತೊಡಗಿಕೊಳ್ಳುತ್ತಿದ್ದರು. ಆದಾಯದಾಯಕವಲ್ಲದ ಕಾರಣದಿಂದ ಇದೀಗ ಯುವಜನಾಂಗ ಇಂಥ ಕಸುಬುಗಳಲ್ಲಿ ತೊಡಗಿಕೊಳ್ಳುತ್ತಿಲ್ಲ. ಅಕ್ಷರಸ್ಥರಲ್ಲದವರೂ ಇಂಥ ಕಸುಬುಗಳಲ್ಲಿ ತೊಡಗಿ ಜೀವನ ನಡೆಸುವುದು ಸುಲಭವಾಗಿತ್ತು. ಹಲವಾರು ಸಾಂಪ್ರದಾಯಿಕ ಕಸುಬುಗಳು ಈಗಿರುವ ತಲೆಮಾರಿಗೆ ಕೊನೆಯಾಗುವ ಸಾಧ್ಯತೆಗಳೇ ಹೆಚ್ಚು. ನೇಕಾರರ ಮಕ್ಕಳು ನೇಯ್ಗೆಯಲ್ಲಿ ತೊಡಗುತ್ತಿಲ್ಲ.

# ನಿಮ್ಮೊಳಗೂ ಅವನಿರಬಹುದೇ ?

ತಲೆಮಾಂಸವೋ ನೂಡಲ್ಸೋ ಪಿಜ್ಜಾನೋ ಐಸ್‌ಕೋಕೋ
ಟೇಬಲ್ಲಿಗೆ ಬಂದಾಗೆಲ್ಲ ದೊಡ್ಡಿಯ ನೆನಪಾಗುತ್ತದೆ
ಅವಳೀಗ ಏನು ತಿನ್ನುತ್ತಿರಬಹುದು ?
ಛೇ ! ಅವಳಲ್ಲಿ ಊಗುದುರಿದ ಬರಲುಗೈಯಲ್ಲಿ
ಸೀಕಲು ಮುದ್ದೆ ಗೊಡ್ಡುಗಾರಗಳಲ್ಲಿ ಏಗುವಾಗ
ನಾನಿಲ್ಲಿ ಹೇಗೆ ನೂಡಲ್ಸ್ ತಿನ್ನಲಿ ?
ಅವಳ ಕೈತುತ್ತು ತಿಂದ ಕೂಸು ನಾನು.

ಥಿಯೇಟರಲಿ ಕಣ್ಣಲ್ಲೆ ನುಣು ಸೊಂಟ ಬಳಸುವಾಗ
ಹೋಟೆಲ ಗಾನ ನಾಟ್ಯಗಳಲಿ ನಾಟಿಕೊಂಡಾಗ ಅವ್ವನ ನೆನಪಾಗುತ್ತದೆ
ಅವಳೀಗ ಏನು ಮಾಡುತ್ತಿರಬಹುದು ?
ಛೆ ! ಅವಳಲ್ಲಿ ಹರಿದ ಗಂಡನ ಚಡ್ಡಿಗೆ ತೇಪೆ ಹಾಕುತ್ತ
ತೂತು ಗುಡಿಸಲಲಿ ನೀರ ಬೋಸುತ್ತ ಒಬ್ಬೊಂಟಿ ಏಗುವಾಗ
ನಾನಿಲ್ಲಿ ಹೇಗೆ ಸೆಟ್ ದೋಸೆ ತಿನ್ನಲಿ ?
ಅವಳ ತಗ್ಗುನುಗ್ಗಾದ ಚಿಲವಾರ ಚೊಂಬುಮುಖ
ಎದುರು ಬಂದಾಗೆಲ್ಲ ಏನೊಂದೂ ರುಚಿಸುವುದಿಲ್ಲ ಇಲ್ಲಿ
ಅವಳ ಕಣ್ಣೀರು ಉಪವಾಸಗಳ ಕೂಸು ನಾನು.

ಕ್ಲಾಸಿಗೆ ಚಕ್ಕರ್ ಹಾಕುವಾಗ ಐಸ್‌ಕ್ರೀಮು ತಿನ್ನುವಾಗ
ಗ್ಲಾಸು ತುಟಿಗೆ ಇಡುವಾಗೆಲ್ಲ ಅಕ್ಕನ ಕೂಲಿನಾಲಿ ಗೇಮೆಯೂ
ಅಣ್ಣನ ದೇಸಾಂತರ ಪಾಡೂ ಎದುರು ಬಂದು ನಿಲ್ಲುತ್ತವೆ.
ನಾನು ನನ್ನನ್ನೆ ಕೇಳಿಕೊಳ್ಳುತ್ತೇನೆ
ನಾನೀಗ ಮಾಡುತ್ತಿರುವುದು ಸರಿಯೋ ?



ಹೌದು ನನ್ನೊಳಗೊಬ್ಬ ಸೈನಿಕನಿದ್ದಾನೆ.
ಅವನು ಭಾರೀ ಆಕಾರ ಬೆಳೆಯುತ್ತಿದ್ದಾನೆ
ತಲೆಮಾಸಿದ ಅಡ್ನಾಡಿ ಗಳಿಗೆಗಳಲ್ಲಿ ಧುತ್ತನೆ ಒಳಗಿಂದಲೆ ಪ್ರತ್ಯಕ್ಷನಾಗುತ್ತಾನೆ
ನೀನೀಗ ಮಾಡುತ್ತಿರುವುದು ಸರಿಯೇನಾ ಎಂದು ಗುಟುರು ಹಾಕುತ್ತಾನೆ.
ಮನಕೆ ರೆಕ್ಕೆಯ ಕಟ್ಟು ತೋಳುಗಳ ಆಕಾಶದಗಲ ಬೆಳೆಸು... ಗೀಗೀ ಗಾಗಾ
ಆಡುತ್ತ ಹಾಡುತ್ತ ತಲೆದೂಗಿಸುತ್ತಾನೆ
ಅವನು ಬೆಳೆದು ಬೆಳೆದು ನಾನೇ ಒಡೆದುಹೋದೇನೆಂದು
ನಾನೀಗ ಅವನಿಗಿಂತ ಬೃಹದಾಕಾರ ಬೆಳೆಯಬೇಕೆಂದು
ತೊಡಗಿದ್ದೇನೆ
ನೀವು ಯಾರ ಕೂಸು ! ನಿಮ್ಮೊಳಗೂ ಅವನಿರಬಹುದೇ ?

**ಬೇಗೂರು ರಾಮಲಿಂಗಪ್ಪ**, [illegible], ಬೆಂಗಳೂರು - [illegible]

ಕುಟುಂಬದ ಕಸುಬಿಗೆ ಅಪ್ಪ ಹಾಕಿದ ಆಲದ ಮರ ಎಂದು ಅಂಟಿಕೊಳ್ಳುವ ಗೀಳು ಇವರಿಗಿಲ್ಲ. ಇದಕ್ಕೆ ಇರುವ ಒಂದೇ ಕಾರಣ, ಈ ಕಸುಬುಗಳು ಮತ್ತು ಇವುಗಳ ಉತ್ಪನ್ನಗಳು ಆಧುನಿಕ ಮಾರುಕಟ್ಟೆಯ ಉತ್ಪನ್ನಗಳೆದುರು ಕಳಪೆಯಾಗಿ ಕಾಣುವುದು. ಯಾವುದಕ್ಕೆ ಮಾರುಕಟ್ಟೆ ಇರುವುದಿಲ್ಲವೋ ಅದಕ್ಕೆ ಅಸ್ತಿತ್ವ ಸಿಗಲಾರದೆಂಬುದು ಸ್ಪಷ್ಟ. ಹೀಗಾಗಿ ಗ್ರಾಮೀಣ ಪ್ರದೇಶದಿಂದ ಉದ್ಯೋಗ ಅರಸಿ ನಗರ-ಪಟ್ಟಣಗಳಿಗೆ ವಲಸೆ ಹೋಗುವವರ ಸಂಖ್ಯೆ ಅತಿ ಹೆಚ್ಚಾಗಿದೆ. ಕಳೆದ ಒಂದೂವರೆ ದಶಕದಲ್ಲಿ ಬೆಂಗಳೂರು ಎಷ್ಟು ಬೆಳೆದಿದೆಯೋ ಅಷ್ಟೇ ಕೊಳೆಗೇರಿಗಳೂ ಬೆಳೆದಿವೆ. ಕೊಳೆಗೇರಿಗಳಲ್ಲಿ ಮತ್ತು ಹೊರವಲಯಗಳಲ್ಲಿ ವಾಸಿಸುವ ಬಹಳಷ್ಟು ಜನ ಇಂಥ ವಲಸಿಗರೇ ಆಗಿದ್ದಾರೆ. ಪಂಚಾಯತ್‌ರಾಜ್ ವ್ಯವಸ್ಥೆಯ ಮೂಲಕ ರಾಜಕೀಯ ವಿಕೇಂದ್ರೀಕರಣವನ್ನು ವೈಭವೀಕರಿಸಿ ಜಾರಿಗೊಳಿಸುತ್ತಿರುವ ನಾವು, ಆರ್ಥಿಕ ಮತ್ತು ಕೈಗಾರಿಕಾ ವಿಕೇಂದ್ರೀಕರಣದ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿರುವುದು ಒಂದು ದೊಡ್ಡ ವಿಪರ್ಯಾಸ. ವಿಕೇಂದ್ರೀಕರಣವು ಸಮಾನವೂ ಮತ್ತು ಸಮಗ್ರವೂ ಆಗಿದ್ದರೆ ಅದರ ಸಹಜ ಪ್ರತಿಫಲಗಳು ಸಹಜವಾಗಿಯೇ ಎಲ್ಲರಿಗೂ ಲಭ್ಯವಾಗುತ್ತವೆ. ಇಲ್ಲವಾದರೆ ಕೆಲವೇ ಕೆಲವರಿಗೆ ಸುಖ, ಉಳಿದ ಬಹುಸಂಖ್ಯಾತ ಸಾಮಾನ್ಯ ವರ್ಗಕ್ಕೆ ದುಃಸ್ಥಿತಿ.



ಗುಡಿಕೈಗಾರಿಕೆಗಳ ಅಥವಾ ಯಾವುದೇ ಕಸುಬುಗಳ ಇನ್ನೊಂದು ಪ್ರಾಮುಖ್ಯತೆಯೆಂದರೆ, ಅವು ಒಂದು ಸಂಸ್ಕೃತಿಯ ಆಕರ ಮತ್ತು ವಾಹಕಗಳೆಂಬುದು. ಉದ್ಯೋಗ ವ್ಯವಸ್ಥೆಯನ್ನನುಸರಿಸಿಯೇ ಸಾಹಿತ್ಯ-ಸಂಸ್ಕೃತಿಗಳು ರೂಪುಗೊಂಡಿವೆ. ಜಾನಪದ ಸಾಹಿತ್ಯ ಮತ್ತು ಸಂಸ್ಕೃತಿ ಒಳಗೊಂಡಂತೆ ಎಲ್ಲ ವಿಭಾಗಗಳಲ್ಲೂ, ಪ್ರಕಾರಗಳಲ್ಲೂ ಇದನ್ನು ಕಾಣಬಹುದು. ಒಂದು ಉದ್ಯೋಗ ವ್ಯವಸ್ಥೆ, ವಿಶೇಷವಾಗಿ ಗ್ರಾಮೀಣ ಕೈಗಾರಿಕೆಗಳು ನಶಿಸುವುದೆಂದರೆ ಅದಕ್ಕೆ ಪೂರಕವಾದ ಉಪ-ಸಂಸ್ಕೃತಿಗಳ ನಾಶ ಎಂದೇ ಹೇಳಬಹುದು. ವಿಶೇಷವಾಗಿ ಭಾರತದ ಸಂದರ್ಭದಲ್ಲಂತೂ ಜಾತಿ ಮತ್ತು ಕಸುಬು ಒಂದಕ್ಕೊಂದು ಬೆಸೆದುಕೊಂಡಿವೆ.

**ಸಮಸ್ಯೆಗಳು**

ಸಾಂಪ್ರದಾಯಿಕ ಸರಕು-ಸೇವೆಗಳಿಗೆ ಆಧುನಿಕ ಅಥವಾ ಅಸಾಂಪ್ರದಾಯಿಕ ಉತ್ಪನ್ನಗಳೇ ಅಪಾಯದ ಅಂಶಗಳು. ನಾಗರಿಕತೆ ಮತ್ತು ಮುಕ್ತ ಮಾರುಕಟ್ಟೆ ಕಾರ್ಯಾಚರಣೆಗಳು ಹೊರಗಿನಿಂದ ತಂದೊಡ್ಡಿದ್ದ ಅನುಭೋಗದ ಆಕರ್ಷಕ ಆಮಿಷಗಳನ್ನು ಎದುರಿಸಿ ನಿಲ್ಲುವ ಮಟ್ಟಿಗೆ ನಮ್ಮ ಸಾಂಪ್ರದಾಯಿಕ ಗುಡಿಕೈಗಾರಿಕಾ ವ್ಯವಸ್ಥೆ ಸಿದ್ಧವಿಲ್ಲದಿದ್ದುದು ಮತ್ತು ಅದು ಒಡ್ಡುವ ಸವಾಲಿಗೆ ತಕ್ಕಂತೆ ಸ್ಥಿತ್ಯಂತರ ಹೊಂದದಿದ್ದುದೇ ಅವುಗಳಿಗೆ ಪ್ರಮುಖ ಸಮಸ್ಯೆಯಾಗಿದೆ. ಈ ಅಪಾಯವನ್ನು ಗುರುತಿಸದೆ ನಮ್ಮ ದೇಶ ಹೊರಗಿನ ಮಾರುಕಟ್ಟೆಗೆ ಮುಕ್ತವಾಗಿ ಬಾಗಿಲು ತೆರೆಯಿತು. ಚೀನಾದೇಶ ಹಾಗೆ ಮಾಡಲಿಲ್ಲ. ಜಾಗತಿಕ ವ್ಯಾಪಾರ ಸಂಸ್ಥೆಯನ್ನು ಬಹಳ ತಡವಾಗಿ ಪ್ರವೇಶಿಸಿ, ತನ್ನ ಗುಡಿ ಕೈಗಾರಿಕೆ ಮತ್ತು ಉದ್ಯೋಗ ವ್ಯವಸ್ಥೆಯನ್ನು ಮೊದಲು ಭದ್ರಪಡಿಸಿಕೊಂಡು, ಬರೀ ಮಾರುಕಟ್ಟೆಗಷ್ಟೇ ಬಾಗಿಲು ತೆರೆಯುವ ವಿವೇಚನೆ ತೋರಿತು. ನಾವೇಕೆ ಇದನ್ನು ಮಾಡುತ್ತಿಲ್ಲ?

ಚಿತ್ರದುರ್ಗ ಜಿಲ್ಲೆಯ ಗುಡಿಕೈಗಾರಿಕೆಗಳ ಸ್ಥಿತಿಯೂ ಹೀಗೆಯೇ. ಸಾವಿರಾರು ಕುಟುಂಬಗಳು ಖಾದಿ ಬಟ್ಟೆ, ರೇಷ್ಮೆ ವಸ್ತ್ರ ಮತ್ತು ಉಣ್ಣೆ ಕಂಬಳಿಗಳ ನೇಯ್ಗೆಯಲ್ಲಿ ತೊಡಗಿಕೊಂಡಿದ್ದವು. ವಸ್ತುವಿನ್ಯಾಸದಲ್ಲಿ ಏನೇ ಬದಲಾವಣೆ ತಂದಿದ್ದರೂ ಯಂತ್ರ ಬಳಕೆಯಿಂದ ತಯಾರಾದ ಸರಕುಗಳಷ್ಟು ನಯ ನಾಜೂಕುಗಳು ಅವುಗಳಲ್ಲಿ ಬರಲಾರವು. ಅದನ್ನು ನಿರೀಕ್ಷಿಸುವುದು ಕೂಡ ಸರಿಯಲ್ಲ. ಆದರೆ ಮಾರುಕಟ್ಟೆಯ ಪೈಪೋಟಿ ಎದುರಿಸಲೇಬೇಕು. ಅನುಭೋಗಿಗಳು ಬಯಸಿದ ಸರಕುಗಳನ್ನು ಅವರು ಬಯಸಿದ ಗುಣಮಟ್ಟದಲ್ಲಿ ಲಾಭದಾಯಕವಾಗಿ ಹಾಗೂ ಅಗ್ಗವೆನಿಸುವ ಬೆಲೆಗೆ ಕೊಡುವುದು ಅತ್ಯಂತ ಕಠಿಣವಾದ ಸವಾಲು. ಹಾಗಾಗಿ ಇತರ ಉದ್ಯೋಗಗಳಲ್ಲಿ ತೊಡಗಿಕೊಳ್ಳಲು ಅಥವಾ ಕಲಿಯಲು ಸಾಧ್ಯವೇ ಇಲ್ಲ ಎನ್ನುವವರು ಮಾತ್ರ ಈ ಕಸುಬುಗಳಲ್ಲಿ ಮುಂದುವರೆದಿದ್ದಾರೆ.



ಗುಣಮಟ್ಟ ಕಾಯ್ದುಕೊಂಡು ಕಡಿಮೆ ಬೆಲೆಗೆ ಸರಕುಗಳನ್ನು ನೀಡುವ ವಿಧಾನಗಳನ್ನು ಅನ್ವೇಷಿಸಿಕೊಳ್ಳುವುದು ಆರ್ಥಿಕ ದುಃಸ್ಥಿತಿಯಲ್ಲಿರುವ ಈ ಕಸುಬುದಾರರಿಗೆ ಸಾಧ್ಯವೇ ಆಗಲಿಲ್ಲ. ಅಂತಹ ಸಹಾಯವನ್ನು ದೊರಕಿಸಿಕೊಡುವ ಕಾಳಜಿಯೂ ಸರ್ಕಾರಕ್ಕೆ ಇರಲಿಲ್ಲ. ಸಿಕ್ಕ ನೆರವು ಏನಿದ್ದರೂ, ದೂರದೃಷ್ಟಿಯಿರದ ತಾತ್ಕಾಲಿಕ ಪರಿಹಾರರೂಪದ ಧನಸಹಾಯ ಅಷ್ಟೆ. ಉತ್ಪಾದನೆಯ ಗುಣಮಟ್ಟ ಕಡಿಮೆ ಇದ್ದರೂ ಮಾರಾಟ ಕಲೆ ಮತ್ತು ತಂತ್ರಗಾರಿಕೆಗಳು ಅದನ್ನು ಮುಚ್ಚಿಹಾಕುವಷ್ಟರಮಟ್ಟಿಗೆ ಇಂದು ಬೆಳೆದಿದೆ. ಅಂಥ ಮಾರುಕಟ್ಟೆ ಕೌಶಲ್ಯಗಳು ಈ ವಲಯಕ್ಕೆ ಲಭ್ಯವಾಗಲಿಲ್ಲ. ಇವತ್ತಿಗೂ ಕೂಡ ಇಂಥ ಮಾರುಕಟ್ಟೆಗಳಿಗೆ ಸ್ಥಿರ ಸ್ಥಳವಿಲ್ಲ, ವಿಶೇಷ ವ್ಯವಸ್ಥೆಗಳಿಲ್ಲ. ಸರ್ಕಾರ ನೀಡಿದ ಆರ್ಥಿಕ ಸೌಲಭ್ಯಗಳು ಮಧ್ಯವರ್ತಿಗಳ ಪಾಲಾಗಿವೆ. ನೇಕಾರರ ವಾಸ್ತವ ಸಂಗತಿಗಳಿಗೂ ಮತ್ತು ಸರ್ಕಾರದ ಇಲಾಖೆಗಳ ಕಡತದ ಅಂಕಿ-ಅಂಶಗಳಿಗೂ ಇರುವ ನಡುವಿನ ಅಂತರ ಗಮನಿಸಿದರೆ ಸಾಕು ಈ ಸತ್ಯ ಗೋಚರವಾಗುತ್ತದೆ. ಹೊಸದುರ್ಗ, ಹೊಳಲ್ಕೆರೆ ಮತ್ತು ಹಿರಿಯೂರು ತಾಲ್ಲೂಕುಗಳಲ್ಲಿ ತೆಂಗಿನ ತೋಟ ಹೆಚ್ಚಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ನಾರು ಉದ್ಯಮ ಮತ್ತು ಕೊಬ್ಬರಿ ಎಣ್ಣೆ ಉದ್ಯಮಗಳಿವೆ. ಇಲ್ಲಿಯೂ ಕಸುಬುಗಾರಿಕೆಗೆ ಸಂಬಂಧಿಸಿದ ಕೌಶಲ್ಯ ಮತ್ತು ಮಾರಾಟದ ಸಮಸ್ಯೆಗಳಿವೆ.

ಇಂದು ಎಲ್ಲ ಕಡೆ ಪ್ರಮುಖ ಗುಡಿ ಕೈಗಾರಿಕೆಗಳಿಗೆ ಗುಣಮಟ್ಟದ ಕಚ್ಚಾವಸ್ತುವಿನ ಕೊರತೆ ಎದ್ದುಕಾಣುತ್ತಿದೆ. ಕಂಬಳಿ ನೇಕಾರರು ಕುರಿ ಉಣ್ಣೆಗಾಗಿ ತಮಿಳುನಾಡಿನ ಜಿಲ್ಲೆಗಳನ್ನು ಅವಲಂಬಿಸಬೇಕಾಗಿದೆ. ಹತ್ತಿ ಬೆಳೆ ವಿಧಾನವೇ ವಿವಿಧ ಮಾರ್ಪಾಟು ಹೊಂದಿದ್ದು ಅದರ ಉತ್ಪಾದನೆ ಕಡಿಮೆಯಾಗಿದೆ. ರೇಷ್ಮೆಗೂಡುಗಳಿಂದ ನೂಲು ತೆಗೆದುಕೊಡುವ ವ್ಯವಸ್ಥೆ ಸಮರ್ಪಕವಾಗಿಲ್ಲ. ಉತ್ಪನ್ನಗಳಿಗೆ ಬಣ್ಣ ಹಾಕಿ ಆಕರ್ಷಕವಾಗಿ ವಿನ್ಯಾಸಗೊಳಿಸುವಲ್ಲಿ ಆಗಿರುವ ಅನ್ವೇಷಣೆಗಳೂ ಕೂಡ ಕಸುಬುದಾರರಿಗೆ ತಲುಪಿರುವುದು ಬಹಳ ಕಡಿಮೆ. ಬಹು ಮುಖ್ಯವಾದ ಸಮಸ್ಯೆ ಎಂದರೆ ನಮ್ಮದೇ ಕೈಗಾರಿಕೆಗಳ, ನಮ್ಮದೇ ಸ್ವಚ್ಛ ಪರಿಸರದಲ್ಲಿ ತಯಾರಾದ, ಮಾಲಿನ್ಯ ರಹಿತ ಪರಿಸರಸ್ನೇಹಿ ಸರಕುಗಳ ಬಳಕೆಯ ಮಹತ್ವವನ್ನು ನಮ್ಮ ಗ್ರಾಹಕರು ಅರ್ಥಮಾಡಿಕೊಳ್ಳದಿರುವುದು ಮತ್ತು ಯುವಜನಾಂಗಕ್ಕೆ, ಮಕ್ಕಳಿಗೆ ಅದನ್ನು ಮನದಟ್ಟುಮಾಡಿಕೊಡದಿರುವುದು. ಇಂಥ ತಿಳುವಳಿಕೆಯು ಅನೌಪಚಾರಿಕ ಶಿಕ್ಷಣವಾಗಿ ಇಂದು ಯಾರಿಗೂ ಲಭ್ಯವಾಗುತ್ತಿಲ್ಲ. ಇನ್ನೂ ದುರಂತವೆಂದರೆ, ಸ್ವತಃ ಉತ್ಪಾದಕರೇ ಅವುಗಳನ್ನು ತಮ್ಮದೇ ಮನೆಗಳಲ್ಲಿ ಎಲ್ಲರೂ ಬಳಕೆ ಮಾಡುತ್ತಿಲ್ಲ. ಖಾದಿ ಬಟ್ಟೆ ನೇಯುವವರ ಮೈಮೇಲೆ ಪಾಲಿಯೆಸ್ಟರ್ ಬಟ್ಟೆ, ಕಂಬಳಿ ನೇಯುವವರ ಮನೆಯಲ್ಲಿ ಯಂತ್ರಗಳಿಂದ ತಯಾರಾದ ರಗ್ಗು, ಹಾಲು ಮಾರುವವರ ಮನೆಯಲ್ಲಿ ಅವುಗಳ ಉತ್ಪನ್ನಗಳ ಅನುಭೋಗದ ನಿರಾಕರಣೆ, ಇಂಥ ಹಲವು ವಿಪರ್ಯಾಸಗಳನ್ನು ಕಾಣಬಹುದು. ಅಂದಮಾತ್ರಕ್ಕೆ ರೇಷ್ಮೆ ಸೀರೆ ನೇಯ್ಗೆಯಲ್ಲಿ ತೊಡಗಿರುವವರೆಲ್ಲರೂ ಅವುಗಳನ್ನೇ ಬಳಸಬೇಕೆಂದಲ್ಲ. ನಾವು ಉತ್ಪಾದಿಸುವುದು ಮಾರುಕಟ್ಟೆಗಷ್ಟೇ ಸೀಮಿತವಾಗಿರದೆ ನಮ್ಮ ಬದುಕಿನಲ್ಲೂ ಬಳಕೆಯಾಗಬೇಕಿದೆ.

ಮಾರುಕಟ್ಟೆ ಮತ್ತು ಬಳಕೆಯ ವೈವಿಧ್ಯತೆಗಳಿಗನುಗುಣವಾಗಿ ಸರಕು-ಸೇವೆಗಳನ್ನು ಮಾರ್ಪಡಿಸುವ ತಂತ್ರಜ್ಞಾನದ ಅನ್ವೇಷಣೆ ಮತ್ತು ಅದಕ್ಕೆ ತಕ್ಕಷ್ಟು ಬಂಡವಾಳವನ್ನು ಒದಗಿಸುವುದು ಆರ್ಥಿಕ ದುಃಸ್ಥಿತಿಯಲ್ಲಿರುವ ಕಸುಬುದಾರರಿಗೆ ಸಾಧ್ಯವಾಗಿಲ್ಲ. ಆಧುನಿಕ ಸರಕು-ಸೇವೆಗಳ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿರುವವರ ಸ್ಥಿತಿಯೂ ಇದೇ ಆಗಿದೆ. ನಲ್ಲಿ ಕೆಲಸದವರನ್ನೋ, ಟಿ. ವಿ. ಮೆಕ್ಯಾನಿಕ್‌ಗಳನ್ನೋ, ಎಲೆಕ್ಟ್ರಿಕ್ ಕೆಲಸದಲ್ಲಿ ತೊಡಗಿರುವವರನ್ನೋ, ಮೋಟಾರು ವಾಹನಗಳ ರಿಪೇರಿಯಲ್ಲಿ ತೊಡಗಿರುವವರನ್ನೋ ಸುಮ್ಮನೆ ಒಮ್ಮೆ ಮಾತನಾಡಿಸಿ ನೋಡಿ. ಅಲ್ಲಿ ಬಹಳಷ್ಟು ಜನ ಅವರಷ್ಟಕ್ಕೇ ಅವರು ಕಲಿತವರಲ್ಲದೆ ಅವರಿಗೆ ತರಬೇತಿಗಾಗಿ, ಮಾಹಿತಿಗಾಗಿ, ಪ್ರೇರಣೆಗಾಗಿ ಯಾವ ಔಪಚಾರಿಕ ವ್ಯವಸ್ಥೆಯೂ ಇಲ್ಲ. ಆ ಹೊತ್ತಿನ ತುತ್ತಿನ ಚೀಲ ತುಂಬುವುದೊಂದೇ ಅವರ

ಪ್ರಮುಖ ಪ್ರೇರಣೆ! ಹೀಗಿರುವಾಗ ಗುಣಮಟ್ಟ ಉನ್ನತೀಕರಿಸಿ ಮಾರುಕಟ್ಟೆ ಪೈಪೋಟಿ ಎದುರಿಸಿ, ಸಾಧಾರಣ ನಾಗರಿಕ ಸೌಲಭ್ಯಗಳನ್ನು ಅನುಭವಿಸುವುದು ಸಾಧ್ಯವೇ ?

**ಪ್ರಗತಿಯ ಕ್ರಮಗಳು**

ಗುಡಿ ಕೈಗಾರಿಕೆಗಳ ಪುನರುಜ್ಜೀವನ ಮತ್ತು ಪ್ರಗತಿಗೆ ಎರಡು ಮುಖ್ಯ ಮಾರ್ಗಗಳಿವೆ. ಒಂದು: ಅನುಭೋಗಿ ಮತ್ತು ಮಾರುಕಟ್ಟೆಯ ಅಗತ್ಯಗಳನ್ನು ಅಧ್ಯಯನ ಮಾಡಿ, ಸತತವಾಗಿ ಬದಲಾಗುವ ಅಭಿರುಚಿಗೆ ತಕ್ಕಂತೆ ವಸ್ತುವಿನ್ಯಾಸದಲ್ಲಿ ಮಾರ್ಪಾಡು ಮಾಡುವುದು; ಹಾಗೂ ತಂತ್ರಜ್ಞಾನದ ಆಧುನೀಕರಣದಿಂದ ಹೆಚ್ಚಿನ ಉದ್ಯಮಗಳ ನಿರ್ವಹಣಾ ತಂತ್ರಗಾರಿಕೆಯಿಂದ ಸರಕಿನ ಉತ್ಪಾದನಾ ಬೆಲೆಯನ್ನು ಕಡಿಮೆಗೊಳಿಸುತ್ತಾ ಲಾಭವನ್ನು ಹೆಚ್ಚಿಸಿಕೊಳ್ಳುವುದು. ಎರಡು: ಆಧುನಿಕ ಮಾರಾಟ ತಂತ್ರಗಳನ್ನು ಬಳಸಿ, ಅನುಭೋಗಿಗಳಿಗೆ ಗುಡಿ ಕೈಗಾರಿಕಾ ಉತ್ಪನ್ನಗಳ ಒಳಿತನ್ನು ಮನವರಿಕೆ ಮಾಡಿಕೊಡುವ ಮೂಲಕ ಅವರಲ್ಲಿ ಬೇಡಿಕೆಗಳನ್ನು ಸೃಷ್ಟಿಸುವುದು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ, ಬೃಹತ್ ಪ್ರಮಾಣದ ಉತ್ಪಾದನೆಯಿಂದಾಗಿ ಉಗ್ರಾಣಗಳಲ್ಲಿ ಸರಕುಗಳ ಪ್ರಮಾಣ ಹೆಚ್ಚಿದಂತೆಲ್ಲಾ ಇಂಥ ಜಾಹಿರಾತು ತಂತ್ರಗಳ ಮೂಲಕ ಗ್ರಾಹಕರಲ್ಲಿ ಹೊಸ ಬೇಡಿಕೆಗಳನ್ನು ಸೃಷ್ಟಿಸುವುದರಲ್ಲಿ ಯಶಸ್ವಿಯಾದದ್ದನ್ನು ಮಾದರಿಯಾಗಿಟ್ಟುಕೊಳ್ಳಬೇಕು. ಬೇಡಿಕೆಯಿದ್ದಾಗ ಪರಿಣಾಮಕಾರಿಯಾಗಿ ಮಾರಾಟ ಮಾಡಬೇಕು; ಇಲ್ಲದಿದ್ದಾಗ ಹೊಸ ಬೇಡಿಕೆಗಳನ್ನು ಸೃಷ್ಟಿಸಬೇಕು. ಇಂದು ಪರಿಸರ ಮಾಲಿನ್ಯದ ಬಗ್ಗೆ ಮತ್ತು ಆರೋಗ್ಯದ ಬಗ್ಗೆ ಜನರಲ್ಲಿ ಜಾಗೃತಿ ಮೂಡುತ್ತಿದೆ. ಇದೇ ಅವಕಾಶವನ್ನು ಬಳಸಿಕೊಂಡು ಗುಡಿ ಕೈಗಾರಿಕಾ ಉತ್ಪನ್ನಗಳ ಪರಿಸರಸ್ನೇಹಿ ಗುಣಗಳ ಬಗ್ಗೆ, ಸಹಜ ಆರೋಗ್ಯಕ್ಕೆ ಪೂರಕವಾಗುವುದರ ಬಗ್ಗೆ ಗ್ರಾಹಕರಿಗೆ ಮಾಹಿತಿ ನೀಡಿ, ಅವರಲ್ಲಿ ಕೊಳ್ಳುವ ಮತ್ತು ಬಳಸುವ ಇಚ್ಛೆ ಮೂಡುವಂತೆ ಪ್ರೇರೇಪಿಸುವ ಕ್ರಮಗಳನ್ನು ಅನ್ವೇಷಿಸಿಕೊಡಬೇಕು.

ಈ ನಿಟ್ಟಿನಲ್ಲಿ ಸರ್ಕಾರ ರೂಪಿಸಿದ್ದ ಹಲವು ಯೋಜನೆಗಳಲ್ಲಿ ವಿಶ್ವ ಯೋಜನೆ ಮತ್ತು ಟ್ರೆಸಂ ತುಂಬಾ ಆಶಾದಾಯಕ ಹೆಜ್ಜೆಗಳಾಗಿದ್ದವು. ಇಚ್ಛಾಶಕ್ತಿಯ ಕೊರತೆಯಿಂದಾಗಿ ಅವುಗಳು ಸರಿಯಾಗಿ ಜಾರಿಯಾಗಲಿಲ್ಲ. ಇದೇ ಸರಕುಗಳನ್ನು ಉದಾರೀಕರಣ ನೀತಿಯನ್ವಯ ದೊಡ್ಡ ಕೈಗಾರಿಕೆಗಳು ಉತ್ಪಾದಿಸಲು ಅವಕಾಶ ನೀಡಿದ್ದು ಮಾತ್ರ ಗುಡಿ ಕೈಗಾರಿಕೆಗಳ ಮಾರುಕಟ್ಟೆಯ ಅವಕಾಶವನ್ನೇ ಕಿತ್ತುಕೊಂಡಂತಾಯಿತು. ಇವುಗಳಿಗಿದ್ದ ರಕ್ಷಣೆ ಜಾಗತೀಕರಣ ನೀತಿಯ ಉದಾರೀಕರಣ ಕ್ರಮದಿಂದಾಗಿ ಇಲ್ಲದಂತಾಯಿತು. ಈಗಾಗಲೇ ಹೇಳಿದಂತೆ ಉದ್ಯೋಗ ವ್ಯವಸ್ಥೆಯನ್ನು ಉಳಿಸಿಕೊಳ್ಳಬೇಕಿದ್ದರೆ ಸರ್ಕಾರದ ಕ್ರಮಗಳ ಇಂಥ ರಕ್ಷಾ ಕವಚ ಈ ವಲಯಕ್ಕೆ ಬೇಕಿತ್ತು. ಮಾರುಕಟ್ಟೆಯಲ್ಲಿ ಸರಕುಗಳಿಗೆ ಬೆಂಬಲ ಬೆಲೆ ನೀಡುವುದು ನಮ್ಮ ಆಯ-ವ್ಯಯದ ಕೊರತೆಯನ್ನು ಹೆಚ್ಚಿಸಬಲ್ಲದೇ ಹೊರತು ಸಣ್ಣ ಮತ್ತು ಅತಿಸಣ್ಣ ಕೈಗಾರಿಕಾ ವಲಯಕ್ಕೆ ಸುಸ್ಥಿರ ನೆರವು ಆಗಲಾರದು. ಈ ನಿಟ್ಟಿನಲ್ಲಿ ನೀಡಲಾದ ಬೆಂಬಲ ಬೆಲೆ, ಹಣಕಾಸಿನ ನೆರವು ಮಧ್ಯವರ್ತಿಗಳ ಪಾಲಾಗಿರುವುದನ್ನು ಎಲ್ಲೆಡೆ ಕಾಣುತ್ತೇವೆ.


**ಅಕ್ಟೋಬರ್ 25ರಂದು ಅನಾವರಣಗೊಳ್ಳಲಿರುವ**
**ನವಕರ್ನಾಟಕ ಪ್ರಕಾಶನದ ಐದು ಕೃತಿಗಳು**
**ನಯನ ಸಭಾಂಗಣ : : ಬೆಂಗಳೂರು : : ಬೆಳಗ್ಗೆ 10 ಗಂಟೆಗೆ**

**ಬಹುರೂಪಿ ಗಾಂಧಿ**
*ಅನು ಬಂದೋಪಾಧ್ಯಾಯ; ಅನು : ಎಚ್. ಎನ್. ಗೀತಾ*

**ಆಹಾ ! ಎಷ್ಟೊಂದು ಚಟುವಟಿಕೆಗಳು**
*ಅರವಿಂದ ಗುಪ್ತ ಅನು : ವಿ. ಎಸ್. ಎಸ್. ಶಾಸ್ತ್ರಿ*

**ಮಾಡಿ ಕಲಿ**
*ಅರವಿಂದ ಗುಪ್ತ ಅನು : ವಿ. ಎಸ್. ಎಸ್. ಶಾಸ್ತ್ರಿ*

**ಅಂತರರಾಷ್ಟ್ರೀಯ ಖಗೋಳ ವಿಜ್ಞಾನ ವರ್ಷ-2009 ಸಂದರ್ಭಕ್ಕಾಗಿ**

**ಖಗೋಳ ವಿಜ್ಞಾನದ ಕಥೆ**
*ಉದಯ್ ಪಾಟೀಲ್ ಅನು : ಡಾ|| ಪಿ. ಆರ್. ವಿಶ್ವನಾಥ್*

**ಆಗಸದ ಅಲೆಮಾರಿಗಳು**
*ಡಾ|| ಬಿ. ಎಸ್. ಶೈಲಜಾ*


ಹೆಚ್ಚು ಉದ್ಯೋಗಾವಕಾಶ ನೀಡುವ ಪ್ರಾಥಮಿಕ ವಲಯಗಳಿಗೆ ನೆರವು, ಉತ್ತೇಜನಗಳ ಪ್ರಚಾರ ಸಿಕ್ಕಿದೆಯೇ ಹೊರತು ಅವು ಕಾಳಜಿಯಿಂದ ಕಾರ್ಯಗತವಾಗಲಿಲ್ಲ. ಉತ್ಪಾದನೆ, ಮಾರಾಟ ಮತ್ತು ಅನುಭೋಗಗಳ ವೈವಿಧ್ಯತೆ ಮತ್ತು ಆಧುನೀಕರಣಗೊಳಿಸುವ ಬಗ್ಗೆ ಯಶಸ್ವೀ ಸಂಶೋಧನೆಗಳೇ ನಡೆಯುತ್ತಿಲ್ಲ. ಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ ಹೇಳಿದಂತೆ, ''ಬಹುತೇಕವಾಗಿ ನಮ್ಮ ಸಂಶೋಧಕರು ಮತ್ತು ಸಂಶೋಧನೆಗಳು ಬಂಡವಾಳಶಾಹಿ ವ್ಯವಸ್ಥೆಯ ಆರ್ಥಿಕ ನೆರವಿನ ಹಂಗಿನಲ್ಲಿವೆ. ಹಾಗಾಗಿ ಅದರ ಫಲಗಳು ಬೃಹತ್ ಬಂಡವಾಳದಾರರ ಹಿತಾಸಕ್ತಿಗನುಗುಣವಾಗಿವೆಯೇ ಹೊರತು ಸಾಮಾಜಿಕ ಹೊಣೆಗಾರಿಕೆಯಿಂದ ಕೂಡಿಲ್ಲ''. ಈ ನಿಟ್ಟಿನಲ್ಲಿ ಸರ್ಕಾರದ ಕ್ರಮ ಗುಡಿ ಕೈಗಾರಿಕೆಗಳಿಗೆ, ಬೌದ್ಧಿಕ ಆಸ್ತಿಯ ಸಬಲೀಕರಣಕ್ಕೆ ಬೆಂಬಲ ನೀಡುವುದಾಗಬೇಕು. ಡಾ|| ವರ್ಗೀಸ್ ಕುರಿಯನ್ ಅವರು ಗುಜರಾತಿನ ಆನಂದ್ ಹಾಲು ಉತ್ಪನ್ನಗಳ ಸಂಸ್ಥೆಯನ್ನು ಜಾಗತಿಕ ಮಟ್ಟದ ಶ್ರೇಷ್ಠ ಸಂಸ್ಥೆಯಾಗಿ ಜಾಗತಿಕ ಸವಾಲುಗಳನ್ನೆದುರಿಸಿ ಬೆಳೆಸಲಿಲ್ಲವೆ ? ಅಂತೆಯೇ ಸರ್ಕಾರದ ಕ್ರಮಗಳಿಗೆ ಇವು ಏಕೆ ಮಾದರಿಯಾಗಬಾರದು ? ಇಂಥ ಸಂಶೋಧನಾ ಸಂಸ್ಥೆಗಳು ರಾಜ್ಯದಲ್ಲಿ ಹೆಸರಿಗಾದರೂ ಇವೆಯೇ ? ಇರುವಂಥ ಸಂಸ್ಥೆಗಳ ಕಾರ್ಯ ನಿರ್ವಹಣೆ ತೃಪ್ತಿಕರವಾಗಿದೆಯೇ ? ಈ ವಲಯದ ಅಭಿವೃದ್ಧಿ ಕೆಲಸಗಳು ಹಲವಾರು ಸಂಸ್ಥೆಗಳ ನಡುವೆ ಹಂಚಿಹೋಗಿವೆ. ಕಸುಬುದಾರರ ಸಹಕಾರ ಸಂಘಗಳಲ್ಲಿ ಸ್ವತಃ ಕಸುಬನ್ನು ಕೈಗೊಳ್ಳದವರ ಸಂಖ್ಯೆಯೇ ಮೇಲುಗೈಯಾಗಿದೆ. ಆದ್ದರಿಂದ ಪ್ರತಿ ಜಿಲ್ಲೆಗೆ ಒಂದಾದರೂ ಒಂದು ಕೇಂದ್ರ ಮಾರುಕಟ್ಟೆ, ತಂತ್ರಜ್ಞಾನ, ಮಾರಾಟ ಕೌಶಲ್ಯ, ಹಣಕಾಸಿನ ನೆರವು ನೀಡುವ ಕಸುಬುದಾರು ಸಂಸ್ಥೆಗಳು ಬೇಕಾಗಿವೆ.

ಹನ್ನೊಂದನೇ ಪಂಚವಾರ್ಷಿಕ ಯೋಜನೆಯಲ್ಲಿ, ಅಂದರೆ ಉಳಿದಿರುವ ನಾಲ್ಕು ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ ೪೪.೮೫ ಕೋಟಿ ರೂ.ಗಳನ್ನು ಈ ಉದ್ಯಮಿಗಳ ಅಭಿವೃದ್ಧಿಗಾಗಿ ವ್ಯಯಿಸಲು ನಿರ್ಧರಿಸಲಾಗಿದೆ. ಬೇರೆ ಬೇರೆ ಇಲಾಖೆಗಳಲ್ಲಿ ಈ ಬಗ್ಗೆ ಮಾಡುತ್ತಿರುವ ವೆಚ್ಚಗಳ ಲಾಭ ಸಂಬಂಧಪಟ್ಟವರಿಗೇ ತಲುಪುವಂತೆ ಎಚ್ಚರಿಕೆ ವಹಿಸುವುದು ಅಗತ್ಯವಾಗಿದೆ. ಆಗೊಮ್ಮೆ ಈಗೊಮ್ಮೆ ಔಪಚಾರಿಕವಾಗಿ ನಡೆಯುವ ವಸ್ತುಪ್ರದರ್ಶನದಲ್ಲಿ ಒಂದಿಷ್ಟು ಉತ್ಪನ್ನಗಳನ್ನು ಮಾರಾಟಮಾಡಿದರೆ ಸಾಲದು. ಅದಕ್ಕಾಗಿ ಶಾಶ್ವತ ವ್ಯವಸ್ಥೆಯೊಂದು ಬೇಕೇಬೇಕು. ಹಣ್ಣು, ತರಕಾರಿ, ದವಸ-ಧಾನ್ಯಗಳಿಗೆ ನಿರ್ದಿಷ್ಟ ಮಾರಾಟ ಸ್ಥಳ ಇವೆ. ಆದರೆ ಅಂಥದ್ದೇ ಉದ್ಯೋಗಾವಕಾಶ ಕಲ್ಪಿಸುವ ಗುಡಿ ಕೈಗಾರಿಕೆಗಳಿಗೆ ಈ ವ್ಯವಸ್ಥೆ ಇಲ್ಲ.

ಈ ಉತ್ಪನ್ನಗಳ ಮಾರಾಟ ಬೆಲೆಗೆ ಪೂರಕವಾದ ಧನಸಹಾಯದಷ್ಟೇ ಮುಖ್ಯವಾಗಿ ಇವುಗಳ ಬಗ್ಗೆ ಜಾಗೃತಿ ಮೂಡಿಸುವ ಪ್ರಚಾರಾಂದೋಲನ ಹೆಚ್ಚು ಬೇಕಾಗಿದೆ. ಯಾವ ಟಿ.ವಿ. ಚಾನೆಲ್‌ಗಳು, ಪತ್ರಿಕೆಗಳು, ರೇಡಿಯೋ ಸ್ಟೇಷನ್‌ಗಳು ಇದನ್ನು ಮಾಡುತ್ತಿವೆ ? ಸರ್ಕಾರದ ಮಾಲಿಕತ್ವದ ರೇಡಿಯೋ, ದೂರದರ್ಶನಗಳು ಇಂಥ ಕೆಲಸ ಮಾಡಬೇಕು. ಸರ್ಕಾರ ತನ್ನ ನೀತಿಯ ಮೂಲಕ ಅಂಥ ಪ್ರಚಾರವನ್ನು ಕಡ್ಡಾಯಗೊಳಿಸುವುದಾದರೂ ಸರಿ. ಆಧುನಿಕ ಘಟಕಗಳಿಗೆ ಸಂಬಂಧಿಸಿದಂತೆ ಇವುಗಳಲ್ಲಿ ತೊಡಗಿಸಿಕೊಂಡವರ ಸಮೀಕ್ಷೆ ನಡೆಸಿ, ಅವರನ್ನು ಗುರುತಿಸಿ, ಪ್ರೇರೇಪಿಸಿ ಕೌಶಲ್ಯವೃದ್ಧಿ ಮಾಡಲು, ವೃತ್ತಿಪರತೆ ಮೂಡಿಸಲು ಈಗಾಗಲೇ ಜಿಲ್ಲೆಯಲ್ಲಿರುವ ತಾಂತ್ರಿಕ ಶಿಕ್ಷಣ ವಲಯದ ಮಾನವ ಸಂಪನ್ಮೂಲ ಬಳಸಿಕೊಳ್ಳಬಾರದೇಕೆ ? ರುಡ್‌ಸೆಟ್‌ನಂಥ ಸಂಸ್ಥೆ ಈ ನಿಟ್ಟಿನಲ್ಲಿ ಜಿಲ್ಲೆಯಲ್ಲಿ ಕ್ರಿಯಾಶೀಲವಾಗಿರುವುದನ್ನು ಪ್ರಶಂಸಿಸಲೇಬೇಕು. ಕೃಷಿ ಉತ್ಪನ್ನಗಳ ಮತ್ತು ಆಹಾರ ಸಾಮಗ್ರಿ ಪರಿಷ್ಕರಣೆಯಂತಹ ಕೈಗಾರಿಕೆಗಳಿಗೆ ಜಿಲ್ಲೆಯಲ್ಲಿ ಹೆಚ್ಚು ಅವಕಾಶವಿದ್ದರೂ ಮಾರಾಟದ ಬಗ್ಗೆ ಆತ್ಮವಿಶ್ವಾಸವಿರದ ಕಾರಣ ಇವು ಬೆಳೆದಿಲ್ಲ. ಒಟ್ಟಾರೆಯಾಗಿ ಜಿಲ್ಲೆಯಲ್ಲಿನ ಸಾಂಪ್ರದಾಯಿಕ ಗುಡಿ ಕೈಗಾರಿಕೆಗಳಿಗೆ ಬೇಕಾಗಿರುವುದು ಮಾರುಕಟ್ಟೆಯ ಬೆಂಬಲ ಮತ್ತು ಉತ್ಪಾದನಾ ವೈವಿಧ್ಯತೆಯಲ್ಲಿನ ಆಧುನಿಕತೆ. ಗುಣಮಟ್ಟ ಚೆನ್ನಾಗಿದ್ದರೆ, ಅಭಿರುಚಿಗೆ ತಕ್ಕ ಆಕರ್ಷಣೆಗಳು ಸರಕು-ಸೇವೆಗಳಲ್ಲಿದ್ದರೆ ಗ್ರಾಹಕರು ಎಂಥ ದುಬಾರಿ ಬೆಲೆಯನ್ನಾದರೂ ಕೊಟ್ಟು ಕೊಳ್ಳುತ್ತಾರೆ ಎನ್ನುವ ಸಾರ್ವಕಾಲಿಕ ಸತ್ಯವನ್ನು ಗಮನದಲ್ಲಿಟ್ಟುಕೊಂಡು ಕ್ರಮ ಕೈಗೊಳ್ಳಬೇಕಿದೆ.

*(ದಿನಾಂಕ ೫-೨-೨೦೦೯ರಂದು ಚಿತ್ರದುರ್ಗದಲ್ಲಿ ನಡೆದ ೭೫ನೇ ಸಾಹಿತ್ಯ ಸಮ್ಮೇಳನದ 'ಚಿತ್ರದುರ್ಗ ಜಿಲ್ಲೆಯ ಗುಡಿಕೈಗಾರಿಕೆಗಳು' ವಿಷಯ ಕುರಿತ ಗೋಷ್ಠಿಯಲ್ಲಿ ಮಂಡಿಸಲಾದ ಪ್ರಬಂಧ).*




**ಡಾ|| ಜಿ. ಎನ್. ಮಲ್ಲಿಕಾರ್ಜುನಪ್ಪ**
'ಸ್ನೇಹ' ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ವಿದ್ಯಾನಗರ,
ಚಿತ್ರದುರ್ಗ - ೫೭೭ ೫೦೨

# ಹಾವೇರಿ ಜಿಲ್ಲೆಯ ದಾರ್ಶನಿಕರು

**ಈ ಜಿಲ್ಲೆಯ ದಾರ್ಶನಿಕರೆಲ್ಲ ಜಾತಿ ಮತ್ತು ರಾಜಕಾರಣದ ಕಪಿಮುಷ್ಟಿಯಲ್ಲಿ ಸಿಕ್ಕು ಅವಜ್ಞೆಗೊಳಗಾಗಿರುವುದು ಒಂದು ವಿಷಾದಕರ ಸಂಗತಿಯಾಗಿದೆ. ತಮ್ಮ ಬದುಕು ಹಾಗೂ ಕಾವ್ಯ, ಬೋಧನೆಗಳಿಂದ ದೇಶ, ಭಾಷೆ, ಮತ - ಧರ್ಮಗಳ ಗಡಿ ಮೀರಿ ನಿಂತ ಇವರೆಲ್ಲರೂ ಮಾನವೀಯತೆಯ ಸಾಕಾರ ಮೂರ್ತಿಗಳು, ಸರ್ವಜನಾಂಗಕ್ಕೂ ಆದರಣೀಯರು. ಸರ್ವರಿಗೂ ಆದರ್ಶರಾಗಿರಬೇಕಾದ ಇವರೆಲ್ಲ ಇಂದು ಒಂದೊಂದು ಜಾತಿಯ ಮತಧರ್ಮದ ಸ್ವತ್ತಾಗಿದ್ದರೆ, ಅವರ ತತ್ವಗಳು ಹಿಂದಾಗಿ ಅವರ ಜಾತಿ, ಧರ್ಮಗಳೇ ಮುಖ್ಯವಾಗಿವೆ.**

## ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ

**ಕ**ರ್ನಾಟಕದ ಮಧ್ಯಭಾಗದಲ್ಲಿರುವ ಹಾವೇರಿ ಜಿಲ್ಲೆ ಉತ್ತರ ಕರ್ನಾಟಕದ ಹೆಬ್ಬಾಗಿಲು ಎನಿಸಿಕೊಂಡಿದೆ. ಸಾಹಿತ್ಯ ಹಾಗೂ ಸಾಂಸ್ಕೃತಿಕ ಶ್ರೀಮಂತಿಕೆಯಿಂದ ಕೂಡಿರುವ ಈ ಜಿಲ್ಲೆಯಲ್ಲಿ ರನ್ನ ಮತ್ತು ಚಾವುಂಡರಾಯರ ಗುರು ಅಜಿತಸೇನಾಚಾರ್ಯ, ಪಂಪನ ಗುರು ದೇವೇಂದ್ರ ಮುನಿಗಳು ಆಗಿಹೋಗಿದ್ದಾರೆ. ಮದಗದ ಕೆಂಚಮ್ಮನ ಐತಿಹ್ಯ ಇರುವ ತಾಣ ಹಿರೇಕೆರೂರಿನ ಮದಗ - ಮಾಸೂರು ಕೆರೆಯಾಗಿದೆ. ಸರ್ವಜ್ಞ, ಕನಕದಾಸ, ಶಿಶುನಾಳ ಶರೀಫ, ಶಾಂತಕವಿ, ಗಳಗನಾಥ, ಡಾ|| ವಿ. ಕೃ. ಗೋಕಾಕ್, ಪಾಟೀಲ ಪುಟ್ಟಪ್ಪ ಮೊದಲಾದ ಸಾಹಿತ್ಯ ರಚನಕಾರರು, ಹಾನಗಲ್ ಕುಮಾರಸ್ವಾಮಿ, ಪಂಚಾಕ್ಷರ ಗವಾಯಿ, ಗಂಗೂಬಾಯಿ ಹಾನಗಲ್ ಮೊದಲಾದ ಸಂಗೀತ ಸಾಧಕರು ಈ ಜಿಲ್ಲೆಯ ಹೆಸರನ್ನು ಅಜರಾಮರವಾಗಿಸಿದ್ದಾರೆ.

ಇಲ್ಲಿಯ ಇನ್ನೊಂದು ಬಹು ಮುಖ್ಯವಾದ ವಿಶೇಷ ಎಂದರೆ, ಮೇಲೆ ಹೆಸರಿಸಿದ ಸರ್ವಜ್ಞ, ಕನಕದಾಸ, ಶರೀಫ, ಏಕಾಂತ ರಾಮಯ್ಯ ಮೊದಲಾದವರೆಲ್ಲ ದಾರ್ಶನಿಕ ಮತ್ತು ಅನುಭಾವಗಳ ಪರಂಪರೆಯಲ್ಲಿ ಹಿರಿಮೆ ಸಾಧಿಸಿದ್ದಾರೆ. ಈ ದೃಷ್ಟಿಯಿಂದಲೂ ಈ ಜಿಲ್ಲೆ ಸಮೃದ್ಧವಾಗಿದೆ.

೧

ಈ ಭಾಗದಲ್ಲಿ ಸರ್ವಜ್ಞ, ಕನಕದಾಸ ಹಾಗೂ ಶಿಶುನಾಳ ಶರೀಫ ಮೂವರನ್ನೂ ನೋಡಬಹುದು. ಈ ಮೂವರನ್ನು ಒಟ್ಟಿಗೆ ತಂದ ಕಾರಣವೆಂದರೆ ಇವರಲ್ಲಿ ಸಾಕಷ್ಟು ಸಾಮ್ಯತೆ, ಹೋಲಿಕೆಗಳಿರುವುದು. ಅಲ್ಲದೆ ಇವರು ಇಲ್ಲಿನ ಬಹುದೊಡ್ಡ ದಾರ್ಶನಿಕರು ಹಾಗೂ ಈ ಜಿಲ್ಲೆಯ ಒಟ್ಟು ಕನ್ನಡ ಸಾಹಿತ್ಯ, ಸಂಸ್ಕೃತಿಗೆ ಹಾಗೂ ಅನುಭಾವ ಪರಂಪರೆಗೆ ವಿಶೇಷ ಕೊಡುಗೆ ನೀಡಿದ್ದಾರೆ. ಕನ್ನಡ ಹಾಗೂ ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ಇವರಿಗೆ ವಿಶೇಷವಾದ ಗೌರವಾದರಗಳಿವೆ.

ಮೂವರೂ ಜನಪದ ಮೂಲದ ದೇಸಿ ಸತ್ವವನ್ನು ಬಳಸಿದ ಆಶುಕವಿಗಳು. ವಾಕ್ ಪರಂಪರೆಯ ಕವಿಗಳಾದ ಇವರು ಬಾರ್ಡ್ ಕವಿಗಳ ಸಾಲಿಗೆ ಸೇರಿದವರು. ಸಂಚಾರಿಗಳಾದ ಇವರಿಗೆ ಹಾಡುವ ಕಲೆ ಕರಗತವಾಗಿದ್ದು, ಅದು ಜನಾಕರ್ಷಣೆಯ ಮುಖ್ಯಾಂಶವೂ ಆಗಿದೆ. ಮೂವರೂ ಸಮುದಾಯದ ಮಧ್ಯದಿಂದ ಬಂದು ಸಮುದಾಯಗಳಲ್ಲಿಯೇ ಸಂಚರಿಸುತ್ತ ಬದುಕಿದವರು. ಹಾಗಾಗಿಯೇ ಈ ಜನಪದ, ದೇಸಿ, ಸಂಚಾರಿ, ಹಾಡುವ ಗುಣಗಳಿಂದ ಅವರು ಜನಸಾಮಾನ್ಯರ ಜನಪ್ರಿಯ ಕವಿಗಳೆನಿಸಿಕೊಂಡರು. ಮೂವರೂ ಯಾವುದೇ ಅರಮನೆಯ - ಗುರುಮನೆಯ ಹಂಗಿಲ್ಲದೆ ಸ್ವತಂತ್ರ ಮನೋಭಾವದಿಂದ ಬದುಕಿದವರು. ಹೀಗಾಗಿ ಇವರು ಪ್ರಜಾಕವಿಗಳೆನಿಸಿದ್ದಾರೆ. ಆರಂಭದಲ್ಲಿ ಭೋಗಿಗಳಾಗಿದ್ದ ಇವರು ಅನಂತರ ಬೇರೆ ಬೇರೆ ಕಾರಣಗಳಿಂದ ಯೋಗಿಗಳಾದವರು. ಲೌಕಿಕ ಸುಖ ತೊರೆದು ಅಧ್ಯಾತ್ಮದ ಅನುಭಾವದ, ಯೋಗದ ನೆಲೆ ಕಾಣಲು ಹಾತೊರೆದವರು, ಆ ದಿಸೆಯಲ್ಲಿ ಸಾಧನೆಗೈದವರು. ಮೂವರ ಬಗ್ಗೆಯೂ ಕೆಲವು ಐತಿಹ್ಯ ಪವಾಡಗಳಿವೆ. ಮೂವರೂ ತಮ್ಮ ವ್ಯಕ್ತಿತ್ವ ಹಾಗೂ ಮತಧರ್ಮಗಳ ಕಾರಣಗಳಿಂದ ಅವಮಾನ, ಟೀಕೆಗಳನ್ನು ಅನುಭವಿಸಿದವರು. ಮೂವರೂ ತಮ್ಮ ತ್ರಿಪದಿ, ಕೀರ್ತನೆ ಹಾಗೂ ತತ್ವಪದಗಳಲ್ಲಿ ಸಮಾಜದ ವಿಮರ್ಶೆ ಮಾಡುತ್ತ ಅಪಮೌಲ್ಯಗಳನ್ನೂ ಡಾಂಭಿಕರನ್ನೂ ಸ್ವಾರ್ಥ, ವಂಚನೆ, ಮೋಸ ಮಾಡುವವರನ್ನೂ ಟೀಕಿಸಿದವರು. ಒಂದು ಜಾತ್ಯತೀತ ಮೌಲ್ಯಗಳಿರುವ ಆದರ್ಶ ಸಮಾಜಕ್ಕಾಗಿ ಹಾತೊರೆದವರು. ಈ ಕಾರಣಕ್ಕಾಗಿಯೇ ಜಂಗಮರಾಗಿ ಸಮಾಜದ ಸಂದಿಗೊಂದಿಗಳಲ್ಲಿ ತಿರುಗಿದ ಇವರು ತಾವು ಕಂಡದ್ದಕ್ಕೆಲ್ಲ ಕಾವ್ಯದ ರೂಪ ನೀಡಿ ಹಾಡಿದರು. ಹಾಗಾಗಿ ಇವರ ಕಾವ್ಯ ಕೇವಲ 'ಕಲೆ'ಯಾಗದೆ ಆದರ್ಶಗಳ ಕಡೆಗೆ ತುಡಿಯುವ, ನೀತಿ ಬೋಧಿಸುವ ಕಲೆಯೂ ಆಗಿದೆ. ಈ ದೃಷ್ಟಿಯಿಂದ ಇವರು ಸಾಮಾಜಿಕ ವೈದ್ಯರಾಗಿದ್ದಾರೆ.

ನಾದ, ಸಂಗೀತ ಮಧುರವಾದ ಇವರ ಹಾಡುಗಳಲ್ಲಿ ಸಹಜವಾಗಿಯೇ ಉಪಮೆ, ದೃಷ್ಟಾಂತ, ನುಡಿಗಟ್ಟು, ಗಾದೆ, ಒಗಟು, ದೇಸಿಪದಗಳು ಬರುತ್ತವೆ. ಇವರ ತ್ರಿಪದಿ, ಕೀರ್ತನೆ, ತತ್ವಪದಗಳಿಗೆ ಜನತೆಯ ನಾಲಿಗೆಗಳೇ ತಾಳೆಗರಿಗಳಾಗಿವೆ. ಮಹಾಕಾವ್ಯ ಬರೆದು ಶಿಷ್ಟ ಕವಿಗಳೆನಿಸಿಕೊಂಡ ಕವಿಗಳಿಗಿಂತ ಇವರು ಮಹಾದರ್ಶನ ನೀಡಿದ, ಬದುಕುವ ಕಲೆ ತಿಳಿಸಿದ ಮಹಾಕವಿಗಳಾಗಿದ್ದಾರೆ. ಪ್ರಗತಿಪರತೆ, ಬಂಡಾಯ, ಕ್ರಾಂತಿಕಾರಕತನ, ಇವು ಈ ಮೂವರ ವ್ಯಕ್ತಿತ್ವ ಹಾಗೂ ಕಾವ್ಯದ ಹೆಗ್ಗುರುತುಗಳು. ವೈಯಕ್ತಿಕ ಹಿತಾಸಕ್ತಿಗಿಂತ, ಸಾಮಾಜಿಕ ಹಿತಾಸಕ್ತಿಗೆ, ಕೋಮು ಸೌಹಾರ್ದತೆಗೆ ದುಡಿದವರು. ಕನ್ನಡವನ್ನು ಆದರ ಎಲ್ಲ ಸಾಧ್ಯತೆಗಳಿಂದ ಬಳಸಿದ ಹಾಗೂ ಉಳಿಸಿದ ಇವರು ಕನ್ನಡದ ಪ್ರಜ್ಞೆಯನ್ನು ವಿಸ್ತರಿಸಿದ ಕವಿಗಳಾಗಿದ್ದಾರೆ, ಕನ್ನಡದ ಪ್ರಾತಿನಿಧಿಕ ಕವಿಗಳೆನಿಸಿದ್ದಾರೆ. ಮುಖ್ಯ ಸಂಗತಿಯೆಂದರೆ ಮೂವರೂ ಹಾಡಿದ್ದು, ಬರೆದಿದ್ದು ಏಕಕಾಲಕ್ಕೆ ಕಾವ್ಯ, ಮೌಲ್ಯ ಮತ್ತು



[illegible]ದೇಶವಾಗುವುದು. ಈ ಕಾರಣಕ್ಕಾಗಿಯೇ ಇವರು ಶಿಷ್ಟ ಮಹಾಕಾವ್ಯ ಬರೆದು ಕೇವಲ ಕ[illegible]ಗಳಿಟ್ಟುಕೊಂಡವರಿಗಿಂತ ದಾರ್ಶನಿಕರೆನಿಸಿಕೊಳ್ಳುತ್ತಾರೆ. ಮೌಲ್ಯ ಪ್ರತಿಪಾದನೆಯ ಹರಿಕಾರರಾಗುತ್ತಾರೆ. ಸಂತರಾಗುತ್ತಾರೆ. ಸಾರ್ವಕಾಲಿಕರಾಗುತ್ತಾರೆ. ಏಕೆಂದರೆ ಮೂವರ ಕಾವ್ಯದ ಕೇಂದ್ರ ಮಾನವ; ಮಾನವ ಕಲ್ಯಾಣ ಹಾಗೂ ಆಶಯದ ಜೀವನ, ಭರವಸೆಯ ಬದುಕು ಕಾವ್ಯದ ಗುರಿ. ಸ್ವಾನುಭವ ಮೂವರ ಕಾವ್ಯದ ಜೀವದ್ರವ್ಯ.

ದಕ್ಷಿಣ ಭಾರತದ ತಮಿಳಿನ ತಿರುವಳ್ಳುವರ್, ತೆಲುಗಿನ ವೇಮನರಷ್ಟೇ ಪ್ರಸಿದ್ಧನಾದ ಕನ್ನಡದ ಸರ್ವಜ್ಞ ಕ್ರಿ.ಶ. ೧೫೫೦-೬೦ರಲ್ಲಿ ಅಬಲೂರು-ಮಾಸೂರು ಭಾಗಗಳಲ್ಲಿದ್ದವನು. ಇವನ ಹುಟ್ಟಿನ ಹಿನ್ನೆಲೆ ಹಾಗೂ ಅಂತ್ಯಗಳ ಕುರಿತು ಗೊಂದಲವಿದೆ. ವಿದ್ವಾಂಸರು ನೈತಿಕ ಸಂಬಂಧದ ಹುಟ್ಟನ್ನು ಕಂಡರೆ ಕೆಲವರು ಅನೈತಿಕ ಸಂಬಂಧದ ಪರವಾಗಿದ್ದಾರೆ. ಮತ - ಧರ್ಮದ ಬಗ್ಗೆ ಅಷ್ಟಾಗಿ ಗೊಂದಲವಿಲ್ಲ. ವೀರಶೈವ (ಕುಂಬಾರ) ಮತಧರ್ಮಕ್ಕೆ ಸೇರಿದ ಇವನ ಅನೇಕ ವಚನಗಳು ಶಿವಪಾರಮ್ಯವನ್ನು ಹೇಳುತ್ತವೆ. ಇವನಿದ್ದ ಕಾಲವೇ ಭಕ್ತಿಪಂಥದ ಉತ್ತುಂಗದ ಕಾಲ. ವಿಜಯನಗರ ಸಾಮ್ರಾಜ್ಯದ ವೈಭವವನ್ನು ಹಾಗೂ ಅದರ ಅಧಃಪತನಗಳೆರಡನ್ನೂ ಕಂಡವನೀತ. ಕರ್ನಾಟಕದಾದ್ಯಂತ ಸಂಚರಿಸಿದ ಈತ ಸುಮಾರು ೨೦೦೦ ವಚನಗಳನ್ನು ಬರೆದಿರಬಹುದಾದರೂ ಪ್ರಕ್ಷಿಪ್ತಗಳೇ ಅಧಿಕವಾಗಿವೆ. ವೈಯಕ್ತಿಕ ನೋವುಗಳು, ವಿಜಯನಗರದ ಪತನದಿಂದ ಉಂಟಾದ ಅರಾಜಕತೆ, ಅನೈಕ್ಯತೆ, ಕುಸಿದ ನೈತಿಕ ಮೌಲ್ಯಗಳು, ಸಮಾಜದಲ್ಲಿ ತಾನು ಕಂಡ ಎಲ್ಲ ಘಟನೆಗಳಿಗೆ ಆತ ತ್ರಿಪದಿಯ ರೂಪ ನೀಡಿದ್ದಾನೆ. ಚೆನ್ನವೀರ ಕಣವಿಯವರು 'ಸರ್ವಜ್ಞ' ಕವಿತೆಯಲ್ಲಿ ಹೇಳುವಂತೆ ಅವನು ''ಸಂದಿ ಗೊಂದಿಯ ಸುತ್ತಿ ಹೊಲಸು - ಕೊಳೆ - ಕಸಕೆ ಬೆಂಕಿ ಹಚ್ಚಿ, ಒಳಿತನು ಮೆಟ್ಟಿ ತಲೆಯ ಮೇಲಿಟ್ಟ ಡಾಂಭಿಕರನೆತ್ತೆತ್ತಿ ಒಗೆದ''ವನು. ಇವನ ಮೇಲೆ ವಚನಕಾರರ ಪ್ರಭಾವ ಸಾಕಷ್ಟಾಗಿದೆ.

ವಿಷಾದದ ಸಂಗತಿಯೆಂದರೆ, ಸರ್ವಜ್ಞನನ್ನು ಕೇವಲ ನೀತಿಕವಿ, ಬೋಧನೆಯ ಕವಿ ಎಂದು ಗುರುತಿಸುತ್ತಿರುವುದು ಹಾಗೂ ವೀರಶೈವ ಧರ್ಮಕ್ಕೆ ಮಾತ್ರ ಸೀಮಿತಗೊಳಿಸುತ್ತಿರುವುದು. ತನ್ನ ಕಾಲದ ಎಲ್ಲ ತಲ್ಲಣಗಳಿಗೆ ಮುಖಾಮುಖಿಯಾದ ಆತ ಸಮಾಜವನ್ನು ತೀಕ್ಷ್ಣವಾಗಿ ಟೀಕಿಸಿದವನು. ಸಮುದಾಯದ ನುಡಿಗಟ್ಟು, ಗಾದೆ, ಒಗಟುಗಳನ್ನೇ ಕಾವ್ಯವಾಗಿಸುವುದರ ಮೂಲಕ ಜನಪದರ ಹೃದಯಕ್ಕೆ ಹತ್ತಿರವಾದವನು. ಆಕಸ್ಮಿಕವಾಗಿ ಯಾವುದೋ ಒಂದು ಮತ ಧರ್ಮದಲ್ಲಿ ಹುಟ್ಟಿದ್ದರೂ ತನ್ನ ವ್ಯಕ್ತಿತ್ವ ಹಾಗೂ ಕಾವ್ಯಗಳಿಂದ ದೇಶ, ಭಾಷೆ, ಜಾತಿ, ಧರ್ಮಗಳ ಗಡಿ ಮೀರಿ ಲೋಕಮಾನ್ಯ ಎನಿಸಿದವನು; ಅಲಕ್ಷಿತ ದೇಸಿ ಹಾಗೂ ತ್ರಿಪದಿಗಳಿಗೆ ವಿಶಿಷ್ಟ ಸ್ಥಾನ ಕಲ್ಪಿಸಿಕೊಟ್ಟವನು.

ಕಾಗಿನೆಲೆಯ ಆದಿಕೇಶವನನ್ನು ತನ್ನ ಆರಾಧ್ಯ ದೈವವನ್ನಾಗಿಸಿಕೊಂಡಿದ್ದ, ದಾಸಕೂಟದ ಕನಕದಾಸ ಸರ್ವಜ್ಞನ ಸಮಕಾಲೀನ. ಆದರೆ ಇಬ್ಬರೂ ಎಲ್ಲಿಯೂ ಮುಖಾಮುಖಿಯಾದ ಉಲ್ಲೇಖಗಳಿಲ್ಲ. ಕುರುಬ ಜನಾಂಗದ ಈತ 'ಬಾಡ'ದಲ್ಲಿ ಹುಟ್ಟಿ ತಂದೆಯ ವಿಜಯನಗರದ ಅರಸರ ಢಣಾಯಕ ವೃತ್ತಿಯನ್ನೇ ಕೈಗೊಂಡು ಮುಂದೆ ಬಂಕಾಪುರದ ಸೈನ್ಯಾಧಿಪಟ್ಟ ದೊರಕಿಸಿಕೊಂಡವನು. ತಿಮ್ಮಪ್ಪನಾಗಿದ್ದ ಈತ ಕೊಪ್ಪರಿಗೆ ಹೊನ್ನು ದೊರೆತು ಕನಕನಾದನೆಂದು ಐತಿಹ್ಯ. ಯುದ್ಧಕಲಿಯಾದ ಈತ ಯುದ್ಧದಲ್ಲಿ ಹೊಡೆತ ಬಿದ್ದು ಜೀವನ್ಮರಣದಲ್ಲಿದ್ದಾಗ ಆದಿಕೇಶವನ ಅಪ್ಪಣೆಯಂತೆ ದಾಸನಾದವನು. ಹೀಗೆ ಕಲಿಯಾಗಿದ್ದವ ಕವಿಯಾದ. ಆರ್ಥಿಕ ರಾಜಪ್ರಭುತ್ವ ನೆಲೆಯಿಂದ 'ದಾಸ' ನೆಲೆಗೆ ಬಂದ. ಸಂಸಾರಿಯಾಗಿದ್ದ ಬಗ್ಗೆಯೂ ಸಂದೇಹಗಳಿವೆ. ತಿರುಪತಿಯ ತಾತಾಚಾರ್ಯ ಹಾಗೂ ಹಂಪಿಯ ಮಾಧ್ವಮತದ ವ್ಯಾಸರಾಯರು ಗುರು ಸ್ಥಾನದಲ್ಲಿದ್ದು ಮಾರ್ಗದರ್ಶನ ನೀಡಿದರು ಹಾಗೂ ಸಮಾಜದಲ್ಲಿ ಕೀಳುಜಾತಿಯ ಅವಮಾನದಲ್ಲಿದ್ದಾಗ ಬೆಂಗಾವಲಾಗಿ ನಿಂತರು.

ಕನಕದಾಸನ ಹಿರಿಮೆಯಿರುವುದೇ ಕೇವಲ ಕೀರ್ತನೆಗಳನ್ನು ಬರೆಯದೇ ಮೋಹನ ತರಂಗಿಣಿ, ರಾಮಧಾನ್ಯ ಚರಿತೆ ಮೊದಲಾದ ಸಾಂಗತ್ಯ ಷಟ್ಪದಿ ಕಾವ್ಯಗಳನ್ನು ಬರೆದಿರುವುದರಲ್ಲಿ, ವರ್ಗ, ವರ್ಣ ಸಂಘರ್ಷದ ಸೂಚಕ ಕಾವ್ಯ ರಾಮಧಾನ್ಯ ಚರಿತೆಯಾದರೆ ಮೋಹನ ತರಂಗಿಣಿ, ಹರಿಭಕ್ತಿ ಸಾರಗಳು ಕೃಷ್ಣಭಕ್ತಿಯ ಪುರಾವೆಗಳು. ಪುರಂದರದಾಸರಿಗಿರುವ ಸಾಮಾಜಿಕ ಸ್ಥಾನಮಾನ ಕನಕದಾಸನಿಗಿಲ್ಲದಿರುವುದು ಜಾತಿ, ಧರ್ಮಗಳನ್ನು ಸಮಾಜವನ್ನು ಟೀಕಿಸಲು ಅವರಿಗೆ ಕಾರಣವಾಯಿತು. ಅವನ ಜೀವನದ ಕೆಲವು ಪವಾಡಗಳು, ಕೀರ್ತನೆಗಳಲ್ಲಿನ ಕೆಲವು ವಿಡಂಬನೆಗಳು ಅಂದಿನ ಸಮಾಜದ




Works :

ACC Limited
Wadi Cement Works
Wadi - 585 225
Dist. Gulbarga
Karnataka

Regd. Office :

ACC Limited
Cement House
121, M. K. Road
Mumbai - 400 020

ಕಂದರಗಳನ್ನು ಬಿಚ್ಚಿಹೇಳುತ್ತವೆ. ದಾಸಪರಂಪರೆಯೇ ಇಹಕ್ಕಿಂತ ಪರದ ಕಡೆ ತುಡಿಯುತ್ತಿರುವಾಗ ಕನಕದಾಸರು ಮತ್ತವರ ಸಾಹಿತ್ಯ ಲೌಕಿಕದ ಕಡೆ ತುಡಿಯುತ್ತಿರುವದನ್ನು ಕಾಣಬಹುದು. ಅಂತಿಮವಾಗಿ ಕನಕರದು ಆಧ್ಯಾತ್ಮಿಕ ಸಾಧನೆಯ ದರ್ಶನವಾದರೂ ಭಕ್ತಿ ಹಾಗೂ ಸಾಮಾಜಿಕ ಬದುಕಿಗೂ ಅಲ್ಲಿ ಸ್ಥಾನವಿರುವುದು ವಿಶೇಷ.

'ಕರ್ನಾಟಕದ ಕಬೀರ' ಎನಿಸಿದ ಶಿಶುನಾಳ ಶರೀಫ ಕನ್ನಡದ ಮೊದಲ ಮುಸ್ಲಿಂ ಕವಿ ಹಾಗೂ ಆಧುನಿಕ ಕನ್ನಡಕ್ಕೆ ೧೯ನೇ ಶತಮಾನದಲ್ಲಿ ಭಾಷೆಯನ್ನು ಹದಗೊಳಿಸಿದವನು. ಆತ ಕೋಮುಸೌಹಾರ್ದತೆಯ ಬಹುದೊಡ್ಡ ಪ್ರತೀಕ. ಹಾಗೇ ಭಾಷಾ ಹಾಗೂ ಸಾಂಸ್ಕೃತಿಕ ಸೌಹಾರ್ದತೆಯ ಪ್ರತೀಕ ಕೂಡ. ಹುಟ್ಟಿದ್ದು ಮುಸ್ಲಿಮನಾಗಿ, ಗುರು ಹಿಂದೂ ಬ್ರಾಹ್ಮಣ, ಆರಾಧ್ಯ ದೈವ ಶಿಶುನಾಳದ ಬಸವಣ್ಣ, ಬದುಕಿದ್ದು ಮತ್ತು ಸತ್ತದ್ದು ಮನುಷ್ಯನಾಗಿ. ವೃತ್ತಿಯಿಂದ ಶಿಕ್ಷಕನಾದರೂ ತನ್ನ ಯೋಗ ಸಾಧನೆಗೆ ಕಷ್ಟವಾಗುತ್ತದೆಂದು ಹಾಗೂ ಸಾಂಸಾರಿಕ ಹಾಗೂ ವೈಯಕ್ತಿಕ ನೋವುಗಳಿಂದ ಮೇಷ್ಟರ ಕೆಲಸ ಬಿಟ್ಟು ಯೋಗಸಾಧನೆಯಲ್ಲಿ ತೊಡಗಿದವನು. ಹಾಡಿದ್ದು ತತ್ವಪದ, ರಿವಾಯತ್, ಲಾವಣಿ, ಹೋಳಿಪದ ಇತ್ಯಾದಿಗಳನ್ನು. ಶಿಷ್ಯ ಮತ್ತು ಗುರುಗಳಿಬ್ಬರೂ ಮುಸ್ಲಿಂ ಹಾಗೂ ಹಿಂದೂ ಧರ್ಮದ ಕರ್ಮದ ಆಚರಣೆಗಳನ್ನು ತಿರಸ್ಕರಿಸಿದವರು. ವೀರಶೈವ ಧರ್ಮ ಹಾಗೂ ವಚನಗಳಿಂದ ಪ್ರಭಾವಿತನಾಗಿದ್ದ ಶರೀಫ ಡಾಂಭಿಕ ಬ್ರಾಹ್ಮಣರು ಮತ್ತು ವೀರಶೈವರನ್ನೂ ಟೀಕಿಸಿದ್ದಾನೆ. ಕ್ರಿಶ್ಚಿಯನ್ ಧರ್ಮದ ಪ್ರಭಾವ ಹಾಗೂ ಆಂಗ್ಲ ಮತ್ತು ಮರಾಠಿ ಭಾಷೆಗಳು ಪ್ರಭಾವದಲ್ಲಿದ್ದಾಗ ಕನ್ನಡವನ್ನು ದೇಸಿ ಮೂಲಕ ಬಳಸಿ ಆಧುನಿಕ ಕನ್ನಡಕ್ಕೆ ಮುನ್ನುಡಿ ಬರೆದವನು. ಶಿಷ್ಟ ಭಾಷೆ ಬಳಸಲು ಸಾಧ್ಯವಿದ್ದರೂ ಗ್ರಾಮ್ಯ ಭಾಷೆ ಬಳಸುವ ಮೂಲಕ ಜನಪದರ ನಾಲಿಗೆಗೆ ಹತ್ತಿರವಾದವನು.

ಶರೀಫ ನಮಗಿಂದು ಸಾಹಿತ್ಯಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮುಖ್ಯವಾಗುತ್ತಿದ್ದಾನೆ. ಸಾಹಿತ್ಯದ ಅನನ್ಯತೆ ಒಂದು ಕಡೆಯಾದರೆ, ಕೋಮು ಸಾಮರಸ್ಯದ ಒಂದು ಧೀಮಂತನಾಗಿ ಆತ ಇನ್ನೊಂದು ಕಡೆಯಿದ್ದಾನೆ. ಚಾರಿತ್ರಿಕವಾದ ನಮ್ಮ ಇಕ್ಕಟ್ಟುಗಳು ಶರೀಫ, ಕುವೆಂಪುರಂಥ ಕವಿಗಳನ್ನು, ಪ್ರಗತಿಪರರನ್ನು ಮುಖ್ಯವಾಗಿಸಿಬಿಡುತ್ತವೆ. ನಮ್ಮ ನಡುವಿನ ತಲ್ಲಣಗಳಿಗೆ ಇಂಥವರು ಉತ್ತರವಾಗುತ್ತಾರೆ. ಶರೀಫನಂಥವರಿಗೆ ಜಾತಿ, ಧರ್ಮ ಯಾವುದೂ ಮುಖ್ಯವಾಗದೆ ತತ್ವ, ಗುರು ಮುಖ್ಯರಾಗುತ್ತಾರೆ. ಸಮಾಜದ ಹೊರಗಣ್ಣಿಗೆ ವಿಚಿತ್ರವಾಗಿ ವಿಲಕ್ಷಣವಾಗಿ ಕಾಣುವ ಇಂಥವರು ಅಂತರಂಗದಲ್ಲಿ ಸುತ್ತಲಿನ ಆಗುಹೋಗುಗಳಿಗೆ ವಿಷಾದಿಸುತ್ತಾರೆ. ಇದು ಸಂತರು, ಅನುಭಾವಿಗಳ ಲಕ್ಷಣವೂ ಆಗಿದೆ. ಶರೀಫನ ಬದುಕು ಹಾಗೂ ಕಾವ್ಯಗಳೇ ಒಂದು ಅದ್ಭುತ 'ದರ್ಶನ'ಗಳಾಗಿವೆ.



ಕನಕದಾಸರು

೨

ಈ ಭಾಗದಲ್ಲಿ ಏಕಾಂತ ರಾಮಯ್ಯ, ಅಂಬಿಗರ ಚೌಡಯ್ಯ, ಕೊಡೇಕಲ್ ಸಂಗಪ್ಪಯ್ಯ, ಹಾನಗಲ್ ಕುಮಾರಸ್ವಾಮಿಗಳು ಹಾಗೂ ಅಗಡಿಯ ಶೇಷಾಚಲ ಗುರುಗಳ ಬಗ್ಗೆ ಬರೆಯಲಾಗಿದೆ.

೧೨ನೇ ಶತಮಾನದಲ್ಲಿ ಜೈನಧರ್ಮದ ವಿರುದ್ಧ ಶೈವಮತ ಪ್ರತಿಪಾದನೆಗೆ ಉತ್ತರದಿಂದ ಅದಿಉರಿಗೆ ಬಂದ ಏಕಾಂತ ರಾಮಯ್ಯ ತನ್ನ ಶಿರಸ್ಸನ್ನೇ ಕಡಿದು ಪಣವಾಗಿಡುವುದರ ಮೂಲಕ ವೀರಶೈವ ಧರ್ಮದ ಹಿರಿಮೆಯನ್ನು ಮೆರೆದವನು. ಇಂದು ಅಚ್ಚರಿಯಂತೆ ಮತ್ತು ಆತಂಕವಾಗಿ ಕಾಣುವ ಈ ಘಟನೆ ಅಂದು ಧರ್ಮ ಉಳಿಸುವ ಹಾಗೂ ಬೆಳೆಸುವ ವಿಚಾರದಲ್ಲಿ ಸಹಜವಾಗಿ ಕಾಣುತ್ತದೆ. ಧಾರ್ಮಿಕ ಸೌಹಾರ್ದತೆಗೆ ಹಿನ್ನೆಡೆಯಂತೆ ಈ ಘಟನೆಯನ್ನು ಉಲ್ಲೇಖಿಸಬಹುದಾದರೂ ಆವೊತ್ತಿನ ಪರಿಸ್ಥಿತಿ ಅವನನ್ನು 'ವೀರ'ನನ್ನಾಗಿ ಮಾಡಿದೆ. ಆದರೆ ಈ ಕಾರ್ಯದಲ್ಲಿ ೩ ಜಾವಗಳ ಕಾಲ ಸೂರ್ಯನನ್ನು ತಡೆಹಿಡಿದ ಚಿಕ್ಕೇಶ (ಮೂರು ಜಾವಿದೇವ)ನನ್ನೂ ಉಲ್ಲೇಖಿಸುವುದಿಲ್ಲ. ಏಕಾಂತ ರಾಮಯ್ಯ ಬರೆದ ೭ ವಚನಗಳು ದೊರೆತಿವೆ.

ಕಂಥೆ ತೊಟ್ಟವ ಗಾಯವಲ್ಲ, ಕಾವಿ ಹೊದ್ದವ ಜಂಗಮನಲ್ಲ, ಶೀಲ ಕಟ್ಟಿದವ ಭಕ್ತನಲ್ಲ... ಮುಂತಾಗಿ ತನ್ನ ವಚನಗಳಲ್ಲಿ ನೇರವಾಗಿ, ಖಾರವಾಗಿ ಡಾಂಭಿಕರನ್ನೂ, ಕಪಟಿಗಳನ್ನೂ, ಪುರೋಹಿತಶಾಹಿಗಳನ್ನೂ ಟೀಕಿಸುವ ಅಂಬಿಗರ ಚೌಡಯ್ಯ ಚೌಡಯ್ಯದಾನಪುರದವನು. ಇವನ ವಚನಗಳಲ್ಲಿ ಬಂದಿರುವಷ್ಟು ಸಾಮಾಜಿಕ ಚಿಂತನೆ, ವಿಡಂಬನೆ, ಬೈಗುಳಗಳು ಇನ್ನಾರ ವಚನಗಳಲ್ಲಿಯೂ ಬಂದಿಲ್ಲ. ಏಕದೇವೋಪಾಸಕನಾದ ಈತ ವರ್ಗಾಧಾರಿತ ಸಮಾಜವನ್ನು ಒಪ್ಪದೆ ಭಕ್ತ - ಭವಿ ಪರಿಕಲ್ಪನೆಯನ್ನು ಒಪ್ಪುತ್ತಾನೆ. ಶೋಷಿತವರ್ಗದಿಂದ ಬಂದ ಈತ ಪುರೋಹಿತರ ಸ್ವತ್ತಾಗಿದ್ದ ವೇದ, ಶಾಸ್ತ್ರ, ಆಗಮ, ಪುರಾಣಗಳನ್ನು ಟೀಕಿಸುತ್ತಾನೆ. ಜನಸಮುದಾಯದ ಹಾಗೂ ಕೆಳವರ್ಗದಿಂದ ಬಂದ ಅವನ ವಚನಗಳು ಸಹಜವಾಗಿಯೇ ಆಡುಭಾಷೆಗೆ ಹತ್ತಿರವಾಗಿವೆ. ಸ್ವಾತಂತ್ರ್ಯ, ಸ್ವಾಭಿಮಾನ ಮತ್ತು ಪ್ರಾಮಾಣಿಕವಾದ ಹಾಗೂ ನೇರವಾದ ಅವನ ಬೆದರಿಕೆಗಳು ಜನರಿಗೆ ದರ್ಶನವಾಗಿದೆ.

ಆರೂಢ ಸಂಪ್ರದಾಯದ ಕೊಡೇಕಲ್ ಸಂಗಪ್ಪಯ್ಯ ಗುಲ್ಬರ್ಗಾದ ಸುರಪುರದವನಾದರೂ ತನ್ನ ಕಾರ್ಯಕ್ಷೇತ್ರ ಮಾಡಿಕೊಂಡದ್ದು ಕನಕದಾಸನ ಕಾಗಿನೆಲೆಯನ್ನು. ಕನಕದಾಸನಿಗಿಂತ ಸ್ವಲ್ಪ ಕಾಲ ಮೊದಲಿನವನಾದ ಈತ ಹಿಂದೂ-ಮುಸ್ಲಿಂ ಭಾವೈಕ್ಯತೆಗೆ ಶ್ರಮಿಸಿದವನು. ಕಾಗಿನೆಲೆ ಸಂಗಮೇಶ್ವರನೆಂದು ಕರೆಸಿಕೊಳ್ಳುವ ಈತನ ಅಂತ್ಯ ಕಾಗಿನೆಲೆಯಲ್ಲಿ ಆಗಿದೆ. ಆ ದೇವಸ್ಥಾನವೂ ನಾವಳಗಿ ಶಿವಲಿಂಗನ ಗುಡಿಯಂತೆ ಹಿಂದೂ-ಮುಸ್ಲಿಂರ ಮಂದಿರ-ಗೋರಿಗಳ ಮಾದರಿಯಲ್ಲಿದೆ. ಸೂಫಿಗಳ ಹತ್ತಿರಹತ್ತಿರ ಇವನ ವ್ಯಕ್ತಿತ್ವ ಬಂದರೂ ವಚನಗಳನ್ನು ಬರೆದಂತೆ ಕಾಣುವುದಿಲ್ಲ. ಹಿಂದೂ - ಮುಸ್ಲಿಂ ಸಾಮರಸ್ಯವೇ ಸಂಗಪ್ಪಯ್ಯನ ದರ್ಶನ.

೧೯ ಮತ್ತು ೨೦ನೇ ಶತಮಾನದಲ್ಲಿದ್ದ ಹಾನಗಲ್ ಕುಮಾರಸ್ವಾಮಿಗಳೂ ಸಂಗೀತ ಪರಂಪರೆಗೆ ಬಹುದೊಡ್ಡ ಕೊಡುಗೆ ನೀಡಿದವರು. ಅಖಿಲ ಭಾರತ ವೀರಶೈವ ಮಹಾಸಭಾದ ಸ್ಥಾಪನೆಯಲ್ಲೂ ಅವರು ಪ್ರಮುಖ ಪಾತ್ರ ವಹಿಸಿದ್ದಾರೆ. ಪಂಚಪೀಠಗಳು ಹಾಗೂ ವಿರಕ್ತಮಠಗಳ ಮಧ್ಯೆ ಇದ್ದ ಶೀತಲ ಸಮರವನ್ನು ತಣ್ಣಗಾಗಿಸುವಲ್ಲಿಯೂ ಅವರದು ಮುಖ್ಯ ಪಾತ್ರವಾಗಿದೆ. ಶಿವಯೋಗ ಮಂದಿರವನ್ನು ಹಾವೇರಿಯ ಹುಕ್ಕೇರಿ ಮಠದ ಹಿಂದಿನ ಶ್ರೀ ಶಿವಬಸವ ಸ್ವಾಮಿಗಳೊಂದಿಗೆ ಸೇರಿ ಸ್ಥಾಪಿಸಿ ಆರ್ಥಿಕ ಸಬಲತೆಗೆ ದೇಶದೆಲ್ಲೆಡೆ ಸಂಚರಿಸಿದವರು. ವೀರಶೈವ ಸಮುದಾಯದ ಏಳ್ಗೆಗೆ ಹಗಲಿರುಳೂ ಶ್ರಮಿಸಿದ ಕುಮಾರ ಸ್ವಾಮಿಗಳು ವೀರಶೈವದಾಚೆಗೂ ಮಾನವ ಕಲ್ಯಾಣಕ್ಕಾಗಿ ಶ್ರಮಿಸಿದವರು.

ಇವರು ಮಾಸ್ತಿಯಂಥವರ ಮನಗೆದ್ದು ಅವರಿಂದ 'ಅಗಡಿಯ ಸಾಧುಗಳು' ಎಂಬ ಕಥನ ಕವನಕ್ಕೆ ವಸ್ತುವಾದವರು. ಹಾಗೆಯೇ ಶಿಶುನಾಳ ಶರೀಫರ 'ಸಾಧು ನೋಡಲಾ' ಎಂಬ ತತ್ವಪದಕ್ಕೂ ಅಗಡಿ - ಆನಂದವನದ ಶೇಷಾಚಲ ಗುರುಗಳು ಸ್ಫೂರ್ತಿ ನೀಡಿದರು. ಕನ್ನಡದ ಶ್ರೇಷ್ಠ ಕಾದಂಬರಿಕಾರ ಗಳಗನಾಥರಿಗೆ ಆಶ್ರಯನೀಡಿ ಕನ್ನಡಭಾಷೆ ಹಾಗೂ ಸಾಹಿತ್ಯದ ಬೆಳವಣಿಗೆಗೆ ಪರೋಕ್ಷವಾಗಿ ಕಾರಣರಾದವರು ಶೇಷಾಚಲರು. ಹಾಗೆಯೇ ಕನ್ನಡ ಸಾಹಿತ್ಯ ಪತ್ರಿಕಾ ಪ್ರಪಂಚದಲ್ಲಿಯೇ ಹಿರಿದಾದ ಇತಿಹಾಸ ಹೊಂದಿರುವ 'ಸದ್ಬೋಧ ಚಂದ್ರಿಕೆ' ಮಾಸ ಪತ್ರಿಕೆಯನ್ನು ಗಳಗನಾಥರು ಆರಂಭಿಸಲೂ ಹಾಗೂ ಆ ಮೂಲಕ ಕನ್ನಡ ಓದುಗರನ್ನು ಬೆಳೆಸಲೂ ಕಾರಣರಾದವರು. ಸಂಸ್ಕೃತಾಭ್ಯಾಸಿಗಳಾಗಿದ್ದ ಶೇಷಾಚಲರು ಸಾಯುವ ಮುನ್ನ ಶಿಷ್ಯರ ಹಾಗೂ ಸೊಸೆಯ ಪಾದ ಪೂಜಿಸಿ ನಮಸ್ಕರಿಸಿದ್ದು ಗುರು-ಶಿಷ್ಯ ಉಭಯವಳಿದ ಪ್ರಸಂಗಕ್ಕೆ ಸಂಕೇತವಾಗಿದೆ.

೩

ಇದುವರೆಗೆ ನಾನು ಹೇಳಿದ ಈ ಜಿಲ್ಲೆಯ ದಾರ್ಶನಿಕರೆಲ್ಲ ಜಾತಿ ಮತ್ತು ರಾಜಕಾರಣದ ಕಪಿಮುಷ್ಟಿಯಲ್ಲಿ ಸಿಕ್ಕು ಅವಜ್ಞೆಗೊಳಗಾಗಿರುವುದು ಮಾತ್ರ ವಿಷಾದಕರ ಸಂಗತಿಯಾಗಿದೆ. ತಮ್ಮ ಬದುಕು ಹಾಗೂ ಕಾವ್ಯ, ಬೋಧನೆಗಳಿಂದ ದೇಶ, ಭಾಷೆ, ಮತ -ಧರ್ಮಗಳ ಗಡಿ ಮೀರಿ ನಿಂತ ಇವರೆಲ್ಲರೂ ಮಾನವೀಯತೆಯ ಸಾಕಾರ ಮೂರ್ತಿಗಳು, ಸರ್ವಜನಾಂಗಕ್ಕೂ ಆದರಣೀಯರು. ಸರ್ವರಿಗೂ ಆದರ್ಶರಾಗಿರಬೇಕಾದ ಇವರೆಲ್ಲ ಇಂದು ಒಂದೊಂದು ಜಾತಿಯ, ಮತಧರ್ಮದ ಸ್ವತ್ತಾಗಿದ್ದರೆ, ಅವರ ತತ್ವಗಳು ಹಿಂದಾಗಿ ಅವರ ಜಾತಿ, ಧರ್ಮಗಳೇ ಮುಖ್ಯವಾಗಿವೆ !

ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ
ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಿರೇಕೆರೂರು - ೫೮೧ ೧೧೧

# ಮಂಗಳದ ಹೊಸ ಪ್ರದರ್ಶನ



**ನಭಾವಲೋಕನ**

**ಮ**ಳೆಯಿಂದ ಸ್ವಚ್ಛವಾದ ಆಕಾಶದಲ್ಲಿ ಆಕಾಶಗಂಗೆಯನ್ನು ಹುಡುಕುವ ಪ್ರಯತ್ನ ಮಾಡಬಹುದು. ಧನುರಾಶಿಯ ದೂಳು, ಅನಿಲ ಮತ್ತು ನೆಬ್ಯುಲಾಗಳ ದಟ್ಟಣೆ ಹೀಗೆ ನದಿಯ ಉಗಮದ ಕಲ್ಪನೆ ಮೂಡಿಸುತ್ತದೆ. ವೃಶ್ಚಿಕ, ಧನುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಗಂಗೆಯ ಮುಖ್ಯಭಾಗ ಕಾಣುವುದು. ಇದರ ಇಂದು ಶಾಖೆ ಉತ್ತರದತ್ತ ಹೊರಟಿರುವುದನ್ನು ಗುರುತಿಸಲು ಪ್ರಕಾಶಮಾಲಿನ್ಯವಿಲ್ಲದ ಸ್ಥಳಗಳಿಂದ ಮಾತ್ರ ಸಾಧ್ಯ. ಉತ್ತರದ ತ್ರಿಕೋಣದ ಮೂಲಕ ಹರಿಯುವಂತೆ ಕಾಣುತ್ತದೆ. ರಾಜಹಂಸದ (ಸಿಗ್ನಸ್) ಹಂಸಾಕ್ಷಿ, ವೀಣಾದ (ಲೈರಾ) ಅಭಿಜಿತ್ ಮತ್ತು ಗರುಡದ (ಅಕ್ವಿಲಾ) ಶ್ರವಣ – ಈ ನಕ್ಷತ್ರಗಳೇ ತ್ರಿಕೋಣದ ಮೂಲೆಗಳು.

ಇದುವರೆಗೆ ಬೆಳಗಿನ ಜಾವ ಕಾಣುತ್ತಿದ್ದ ಮಂಗಳ ಗ್ರಹ ಮುಂದೆ ಹೊಸ ಹೊಸ ಪ್ರದರ್ಶನ ನೀಡಲು ಸಿದ್ಧತೆ ನಡೆಸುತ್ತಿದೆ. ಈಗಾಗಲೇ ಅದರ ಪ್ರಕಾಶ ಹೆಚ್ಚುತ್ತಿರುವುದನ್ನು ಗಮನಿಸಿರಬಹುದು. ಆದರೂ ಮಂಗಳ ಯಾವುದು ಎಂದು ಪೇಚಾಡುತ್ತಿರುವವರಿಗೆ ಚಂದ್ರ ಒಳ್ಳೆಯ ಮಾರ್ಗದರ್ಶನ ನೀಡುತ್ತಾನೆ. ೧೨ರಂದು ಮಧ್ಯರಾತ್ರಿಯ ನಂತರ ಅಥವಾ ಬೆಳಗಿನ ಜಾವ ಚಂದ್ರನನ್ನು ಹುಡುಕಿ. ಅದರ ಸಮೀಪದಲ್ಲಿ ಕಾಣುವ ಕೆಂಪು (ಕಿತ್ತಳೆ ಎನ್ನುವುದು ಸೂಕ್ತ) ಚುಕ್ಕೆಯೇ ಮಂಗಳ. ಇದರ ಛಾಯಾಚಿತ್ರ ತೆಗೆಯಲು ಒಂದೆರಡು ಬಾರಿ ಕ್ಲಿಕ್ ಮಾಡಿ ಪರೀಕ್ಷೆಗೆ ಸಿದ್ಧರಾಗಿ. ಮರುದಿನ ಇದೇ ಕಾರ್ಯಕ್ರಮದ ಪುನರಾವರ್ತನೆ ಅವಶ್ಯವಿದೆ. ೧೩ರ ಬೆಳಗಿನ ಜಾವ ಚಂದ್ರ ಮಂಗಳನನ್ನು ಮುಚ್ಚಿಹಾಕುವ ಕಾರ್ಯಕ್ರಮವಿದೆ. ಇದೇ ಆಚ್ಛಾದನೆ. ಈ ಘಟನೆ ನಮಗೆ ಕಾಣುವುದಿಲ್ಲ; ಆದರೆ ಚಂದ್ರನಿಗೆ ಅಂಟಿಕೊಂಡ ಹಾಗೆ ಈ ಚುಕ್ಕೆ ಕಾಣುವುದು. ಇದನ್ನು ಚಿತ್ರೀಕರಿಸಲು ಹಿಂದಿನ ದಿನದ ಸಿದ್ಧತೆ ಅವಶ್ಯಕ. ಮುಂದೆ ಮಂಗಳ ಮತ್ತಷ್ಟು ಪ್ರಕಾಶ ಪಡೆದಾಗ ಇಂತಹ ಅವಕಾಶಗಳು ಪುನಃ ದೊರೆಯುವುವು.



೬ರ ಮುಂಜಾವು ಬುಧ, ಶುಕ್ರ, ಶನಿ

ಇದೇ ರೀತಿ ೨೧ರಂದು ಜ್ಯೇಷ್ಠಾ ನಕ್ಷತ್ರವನ್ನು ಚಂದ್ರ ಮರೆಮಾಡುವ ಕಾರ್ಯಕ್ರಮ ಇದೆ. ಅದೂ ಕೂಡ ಬರಿಗಣ್ಣಿಗೆ ನೋಡಲು ಮತ್ತು ಛಾಯಾಗ್ರಹಣಕ್ಕೆ ಸೂಕ್ತ ಅವಕಾಶವಾಗಲಿದೆ.

ಕೃತ್ತಿಕಾ ನಕ್ಷತ್ರವನ್ನು ಚಂದ್ರ ಮರೆಮಾಡುವುದು ೮ರ ಮುಂಜಾವು; ಆದರೆ ಹುಣ್ಣಿಮೆಯಷ್ಟೇ ಬೆಳಕಿರುವುದರಿಂದ ಗುಚ್ಛದ ನಕ್ಷತ್ರಗಳು ಸ್ಪಷ್ಟವಾಗಿ ಗೋಚರಿಸಲಾರವು. ದುರ್ಬೀನು ಅಥವಾ ದೂರದರ್ಶಕ ಅವಶ್ಯವಾಗಬಹುದು.

ಉ

ಕುಂತಿ ಯುಧಿಷ್ಠಿರ ಸುಯೋಧನ ಸಹದೇವ ವೀಣಾ ನಕುಲ ರಾಜಹಂಸ ಭೀಮ ಮೀನ ಗರುಡ ಉರಗಧರ ಕುಂಭ ಗುರು ತುಲಾ ಮಕರ ವೃಶ್ಚಿಕ ಧನು ದಕ್ಷಿಣ ಮೀನ ಬಕ

ಪೂ ಪ ದ

ಸಂಜೆಯಿಂದ ಮರೆಯಾದ ಶನಿಗ್ರಹ ಈಗ ಮುಂಜಾವಿಗೆ ಆಗಮಿಸಿದೆ. ೬ರಂದು ಶುಕ್ರ, ಶನಿ ಮತ್ತು ಬುಧ ಇವುಗಳು ಸರತಿಯ ಸಾಲಿನಂತೆ ಕಾಣುತ್ತವೆ. ಅಂದು ಬುಧದ ಗರಿಷ್ಠ ಕೋನೋನ್ನತಿಯಾದದ್ದರಿಂದ ಗುರುತಿಸುವ ಪ್ರಯತ್ನದಲ್ಲಿ ಯಶ ದೊರಕುವುದು. ಅದರ ಆಚೀಚಿನ ದಿನಗಳಲ್ಲೂ ಕೂಡ ಈ ಮೂರೂ ಗ್ರಹಗಳನ್ನು ನೋಡಬಹುದು. ಬುಧ ಕ್ರಮೇಣ ಸಾಲಿನಲ್ಲಿ ಹಿಂದೆ ಬೀಳುವುದನ್ನು ಕಾಣಬಹುದು. ಎರಡೇ ದಿನಗಳಲ್ಲಿ ಬುಧ ಶನಿಯ ಜೊತೆಗೂಡುವುದನ್ನು ಕಾಣಬಹುದು. ಮುಂದಿನ ವಾರದಲ್ಲಿ ಶುಕ್ರ ಶನಿಯ ಜೊತೆಗೂಡುವುದು; ಆಗ ಬುಧ ಎಲ್ಲಿ ಎಂದು ಹುಡುಕಬೇಕಾಗುವುದು.

ಸಂಜೆ ಕಾಣುವ ಪ್ರಕಾಶಮಾನ ಗ್ರಹ ಗುರುವನ್ನು ತೋರಿಸಲು ಯಾವ ಮಾರ್ಗದರ್ಶಿಯೂ ಬೇಕಿಲ್ಲ. ಆಕಾಶದ ಆ ಭಾಗದಲ್ಲಿ ಯಾವುದೇ ಪ್ರಖರ ನಕ್ಷತ್ರವಿಲ್ಲ. ೨೬ರಂದು ಚಂದ್ರ ಅದರ ಜೊತೆಗೂಡುತ್ತದೆ.

ಈ ತಿಂಗಳಲ್ಲಿ ಉಲ್ಕಾವೃಷ್ಟಿಗಳಿವೆ. ಜಿಯೋಕೋಬಿನಿ ಝಿನ್ನರ್ ಎಂಬ ಧೂಮಕೇತುವಿನ ಕಣಗಳು ೯ರ ಮುಂಜಾವಿನಲ್ಲಿ ಮತ್ತು ಹ್ಯಾಲೀ ಧೂಮಕೇತುವಿನ ಕಣಗಳು ೨೩ರ ಮುಂಜಾವಿನಲ್ಲಿ ಉಲ್ಕೆಗಳಾಗಿ ಮಿಂಚುವುವು.

**ಖಗೋಳ ದಿನಚರಿ**

೪ ಹುಣ್ಣಿಮೆ ೧೧:೩೦ಕ್ಕೆ
೬ ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೮ ಬುಧ - ಶನಿ ಜೋಡಿ * ಮುಂಜಾವು ಪೂರ್ವದಲ್ಲಿ;
ಕೃತ್ತಿಕಾ ಆಚ್ಛಾದನೆ ಮುಂಜಾವು ಪಶ್ಚಿಮದಲ್ಲಿ *
೧೧ ಚಾಂದ್ರಮಾಸದ ಕೊನೆಯ ಪಾದ
೧೨ ಮಂಗಳ ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)
೧೩ ಶುಕ್ರ - ಶನಿ ಜೋಡಿ *
೧೮ ಅಮಾವಾಸ್ಯೆ ೧೦:೩೦ಕ್ಕೆ
೨೧ ಜ್ಯೇಷ್ಠಾ - ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)
೨೬ ಚಾಂದ್ರಮಾಸದ ಮೊದಲ ಪಾದ
ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೭ ಚಂದ್ರ - ಗುರು ಜೋಡಿ *

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



# ಜಾನಪದ ಅನಕ್ಷರಸ್ಥರ ಅಮರ ಕಾವ್ಯ-ಕಲೆಗಳು

## ಅಪ್ಪಗೆರೆ ತಿಮ್ಮರಾಜು

ಸಮಾನ ಬದುಕು ಮತ್ತು ಸಮಾನ ಸಂಸ್ಕೃತಿಯನ್ನು ತೋರಿಸಿಕೊಟ್ಟ ಸಂಸ್ಕೃತಿ ಎಂದರೆ ಜಾನಪದ. ನಮ್ಮ ಜನಪದರು ಬಾಗಿ ಬೀಗಿದವರಲ್ಲ. ಅವರಿಗೆ ಹಮ್ಮುಬಿಮ್ಮು ಗೊತ್ತಿಲ್ಲ, ಅವರೇ ಕಟ್ಟಿ, ಅವರೇ ಉಂಡು ನಲಿದಾಡಿದವರು. ಈ ಜಾನಪದ ಕಲೆಗಳು ಹೇಗೆ ಬೆಳೆದವು, ಎಲ್ಲಿ ಹುಟ್ಟಿದವು, ಏಕೆ ಹುಟ್ಟಿದವು ಎಂಬುದಕ್ಕೆ ಸರಿಯಾದ, ಪರಿಪಕ್ವವಾದ ಆಧಾರಗಳನ್ನು ಹೇಳುವುದು ಕಷ್ಟಕರ.

ಆಯಾ ರಾಜ್ಯಗಳಲ್ಲಿ, ಅವರವರ ವರ್ಗ ಸಂಪ್ರದಾಯಗಳಲ್ಲಿ ಆ ಕ್ಷಣಕ್ಕೆ, ಆ ಶ್ರಮಕ್ಕೆ, ಆ ಸಂತೋಷಕ್ಕೆ ಪಟ್ ಅಂತ ಹುಟ್ಟಿ, ತಟ್ ಅಂತ ಹೇಳುವಂಥದು ಜಾನಪದ. ಇಡೀ ಭಾರತ ದೇಶವೆ ಒಂದು ಜಾನಪದೀಯ ಲೋಕ, ಕಾರಣ ಅನಕ್ಷರಸ್ಥ ಮುಗ್ಧ ಅಂತರಂಗದಿಂದ ಅಲೆ ಅಲೆಯಂತೆ ನಾಲಿಗೆಯ ಮೇಲೆ ನಲಿದಾಡಿ ಬಂದದ್ದು ಜಾನಪದ.

ಜಾನಪದದಲ್ಲಿ ಅನೇಕ ಪ್ರಕಾರಗಳಿವೆ. ಆ ಪ್ರಕಾರ ಒಂದೇ ಎರಡೇ ? ನೂರಾರು. ಇವುಗಳಲ್ಲಿ ಗ್ರಾಮ್ಯ ಕಲೆಗಳಿಗೆ ಪ್ರಮುಖ ಸ್ಥಾನವಿದೆ. ಗ್ರಾಮೀಣರು ತಮ್ಮ ಶ್ರಮಪೂರಿತ ಕಾಯಕಗಳಲ್ಲಿ ತೊಡಗಿಕೊಳ್ಳುವ ಸಂದರ್ಭಗಳಲ್ಲಿ ಈ ಪ್ರಕಾರಗಳು ಹರಿದುಬಂದಿವೆ. ಇವು ಯಾವುದೇ ತರಬೇತಿಯಿಂದ ಕಲಿತುಬಂದವಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಈ ಕಲೆಗಳು ನೋಡಿ ಕಲಿತಂಥವು. ಹಾಡಿ ಕುಣಿದಂಥವು, ಸ್ವಾಭಾವಿಕವಾಗಿ, ಸ್ವೇಚ್ಛೆಯಾಗಿ, ಅಂತರಂಗದಿಂದ ಅರಳಿದ ಹಾಡು, ಕುಣಿತಗಳು. ಜಾನಪದವೆಂದರೆ ಬರೀ ಹಾಡು, ಕುಣಿತ, ತಮಟೆಗಳೇ ಅಲ್ಲ; ಗಾದೆ, ಒಗಟು, ರೇಗಿಸುವುದು, ಮದುವೆ, ಜಾತ್ರೆ, ಹಬ್ಬ, ನೋವು-ನಲಿವು ಹೀಗೆ ಹಲವಾರು ಪ್ರಕಾರಗಳಲ್ಲಿ ಆ ಸಂದರ್ಭಕ್ಕೆ ಹುಟ್ಟಿಬಂದಿವೆ.

ಜಾನಪದ ಒಂಟಿತನವಲ್ಲ, ಜಾನಪದ ಕಲೆಗಳೆಲ್ಲವೂ ಸಮೂಹವಾಗಿ ಬಂದವು. ಜನಾಂಗಗಳ ಜೀವಾಳವೇ ಜಾನಪದ, 'ದನಿ ಎತ್ತರಿಸಿ ನುಡಿ ಕತ್ತರಿಸಿ' ಹಾಡಿರುವ ಕಲೆ ಇದ್ದರೆ ಅದು ಜಾನಪದ.

ಬೆಳಗಿನಿಂದ ಪ್ರಾರಂಭವಾದರೆ ಒಂದಲ್ಲ ಒಂದು ರೀತಿಯಲ್ಲಿ ಸಂಜೆಯವರೆಗೆ ಮನದಾಳದಿಂದ ಮತ್ತೊಂದು ಮನಕ್ಕೆ ಮುಟ್ಟಿ ಬಿಂಬಿಸುತ್ತ ಬಂದಿದೆ ಜಾನಪದ. ನಮ್ಮ ಜನಪದರು ಒಂದು ಗಾದೆ ಹೇಳುತ್ತಾರೆ, ''ಬೇರು ಗಟ್ಟಿಯಾಗಿರೋ ತನಕ ಮರ ಗಟ್ಟಿ'' ಅಂತ. ಎಂದರೆ ನಮ್ಮ ಜನ ತಮ್ಮ ಊರಿನ ಕಲೆ, ತಮ್ಮ ಕಲೆ ಎಂದು ತಿಳಿದು ಬೆಳೆಸಿಕೊಂಡು ಉಳಿಸಿಕೊಂಡು ಬರುವವರೆಗೂ ಜಾನಪದ ಉಳಿದಿರುತ್ತದೆ ಎಂದರ್ಥ. ಆದರೆ ಜಾನಪದ ಅಲ್ಲಲ್ಲಿ ಸ್ವಲ್ಪ ತಾಜಾತನ ಕಳೆದುಕೊಂಡಿದೆ ಎಂಬುದೂ ನಿಜವೇ.

ಜಾನಪದ ಈ ನಾಡಿನ ಸಂಪತ್ತು, ಸಂಸ್ಕೃತಿ. ಇದರ ತಿರುಳು ತಿಳಿಯದೇ ಜಾನಪದವನ್ನು ತಿರಸ್ಕಾರ ಮಾಡುವುದೇ ಆದರೆ ಅದು ಜನ್ಮ ಕೊಟ್ಟ ತಾಯಿಯನ್ನು ಮರೆತ ಹಾಗೆ ಎಂದು ಹಿರಿಯರು ಹೇಳಿದ್ದಾರೆ. 'ಮನದ ಮಾತೆ ಪದವಾದವು', ಎಂದರೆ ಮನದೊಳಗೆ ಕಾಡುತ್ತಿರುವ, ಬೇಡುತ್ತಿರುವ, ಆಸೆ, ದುಃಖ ದುಮ್ಮಾನಗಳನ್ನು ಒಬ್ಬ ಹೆಣ್ಣು ಮಗಳು ಅತ್ತೆಗೆ, ಮಾವನಿಗೆ, ಅತ್ತಿಗೆಗೆ, ಅಣ್ಣನಿಗೆ, ಹೇಳಿಕೊಳ್ಳಲಾಗದ ಸಂದರ್ಭವನ್ನು ತನ್ನ ಹಾಡುಗಳ ಮುಖಾಂತರ, ಗಾದೆ, ಒಗಟು ಮುಖಾಂತರ ಕಟ್ಟುತ್ತಾ ಹೇಳುತ್ತಾ ಹೋಗುತ್ತಾಳೆ ಎಂದರ್ಥ.

ಇವುಗಳಲ್ಲಿ ಕೆಲವನ್ನು ಹೀಗೆ ವಿಂಗಡಿಸಬಹುದು :

- ಜೀವನದ ಪಾಡೆ ಹಾಡು
- ಅಂತರಂಗದ ಆತಂಕಗಳೇ ಹಾಡು
- ಅಕ್ಷರದ ಅಕ್ಕರೆಯೇ ಇಲ್ಲದವರಿಂದ ಹಾಡು
- ಜನಾಂಗಗಳ ಜೀವಾಳ ಸಂಸ್ಕೃತಿ ಜಾನಪದ
- ವೇದಕ್ಕೂ ಮಿಗಿಲಾದದ್ದು ಜಾನಪದ
- ಆ ಕ್ಷಣದ ಆನಂದ-ನೋವಿನಲ್ಲಿ ಅರಳಿದಂಥವು ಜಾನಪದ

''ಜಾನಪದ ಅನಕ್ಷರಸ್ಥರ ಅಮರ ಕಾವ್ಯ ಹಾಗೂ ಕಲೆಗಳು'' ಬೆಳೆದುಬಂದ ದಾರಿಯೇ ಕೆಲವರಿಗೆ ಗೊತ್ತಿಲ್ಲ. ಆ ಗೊತ್ತಾಗಿಸುವ ಕೆಲಸವನ್ನು ಗೊತ್ತಿರುವವರು ಇವತ್ತಿನ ಯುವಪೀಳಿಗೆಗೆ ತಿಳಿತಿಳಿಯಾಗಿ ತಿಳಿಸಿ ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಅವರಿಗೆ ತಿಳಿದದ್ದೇ ಜಾನಪದ, ಹಾಡಿದ್ದೆ ಜಾನಪದ, ಕುಣಿದದ್ದೆ ಜಾನಪದ, ಹುಟ್ಟಿದ್ದೆ ಜಾನಪದ, ಉಂಡಿದ್ದೆ ಜಾನಪದ ಎನ್ನುವಂಥ ಸ್ಥಿತಿ ಉದ್ಭವವಾಗುತ್ತದೆ. ಜಾನಪದ ಕಲೆ ಅಪಾಯದ ಅಂಚಿನಲ್ಲಿದೆ ಎಂಬುದನ್ನು ನಾವೆಲ್ಲರೂ ಅರಿಯಬೇಕು. ಇಂತಹ ಅಪಾಯದಿಂದ ಜಾನಪದವನ್ನು ಪಾರುಮಾಡಬೇಕು. ಇದು ನಿನ್ನೆ ಮೊನ್ನೆಯದಲ್ಲ. ಜನರು ಎಂದು ಹುಟ್ಟಿದರೋ, ಅಂದಿನಿಂದಲೂ ಜಾನಪದವೂ ಜೀವನದ ಭಾಗವಾಗಿ ಬೆಳೆದುಬಂದಿದೆ ಎಂಬುದನ್ನು ಇವತ್ತಿನ ಜನಕ್ಕೆ ತಿಳಿಸಬೇಕಾದ ಕರ್ತವ್ಯವು ನಮ್ಮದಾಗಿದೆ. ಪ್ರೀತಿ, ಸಂಬಂಧ, ಬಾವಣಿಕೆ, ಗೌರವ, ನಾಚಿಕೆ, ಭಯ ಎಂಬಂಥವು ನಮ್ಮ ಜಾನಪದದ ನಂಬಿಕೆಗಳಿಂದ ಹುಟ್ಟಿವೆ ಎಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಮಾತಿನಿಂದ ಹಾಡಿಗೆ, ಹಾಡಿನಿಂದ ಕಿವಿಗೆ, ಕಿವಿಯಿಂದ ಮನಸ್ಸು, ದೇಹಗಳಿಗೆ ಮುದ ನೀಡುತ್ತದೆ ಜಾನಪದ.

ಸಂಪ್ರದಾಯದ ಮೂಲವೇ ನಮ್ಮ ಗ್ರಾಮ ಸಂಸ್ಕೃತಿಯಲ್ಲಿದೆ. ಶಿಕ್ಷಣಕ್ಕೂ, ದೇವರ ಭಕ್ತಿಗೂ ನಮ್ಮ ಜಾನಪದ ತಾಯಿಬೇರು. ಜೀವನದ ಹಾಡೆ ಜಾನಪದ. ಕಾಡು ಮಲ್ಲಿಗೆಯಂತೆ ಜಾನಪದ ಪರಿಮಳ ನಾಡೊಳಗೆ ಹಬ್ಬಿ ಘಮಘಮಿಸುತ್ತ ರಾಷ್ಟ್ರದ ಉದ್ದಕ್ಕೂ, ಅಂತರರಾಷ್ಟ್ರೀಯ ಮಟ್ಟದಲ್ಲೂ ಹಬ್ಬಿ ತನ್ನ ಸೊಬಗನ್ನು ಸೂಸಿದೆ.

''ಹೊಟ್ಟೆಯೊಳಗಿನ ಹಾಡ ಬಿಟ್ಟುಬಿಡಲೇ ಹಾಡಿ'' ಎಂದು ಮುಗ್ಧ ಜನಪದರು ಹೇಳುತ್ತಾರೆ. ಇವುಗಳನ್ನು ಸುಮ್ಮನೆ ಬಿಟ್ಟುಬಿಡಲು ಸಾಧ್ಯವಾಗುವುದಿಲ್ಲ. ಬಿಟ್ಟರೆ ಬಾಯಿ ಹಿಂಗುತ್ತದೆ ಎಂಬ ಮಾತಿದೆ.

ನಾಡಿನ ಪದಗಳು ಹಳ್ಳಿ ಮುಕ್ಕರು ಎಂದು
ಆಡಿ ನಗುವ ಜಾಣ ನೀ ಕೇಳೋ – ಈ ಪದ
ವೇದಕ್ಕೆ ಮುನ್ನಾದ ಪದಗಳು.

ಜಾನಪದ ವೇದಕ್ಕೂ ಮಿಗಿಲಾದ್ದು ಮತ್ತು ಎತ್ತರವಾದ್ದು ಎಂಬ ತ್ರಿಪದಿಯ ತಿರುಳನ್ನು ಈ ಮೇಲಿನ ಮೂರು ಸಾಲುಗಳು ಬಿಂಬಿಸುತ್ತವೆ.

ಜಾನಪದ ಎಂದರೆ ಗ್ರಾಮ, ಗ್ರಾಮ ಎಂದರೆ ಪ್ರಕೃತಿ. ಈ ಪ್ರಕೃತಿಯ ನಡುವೆ ಆರಾಧಕರಾಗಿರುವವರು ನಮ್ಮ ಹಳ್ಳಿಯಲ್ಲಿ ಅರಳಿಸಿದ ಕಲಾವಿದರು. ಸಮಯೋಚಿತ ಸಂದರ್ಭಕ್ಕೆ ಅನುಗುಣವಾಗಿ ಪದವಾಗಲಿ, ಕುಣಿತವಾಗಲಿ, ಗಾದೆಯಾಗಲಿ, ಒಗಟಾಗಲಿ, ಬೈಗುಳವಾಗಲಿ ಅದನ್ನೂ ಕಟ್ಟಿ ಹೇಳಿ, ಕುಣಿದು ಕುಪ್ಪಳಿಸಿ ಜನರನ್ನು ಒಂದುಗೂಡಿಸುವ ಶಕ್ತಿ ಜಾನಪದಕ್ಕಿದೆ.

ಕಟ್ಟು ಬೀಸುವ ನಾರೇರು ದನಿ ಎತ್ತಿ
ಹಾಡಿದರೆ ಸ್ವರ್ಗ ಇಳಿದಿತ್ತೆ – ಕೈಲಾಸ
ಬಿಟ್ಟು ಬಂದಾನೆ ಮಾದೇವ.

ಕುಟ್ಟಿ ಬೀಸುವ ಹೆಣ್ಣುಮಕ್ಕಳು ದನಿ ಎತ್ತಿ ಹಾಡಿದರೆ ಸ್ವರ್ಗವೆ ಇಳಿದಂತೆ ಆ ಮಾದೇಶ್ವರನು ಇಲ್ಲಿಗೆ ಇಳಿದು ಬಂದಿದ್ದಾನೆ ಎಂಬ ಕಲ್ಪನೆಯ ಕಲಾಲೋಕವನ್ನೇ ಜಾನಪದದಲ್ಲಿ ಸೃಷ್ಟಿಸಿದ್ದಾರೆ.

ಬಾಯಿಮಾತಿನ ಬಳಕೆ ಹಾಡಾಗಿದೆ. ನಮ್ಮ ಹಳ್ಳಿಹಳ್ಳಿಯ ಗಂಧರ್ವರಿಂದ, ಇವುಗಳನ್ನು ಜನಪ್ರಿಯ ಪ್ರಾಚೀನ ನಡೆನುಡಿಗಳು ಎಂದು ಕರೆಯುವ ಬದಲು, ೧೮೪೬ರಲ್ಲಿ ಥಾಮ್ಸ್ ಅವರು ಫೋಕ್‌ಲೋರ್ ಎಂಬ ಆಂಗ್ಲಭಾಷೆಯ ಪದ ತಂದರು. ನಮ್ಮ ನೈಜ, ಹಳೆಯ ರೂಢಿಯೇ ಜಾನಪದ. ಜೀವನದ ಅಂತರ ಸೆಲೆಯೇ ಜಾನಪದ. ಸರ್ವಾಂಗೀಣ ಸೌಂದರ್ಯ ಜಾನಪದ. ''ಆನಂದದೊಳಗೆ ಹುಟ್ಟಿ ದುಃಖದೊಂದಿಗೆ ಮುಳುಗುತ್ತದೆ'' ಜಾನಪದ.

ಜೀವನ ದುಡಿಮೆಯೊಂದಿಗೆ ಝೇಂಕರಿಸುತ್ತಾ ಸ್ವಯಂ ಸ್ಫೂರ್ತಿಯಿಂದ ಉದಯವಾದ ಜಾನಪದ ಸಾಮಾನ್ಯ ಶ್ರಮ ಸಂಸ್ಕೃತಿಯ ಕೆಳವರ್ಗಗಳ ಪರಂಪರೆಯ ಪ್ರತಿಬಿಂಬವಾಗಿದೆ. ಇಂತಹ ಜಾನಪದವನ್ನು ಉಳಿಸಿ ಬೆಳೆಸುವ ಬಗೆ ಹೇಗೆ ಎಂಬುದೇ ಒಂದು ದೊಡ್ಡ ಸವಾಲಾಗಿ ನಮ್ಮ ಮುಂದಿದೆ. ಇವತ್ತಿನ ಸಂದರ್ಭದ ಆಧುನಿಕ ಬದುಕಿನಲ್ಲಿ ಯಂತ್ರವೇ ಪ್ರಧಾನ, ಮನುಷ್ಯನಲ್ಲ ಎಂಬ ಸ್ಥಿತಿ ಉಂಟಾಗಿದೆ. ಇಂತಹ ಸನ್ನಿವೇಶದಲ್ಲಿ ಜಾನಪದ ಕಷ್ಟದ ದಿನಗಳನ್ನು ಎದುರಿಸಬೇಕಿದೆ.

ದೈಹಿಕ ಶ್ರಮ ಇಲ್ಲವೆಂದ ಮೇಲೆ ನಾಟಿ ಪದ ಹುಟ್ಟುವುದೆಂತು? ರಾಗಿ ಬೀಸೊ ಪದ, ರೈತರ ಸುಗ್ಗಿಪದಗಳು ಹೇಗೆ ತಾನೆ ಹುಟ್ಟಿಬಂದಾವು? ಊರು ಕೇರಿಗಳಲ್ಲಿ ಚಪ್ಪರ ಹಾಕಿದ ಮದುವೆಯೇ ಇಲ್ಲವೆಂದ ಮೇಲೆ ಸೋಬಾನವೆಲ್ಲಿ? ಜನರಿಗೆ ಕೃತಕ ಬದುಕೇ ಒಂದು ಮೋಜಾಗುತ್ತಿರುವ ಸಂದರ್ಭದಲ್ಲಿ ಸಂಪ್ರದಾಯ ಭಕ್ತಿ ಗೀತೆಗಳಿಗೆಲ್ಲಿದೆ ಸ್ಥಾನ?

ಅಂದು ಸೊಸೆಯಾಗಿ ಹೋದ ಹೆಣ್ಣು ಮಗಳು ತನ್ನ ತವರೂರಿನ ಸಂಪ್ರದಾಯದ ಘನತೆ ಗೌರವವನ್ನು ಗಂಡನ ಊರಿನಲ್ಲಿ ಬಿತ್ತುವಾಗ ಜಾನಪದವನ್ನು ತನ್ನ ಜೊತೆಯಲ್ಲೆ ಕೊಂಡುಹೋಗಿ ಬಿತ್ತುವ ವಾಡಿಕೆ ಇತ್ತು. ಈಗ ಮಾಯವಾಗಿದೆ. ಕಾಡಿನಲ್ಲಿ ಹೂವರಳಿ, ಹಣ್ಣಾಗಿ ಹಾಗೆ ಒಣಗಿ, ಬೀಜವಾಗಿ ಮತ್ತೆ ಮರವಾದಂತೆ, ನಮ್ಮ ಜಾನಪದ ಮತ್ತೆ ಹೊಸ ರೂಪ ಪಡೆಯಬೇಕಾಗಿದೆ, ಬೆಳೆಯಬೇಕಾಗಿದೆ.

ಹಳ್ಳಿಯಲ್ಲಿ ಅಗೋಚರವಾಗಿ ಅಡಗಿದ್ದ ಜಾನಪದದ ಸೊಗಡನ್ನು ನಗರಕ್ಕೆ ಬಿತ್ತಿ ಬೆಳೆಯಲಾಗಿದೆ. ಈಗ ಜಾನಪದ ತನ್ನ ತಾಜಾತನ ಕಳೆದುಕೊಂಡು ಕಸಿ ಜಾನಪದವಾಗುತ್ತಿದೆ. ಜಾನಪದ ಹುಟ್ಟಿ ಬೆಳೆದದ್ದು ಹೇಗೆ ಎಂಬ ಪ್ರಶ್ನೆ ಈಗ ಯಾರಿಗೂ ಬೇಕಿಲ್ಲ. ಅದಕ್ಕೆ ಉತ್ತರ ಕಂಡುಕೊಳ್ಳಲು ಯಾರಿಗೂ ಸಂಯಮವಿಲ್ಲ. ಜನರಿಗೆ ಜಾನಪದವನ್ನು ಹಾಡಿ, ಕುಣಿದು, ಬಹುಮಾನ ಗಿಟ್ಟಿಸಿಕೊಳ್ಳುವುದೇ ಒಂದು ಮೋಜಿನ ಕೆಲಸ.

ಬೇರೆ ಬೇರೆ ದೇಶಗಳಲ್ಲಿ, ಫಿಲಿಪ್ಪೀನ್ಸ್, ಥ್ಯಾಲ್ಯಾಂಡ್, ಫಿನ್‌ಲ್ಯಾಂಡ್, ಚೈನಾ ಮತ್ತು ಯುರೋಪಿಯನ್ ರಾಷ್ಟ್ರಗಳಲ್ಲಿ ಆಯಾ ಗ್ರಾಮ ಸಂಸ್ಕೃತಿ ಕುರಿತ ಜಾನಪದ ವಿಶ್ವವಿದ್ಯಾಲಯಗಳಿವೆ ಮತ್ತು ಸಾಂಸ್ಕೃತಿಕ ಕೇಂದ್ರಗಳಿವೆ. ನಮ್ಮ ದೇಶದಲ್ಲಿ ಸಮಗ್ರ ಜಾನಪದ ಕೇಂದ್ರ ಇಲ್ಲ. ನಮ್ಮ ಕರ್ನಾಟಕದಲ್ಲಾದರೂ ಇಂತಹ ಸಮಗ್ರವಾದ, ಅರ್ಥಪೂರ್ಣವಾದ, ನಮ್ಮ ಹಳ್ಳಿಯ ಸಂಸ್ಕೃತಿಯನ್ನು ಪ್ರತಿನಿಧಿಸುವಂತಹ ಒಂದು ಜಾನಪದ ಕೇಂದ್ರವಿಲ್ಲ. ಇದು ನಿಜಕ್ಕೂ ಶೋಚನೀಯ. ನಮ್ಮ ಕರ್ನಾಟಕದಲ್ಲಿ ತಾಜಾ ಕಲೆಗಳಾದ ಜಾನಪದ ತರಬೇತಿ ಸಂಸ್ಥೆಗಳು ಎಲ್ಲಿವೆ? ಇಂತಹ ಸ್ಥಿತಿ ಇರುವಾಗ ಜಾನಪದದ ಉಳಿವು, ಅಭಿವೃದ್ಧಿ ಹೇಗೆ ತಾನೆ ಸಾಧ್ಯ?

ಇಂದು ಜಾನಪದ ಅಕಾಡೆಮಿ ಇಂತಹ ಸಮಗ್ರ ಜಾನಪದ ಸಂಗ್ರಹಕೇಂದ್ರವನ್ನು ಸ್ಥಾಪಿಸುವ ಅಗತ್ಯವಿದೆ. ಸಾಹಿತಿಗಳು, ಕವಿಗಳು ಈಗಲೂ ನಮ್ಮ ಮುಂದೆ ಪುಸ್ತಕಗಳಲ್ಲಿ ಉಳಿದಿದ್ದಾರೆ. ಆದರೆ ಎಷ್ಟೋ ಜನ ಜಾನಪದ ದಿಗ್ಗಜರು ಕಣ್ಮರೆಯಾಗಿ ಹೋಗಿ ಅಂತಹವರ ಬದುಕು ಕುರಿತ ಜೀವನ ಚರಿತ್ರೆಗಳೇ ಇಲ್ಲ. ಈಗ ಜಾನಪದದ 'ಜೀವನ ಚರಿತ್ರೆ' ರಚಿಸಬೇಕಿದೆ. ಯುವಕರ ಜಾನಪದ ತರಬೇತಿ ಕೇಂದ್ರ ನಿರ್ಮಾಣವಾಗಬೇಕಿದೆ. ನಮ್ಮ ಕರ್ನಾಟಕದಲ್ಲಿನ ಜಾನಪದದ ವಿವಿಧ ಕಲಾ ಪ್ರಕಾರಗಳಲ್ಲಿ ತರಬೇತಿ ನೀಡಬೇಕಿದೆ.



**ಅಪ್ಪಗೆರೆ ತಿಮ್ಮರಾಜು**
ಜಾನಪದ ಗಾಯಕರು, ನಂ. ೨೮, ೧೦ನೇ ಮುಖ್ಯರಸ್ತೆ
೪ನೇ ಅಡ್ಡರಸ್ತೆ, ಹಂಪಿನಗರ, ವಿಜಯನಗರ
ಬೆಂಗಳೂರು - ೫೬೦ ೦೪೦

**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪುರಭವನದ ಆವರಣ, ಶ್ರೀ ಜಯಚಾಮರಾಜೇಂದ್ರ ವೃತ್ತ, ಮೈಸೂರು - ೫೭೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರಕಾರಿ ಉರ್ದು ಶಾಲೆ ಆವರಣ, ಮುಖ್ಯ ರಸ್ತೆ, ಐ. ಬಿ. ಎದುರು, ಚಿತ್ರದುರ್ಗ - ೫೭೭ ೫೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಹಳೇ ಗ್ರಂಥಾಲಯ ಆವರಣ, ಜಗತ್ ವೃತ್ತ, ಸ್ಟೇಷನ್ ರಸ್ತೆ, ಗುಲಬರ್ಗಾ - ೫೮೪ ೧೦೨



## ಬೆತ್ತಲೆ ರಸ್ತೆಯ ಕನಸಿನ ದೀಪ (ಕೈಫಿ ಆಜ್ಮಿ ಕವಿತೆಗಳು)

*ಅನುವಾದ : ವಿಭಾ*

**ಪುಟ : xviii + ೬೨ = ೮೦**

**ಬೆಲೆ : ರೂ. ೪೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

ಭಾರತದ ಕ್ರಾಂತಿಕಾರಿ ಕವಿಯಾಗಿದ್ದ ಕೈಫಿ ಆಜ್ಮಿ ಬದುಕಿನಲ್ಲಿ ತುಂಬ ಕಹಿಯನ್ನುಂಡವರು. ಅವರ ಬದುಕಿನ ಉದ್ದಕ್ಕೂ ಬತ್ತಲೊಲ್ಲದ ಬುಗ್ಗೆಯಂತೆ, ಜೊತೆಗಾರನಂತೆ ಹರಿದು ಬಂದ ನೋವಿನ-ಹತಾಶೆಯ-ಸಂಕಟದ ಮಿಶ್ರಣವೊಂದು ಅವರ ಕವಿತೆಗಳಲ್ಲಿ ಧ್ವನಿಸುತ್ತದೆ. ಭಾವನೆಗಳ ತೀವ್ರ ಹೊಡೆತಕ್ಕೆ ನಲುಗಿದ್ದ ಅವರು ಮನಸ್ಸನ್ನು ಹಗುರ ಗೊಳಿಸಲು ಕಾವ್ಯದ ಮೊರೆಹೋದರು. ಹಿಂದಿ ಸಿನಿಮಾಗಳಿಗೂ ಹಾಡುಗಳನ್ನು ಬರೆದರು. ಎಡಪಂಥೀಯ ವಿಚಾರವಾದಿಯಾಗಿದ್ದ ಕೈಫಿ ಅನೇಕ ಬಂಡಾಯ ಚಳುವಳಿಗಳಲ್ಲಿ ಭಾಗಿಯಾಗಿದ್ದು ಕ್ರಾಂತಿಕಾರಿ ಭಾಷಣಗಳಿಗೆ ಹೆಸರಾಗಿದ್ದರು. ಇವರ ಕಾವ್ಯಕ್ಕೆ ಮಾರುಹೋದವರು ಶ್ರೀಮತಿ ವಿಭಾ. ಕೈಫಿ ಕವನಗಳನ್ನು ಆಸ್ಥೆಯಿಂದ ಸಂಗ್ರಹಿಸಿ ಕೇವಲ ಅನುವಾದ ಮಾತ್ರವಲ್ಲ, ಕನ್ನಡದೊಂದಿಗೆ ಅನುಸಂಧಾನಗೊಳಿಸಿದ್ದಾರೆ. ಇಲ್ಲಿ ಗಜಲ್, ಬಂಡಾಯಗೀತೆ, ಭಗ್ನಹೃದಯ ಗೀತಗಳಿವೆ.



## ಯಂತ್ರಗಳನ್ನು ಕಳಚೋಣ ಬನ್ನಿ (ಸಮಕಾಲೀನ ಸಂಸ್ಕೃತಿ ವಿಮರ್ಶೆ)

ಪ್ರಸನ್ನ

**ಪುಟ : ೨೩೧ + ೪ ಬೆಲೆ : ರೂ. ೧೪೦**

**ಒಂಟದನಿ ಪ್ರಕಾಶನ,** ಕವಿಕಾವ್ಯ ಟ್ರಸ್ಟ್, ಸಾಗರ ತಾ. ಹೆಗ್ಗೋಡು - ೫೭೭ ೪೧೭

ನಾವಿಂದು ಯಂತ್ರ ನಾಗರಿಕತೆಯಲ್ಲಿ ಕಳೆದುಹೋಗಿದ್ದೇವೆ. ಮನುಷ್ಯ ಯಂತ್ರಮಾನವನನ್ನೇ ಸೃಷ್ಟಿಸಿಬಿಟ್ಟಿದ್ದಾನೆ. ಒಂದು ಹಂತದವರೆಗೆ ಯಂತ್ರವನ್ನು ಗೆಳೆಯನಂತೆ ಸಹಿಸಬಹುದು. ಆದರೆ ಹಾವಳಿಯ ರೂಪವನ್ನು ತಳೆದ ಯಂತ್ರವ್ಯವಸ್ಥೆ ನಮಗೆ ಮುಳುವಾದಂತೆಯೇ. ಎಲ್ಲ ಕ್ಷೇತ್ರಗಳಲ್ಲೂ ಯಂತ್ರದ ಪ್ರವೇಶವಾಗಿದ್ದು ಮನುಷ್ಯನ ಕೈಗಳಿಗೆ ದುಡಿಮೆ ಇಲ್ಲವಾಗಿ, ಆತ ಸೋಮಾರಿ ಇಲ್ಲವೇ ಸಮಾಜಘಾತುಕ ಶಕ್ತಿಯಾಗುತ್ತಿದ್ದಾನೆ. ಇದು ಇತ್ತೀಚಿನ ಹೊಸ ಯುಗದ ಆತಂಕ ಮತ್ತು ತಲ್ಲಣ. ಯಂತ್ರಗಳ ಅವಲಂಬನೆ ಕನಿಷ್ಠಮಟ್ಟಕ್ಕಿಳಿಸಬೇಕೆಂಬುದೇ ಈ ಪುಸ್ತಕದ ಆಶಯ. ಇಲ್ಲಿನ ಮಾತೊಂದು ಗಮನ ಸೆಳೆಯುತ್ತದೆ: ''ನಾವು ಯಂತ್ರಗಳನ್ನು ಕಳಚಬೇಕಾಗಿದೆ. – ಕಳಚಬೇಕೇಕೆ ? ಸುಧಾರಿಸಬಹುದಲ್ಲವೆ ? ನಿಜ, ಯಂತ್ರಗಳನ್ನೇನೊ ಸುಧಾರಿಸಬಹುದು. ಯಂತ್ರಗಳ ರುಚಿ ಕಂಡ ಮನುಷ್ಯನನ್ನು ಸುಧಾರಿಸಲಾರೆವು.'' ವರವಾಗಿ ಬಂದು ಶಾಪವಾಗಿ ಕಾಡುವ ಕೆಲವು ಯಂತ್ರಗಳನ್ನಾದರೂ ಕಳಚಿಬಿಡೋಣ.

## ಮಣ್ಣಿಂದ ಎದ್ದವರು (ಕಾದಂಬರಿ)

*ಕುಸುಮಾ ಶಾನುಭಾಗ*

**ಪುಟ : ೧೩೨** ಬೆಲೆ : ರೂ. ೮೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ಈ ಸಮಾಜದಲ್ಲಿ ತುಳಿತವು ಎಷ್ಟು ಬಲವಾಗಿರುತ್ತದೆಂದರೆ ತುಳಿದೂ ತುಳಿದೂ ಮಣ್ಣಿನೊಳಗಡೆ ಸೇರಿಸಿಬಿಡುವಷ್ಟು! ಬಲಿಯನ್ನೇ ಪಾತಾಳಕ್ಕೆ ತುಳಿದ ಕಥೆಯಿಲ್ಲವೇ, ಇನ್ನು ಅಬಲೆ ಮಹಿಳೆ ಪಾಡೇನು ? ಆದರೆ ಈ ಕಾದಂಬರಿಯ ಹೆಣ್ಣುಮಗಳು ಕಾವೇರಿ ಹಾಗೆ ಬಿಟ್ಟ. ಹಾಗೆಲ್ಲ ಮಣ್ಣಿನೊಳಗೆ ಸೇರಿಹೋಗುವಂಥವಳಲ್ಲ. ಮಣ್ಣೊಳಗಿಂದ ಮೊಳಕೆ ಒಡೆದು ಚಿಗುರಿ ಹೊರಬರುವಂತೆ ಎಷ್ಟೇ ತುಳಿದರೂ ಮೇಲೆದ್ದು ಬಂದು ತನಗೆ ಬೇಕಾದಂತೆ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಇಲ್ಲಿನ ಕಥಾಹಂದರ ಸುಮಾರು ನೂರು ವರ್ಷಗಳಷ್ಟು ಹಳೆಯದು. ಹಿಂದಿನ ಕಾಲಕ್ಕೆ ಸಂಪ್ರದಾಯಸ್ಥರ ಮನೆ ಹೆಣ್ಣು ಒಬ್ಬಂಟಿಯಾಗಿ ಓಡಾಡುವುದು, ವ್ಯವಹಾರದಲ್ಲಿ ತಲೆತೂರಿಸುವುದು ಹೆಚ್ಚೇಕೆ, ಚಾವಡಿಯಲ್ಲಿ ಬಂದು ಕುಳಿತುಕೊಂಡರೂ ಸಹ ಎಲ್ಲರ ಬೆರಳು ಮೂಗಿನ ಮೇಲೇರುತ್ತಿತ್ತು. ಹೆಂಗಸರು ಮಾತನಾಡುವ ಧೈರ್ಯ ವಹಿಸದ ಹಗೆಬಿರಹವನ್ನು ಹಳಿದುಕೊಂಡು ಮೌನವಾಗಿದ್ದು ಎಲ್ಲವನ್ನೂ ಸಹಿಸುತ್ತಿದ್ದ ಕಾಲ. ಅಂಥ ಕಾಲದ ಅನಾವರಣವೊಂದನ್ನು ಶ್ರೀಮತಿ ಕುಸುಮಾ ಶಾನುಭಾಗ ಮಾಡಿದ್ದಾರೆ. 'ಮದುವೆಯೊಂದು ಆದರೆ ಎಲ್ಲವೂ ಸುಸೂತ್ರ' ಎಂಬುದು ಎಲ್ಲರಿಗೂ ಅನ್ವಯಿಸುವ ಮಾತಲ್ಲ.



## ನಿರಕ್ಷರಿಯ ಆತ್ಮಕತೆ

*ಸುಶೀಲಾ ರಾಯ್; ಕನ್ನಡಕ್ಕೆ : ಜಿ. ಕುಮಾರಪ್ಪ*

**ಪುಟ : ೮೮** ಬೆಲೆ : ರೂ. ೫೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಅಕ್ಷರಾಭ್ಯಾಸ ಪ್ರಾರಂಭಿಸಿ ಓದುಬರಹ ಕಲಿತು, ತನ್ನ ಆತ್ಮಚರಿತ್ರೆಯನ್ನು ಬರೆದ ಮಹಿಳೆ ಸುಶೀಲಾ ರಾಯ್. ಕಪ್ಪುಬಣ್ಣದವಳು, ಅಕ್ಷರಜ್ಞಾನವಿಲ್ಲದವಳು ಎಂಬಂಥ ಅದೆಷ್ಟೋ ಕನಿಷ್ಠ ಅರ್ಹತೆಗಳೊಂದಿಗೆ ಗಂಡನ ಮನೆ ಸೇರಿದ ಸುಶೀಲಾ ರಾಯ್‌ಗೆ ಅಲ್ಲಿ ಬಂಜೆ ಎನ್ನುವ ಹೊಸ ಕಳಂಕವೊಂದು ತಗುಲಿಬಿಟ್ಟಿತು. ಸರಿ, ಕತ್ತೆ ಚಾಕರಿಗೆ ಅತ್ತೆಮನೆಯಲ್ಲಿ ಆಳೊಂದು ಸಿಕ್ಕಂತಾಯಿತು. ಈ ಮಧ್ಯೆ ಗಂಡ ಮರು ಮದುವೆಗೆ ಸಿದ್ಧನಾಗತೊಡಗಿದಾಗ ಕೀಳರಿಮೆಯಿಂದ ಕುಸಿದರೂ ಬಾಳಿನ ದುರ್ದಿನಗಳನ್ನು ಧೈರ್ಯದಿಂದ ಎದುರಿಸಿದರು. ಆಧುನಿಕ ವೈದ್ಯಕೀಯದ ನೆರವಿನಿಂದ ಬಂಜೆಯೆಂಬ ಅಪವಾದದಿಂದ ಮುಕ್ತರಾಗಿ ಮಕ್ಕಳನ್ನು ಪಡೆದ ಅವರು ತಮ್ಮ ಬಾಳನ್ನು ಹಿಂತಿರುಗಿ ನೋಡಿದಾಗ ಈ ಆತ್ಮಕಥೆ ಸಿದ್ಧವಾಯಿತು. ಆತ್ಮೀಯರೊಂದಿಗೆ ತನ್ನ ಕಥೆಯನ್ನು ಹೇಳಿ ಹಗುರವಾಗುವ ಶೈಲಿ. ನೊಂದವರು ಚಿಗುರಿನಷ್ಟು ಸುಖಸಿಕ್ಕಾಗ ಬೆಟ್ಟದಷ್ಟು ಕಷ್ಟಗಳನ್ನು ಮರೆಯುತ್ತಾರೆ. ಬಂಗಾಳಿಯಲ್ಲಿದ್ದ ಈ ಪುಸ್ತಕವನ್ನು ಓದಿ ಅನುವಾದಕ್ಕಾಗಿ ಆಯ್ಕೆಮಾಡಿದ ನಂತರ ಶ್ರೀ ಜಿ. ಕುಮಾರಪ್ಪ ಅವರಿಗೆ ತಿಳಿದದ್ದು ಈ ಕಥೆ ತಮಗೆ ಇಪ್ಪತ್ತು ವರ್ಷಗಳಿಂದ ಪರಿಚಯ ಇರುವ ವ್ಯಕ್ತಿಯ ಪತ್ನಿಯದೆಂದು !

## ನೋವು ತುಂಬಿದ ಬದುಕು (ಆತ್ಮಕತೆ)

*ಬಂಗಾಳಿ ಮೂಲ : ಬೇಬಿ ಹಾಲ್ದಾರ್; ಕನ್ನಡಕ್ಕೆ : ಜಿ. ಕುಮಾರಪ್ಪ*

**ಪುಟ : ೧೪೮** ಬೆಲೆ : ರೂ. ೬೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧



ಪುಟ್ಟ ಹೆಣ್ಣು ಮಗಳು 'ಬೇಬಿ'ಯ ಕೈಗೆ ಹತ್ತು ಪೈಸೆಯನ್ನಿಟ್ಟು ಗಂಡು ಮಗುವನ್ನೆತ್ತಿಕೊಂಡು ಕಾಣೆಯಾಗುವ ತಾಯಿ, ಐದು ಮಕ್ಕಳಿದ್ದೂ ಮತ್ತೆ ಮದುವೆಯಾಗುವ ತಂದೆ, ಪತ್ನಿ ಹೆರಿಗೆಬೇನೆಯಿಂದ ನರಳುತ್ತಿದ್ದರೂ ಗಾಢ ನಿದ್ರೆಮಾಡುವ ಪತಿ – ಇವರೆಲ್ಲ ಬೇಬಿ ಹಾಲ್ದಾರಳ ಜೀವನದಲ್ಲಿ ಬಂದುಹೋದ ನಿರ್ಲಜ್ಜ ಪಾತ್ರಗಳು. ಪಿತಾ ರಕ್ಷತಿ... ಭರ್ತಾ ರಕ್ಷತಿ... ಎಂಬುದೆಲ್ಲ ಬೊಗಳೆ. ಹೆಣ್ಣು ಕೂಡ ಯಾರಾದರೂ ನನ್ನನ್ನು ಕಾಪಾಡಲಿ ಎಂಬ ಗುಂಗಿನಿಂದ ಹೊರಬಂದು, ಸ್ವತಂತ್ರ ವ್ಯಕ್ತಿತ್ವ ರೂಢಿಸಿಕೊಳ್ಳಬೇಕು. ಬೇಬಿ ಹಾಲ್ದಾರ್ ಅಪಾರ ವೇದನೆಯಿಂದ ಮೂವರು ಮಕ್ಕಳೊಂದಿಗೆ ಬದುಕನ್ನರಸಿ ದೆಹಲಿ ಸೇರುತ್ತಾಳೆ. ಅಲ್ಲಿ ಮನೆಗೆಲಸದ ಹೆಣ್ಣಾಗಿ, ಕೆಲಸದ ಮನೆಗಳನ್ನು ಬದಲಿಸುತ್ತಾ ಓರ್ವ ಸಜ್ಜನರ ಮನೆಗೆಲಸಕ್ಕೆ ಸೇರುತ್ತಾಳೆ. ಆಕೆಗೆ ಮಗಳಂತೆ ಆಶ್ರಯ ಪ್ರೋತ್ಸಾಹ ನೀಡಿ ಆತ್ಮಕಥನವನ್ನು ಬರೆಯಿಸುತ್ತಾರೆ ತಾತುಷ್ (ಹಿಂದಿ ಸಾಹಿತಿ ಪ್ರೇಮಚಂದ್ ಅವರ ಮೊಮ್ಮಗ). ಬೇಬಿ ಹಾಲ್ದಾರಳ ಈ ನಿಜ ಜೀವನದ ಕಥೆಯನ್ನು ಓದಿ...

– ಇಂದಿರಾಮೂರ್ತಿ

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

ಈ "ಕೃತಿಯು ೧೮೭೮ರಲ್ಲಿ ಬೆಂಗಳೂರಿನ ಲಷ್ಕರಿನಲ್ಲಿರುವ ಕ್ಯಾಕಟನ್ ಪ್ರೆಸ್ಸಿನಲ್ಲಿ ಛಾಪಿಸಲ್ಪಟ್ಟಿತ್ತು." ಗ್ರಂಥಕರ್ತನು "ಮಳವಳ್ಳಿಯಲ್ಲಿರುವ ತಾಲ್ಲೂಕು ಗೌರ್ನಮೆಂಟ್ ಸ್ಕೂಲ್ ಹೆಡ್‌ಮಾಸ್ಟರ್, ಲಕ್ಷ್ಮೀಪತ್ಯೆಯ್ಯ ನವರಿಂದ ವಿರಚಿಸಲ್ಪಟ್ಟಿತ್ತು" ಎಂದು ಹೇಳಿಕೊಂಡಿದ್ದಾನೆ. ಜೊತೆಗೆ ಕರ್ನಾಟಕ ದೇಶೀಯರಿಗೆ ಅತ್ಯಂತೋಪಯುಕ್ತ ವಾದಂಥಾ "ಗಣಿತಾರ್ಣವವೆಂಬ ಈ ಗಣಿತಶಾಸ್ತ್ರ ಪುಸ್ತಕವು, ಮೈಸೂರು ಶೀಮೆಯ ವಿದ್ಯಾಭ್ಯಾಸದ ಡೈರೆಕ್ಟರ್ ಹಜರತ್ ಬಿ. ಎಲ್. ರೈಸ್ ಸಾಹೇಬರವರಿಂದ ಅತ್ಯಂತ ಪ್ರೌಢ ಗಣಿತವೆಂಬ ಬಿರದನ್ನು ಹೊಂದಿದಂಥಾ ದ್ದಾಗಿಯೂ" ಇದೆ.

೩. ಅವುಗಳ ಅರ್ಥವಿವರಣೆಗಳು
೪. ಉದಾಹರಣೆಗಳು
೫. ನ್ಯಾಸಗಳು
೬. ಲಭ್ಯ ಉದಾಹರಣೆ
೭. ಉತ್ತರಗಳು

ಇವುಗಳನ್ನು ಕ್ರಮವಾಗಿಯೂ, ಶುದ್ಧವಾಗಿಯೂ, ಸುಬೋಧವಾಗಿಯೂ, ಸಾಂಗವಾಗಿಯೂ, ಸಂಪೂರ್ಣ ವಾಗಿಯೂ ನೀಡಲಾಗಿದೆ. ಸಂಖ್ಯೆ ೧ ರಿಂದ ೧೨ಕ್ಕೆ ಈ ಕೆಳಕಂಡ ಸಂಜ್ಞೆಗಳನ್ನು ಕವಿ ಬಳಸಿದ್ದಾನೆ.

೧=ವಸುಧೆ, ಸೋಮ, ಇಂದು, ಚಂದ್ರ, ಶಶಿ, ರೂಪ, ಏಕ, ಆದಿ, ಪ್ರಥಮ, ಮೃಗಧರ, ಇಳೆ, ಶಶಿಧರ, ಹಿಮಕರ, ಪೃಥ್ವಿ, ಭೂ, ಭೂಮಿ, ಕಾಶ್ಯಪೀ, ಕ್ಷಿತಿ.

೨ = ಚರಣ, ಬಾಹು, ವಕ್ಷ, ಕರ ಯುಗಳ, ದ್ವಂದ್ವ,

ಲೆಕ್ಕಿಸಿ ನೋಡಲ್ ಮನಸಿನ
ಕಕ್ಕುಲತೆಗಳಳಿದು ಬ್ರಹ್ಮಜ್ಞಾನಾಧಿಕ್ಯಮ
ದಕ್ಕುಮದರಿಂದ ಮೋಕ್ಷವು
ಶಿಕ್ಕುವದೇ ಫಲವು ಕೇಳು ಗಣಿತಜ್ಞರಿಗಂ

ಎಂದೂ ಗಣಿತದಿಂದ ಮೋಕ್ಷಫಲವೆನ್ನುತ್ತಾನೆ.

ತನ್ನ ಕೃತಿಗೂ ಮೊದಲು ಈ ಕನ್ನಡ ದೇಶದಲ್ಲಿ ಕೋಲೆನ್ಸೋ ಮುಂತಾದವರ ಚಿಕ್ಕಚಿಕ್ಕ ಕನ್ನಡ ಗಣಿತ ಪುಸ್ತಕಗಳಿದ್ದವು. ಅವು ಅಸುಪಯೋಗವಾಗಿ ಬಳಕೆಯಿಲ್ಲದೆ ಸಂಪೂರ್ಣಗಳಲ್ಲದೆ ಇದ್ದದ್ದರಿಂದ ಲೀಲಾವತೀ ಮತ್ತು ಇಂಗ್ಲಿಷ್ ಹಾಗೂ ಇತರ ದೇಶಭಾಷೆಗಳಲ್ಲಿರತಕ್ಕ ಗಣಿತಾಂಶ ಅತಿಶಯಗಳನ್ನು ಈ ಗಣಿತಾರ್ಣವದಲ್ಲಿ ರಚಿಸಿರುವುದಾಗಿ 'ಸೂಚನೆ'ಯಲ್ಲಿ ತಿಳಿಸಿರುತ್ತಾನೆ.

## ಹಳತು, ಹೊಸತು

# 'ಲಕ್ಷ್ಮೀಪತ್ಯೆಯ್ಯ'ನ 'ಗಣಿತಾರ್ಣವ'ದ ಸ್ಥೂಲ ಪರಿಚಯ

ವರಮುನಿಕಶ್ಯಪರನ್ವಯ
ಸುರವರದನ ಭಕ್ತನಾದ ಶಾಮಣ್ಣಾಖ್ಯನ
ವರಪುದರೋದ್ಭವನಾಗಿಹ
ವರಲಕ್ಷ್ಮೀಪತಿಯ ನಾಮಕೋರ್ವನುಮುದದಿಂ

ಇರುತಿಹನೀಗಲು ಯಡತೊರೆ
ಸರಕಾರದ ಪಾಠ ಶಾಲಾಧ್ಯಕ್ಷತೆಯೊಳಗೆ
ನರಿಯಗಣಿತಾರ್ಣವನೀ
ಪರಿಲಕ್ಷಣ ಕಂದಪದ್ಯರೂಪದೊಳೊರೆವಂ

ಎಂದು ಹೇಳಿರುವುದರಿಂದ ಕವಿಯು ಕಾಶ್ಯಪಗೋತ್ರದ, ವಿಷ್ಣು ಭಕ್ತನಾದ ಶಾಮಣ್ಣನ ಪುತ್ರನೆಂದೂ, ಅವನ ಹೆಸರು ಲಕ್ಷ್ಮೀಪತಿ ಎಂದೂ ತಿಳಿಯಬರುತ್ತದೆ. ತಾನು ಎಡತೊರೆ ಊರಿನ ಸರಕಾರಿ ಪಾಠಶಾಲೆಯಲ್ಲಿ ಅಧ್ಯಾಪಕ ನಾಗಿದ್ದೇನೆಂದು ಹೇಳಿಕೊಂಡಿದ್ದಾನೆ. ಇಷ್ಟರ ಹೊರತು ಕವಿ ತನ್ನನ್ನು ಕುರಿತು ಇನ್ನೇನನ್ನೂ ಹೇಳಿಕೊಂಡಿಲ್ಲ. ಈ ಗಣಿತಾರ್ಣವವನ್ನು ಚಾತುರ್ವರ್ಣೀಯರಾದ 'ಪಾರ್ವರು (=ಬ್ರಾಹ್ಮಣರು), ಬಾಹುಜರು (ಕ್ಷತ್ರಿಯರು), ವೈಶ್ಯರು, ಸಾರ್ವರು (=ಶೂದ್ರರು) ಯಾರು ಪರಿಶೀಲಿಸಿದರೂ ಅವರಿಗೆ ಶಾರದೆಯು ಒಲಿಯುವಳಂತೆ. ಇದು ಕೃತಿಕಾರನ ಅಭಿಪ್ರಾಯ.

ನವಗ್ರಹಮುನಿ ಸೋಮಶಕಂ
ನವಕರಯೋಗಾಖ್ಯ ವತ್ಸರದ ಜ್ಯೇಷ್ಠದ
ನವದ್ವಿಗುಣದ್ವಯಗೂಡಿದ
ದಿವಸದೊಳಿದು ಮುದ್ರೆಯಿಂದ ಪ್ರಕಟಿತವಾಯ್ತು

ಎಂದು ಚಮತ್ಕಾರದಿಂದ ೩೧ನೇ ಮಾರ್ಚ್ ೧೮೭೮ರಲ್ಲಿ ಈ ಕೃತಿ ಮುದ್ರಣವಾದದ್ದನ್ನು ತಿಳಿಸುತ್ತಾನೆ. ಈ ಗಣಿತಾರ್ಣವದಲ್ಲಿ ಒಟ್ಟು ೧೦ ಕಂದಾರ್ಧಪದ್ಯ ಗಳನ್ನೊಳಗೊಂಡಂತೆ ೪೦೦ ಕಂದಪದ್ಯಗಳಿವೆ. ಈ ಪುಸ್ತಕದಲ್ಲಿ ನಿರೂಪಣೆಯ ಕ್ರಮ ಹೀಗಿದೆ :

೧. ಗಣಿತ ಪ್ರಭೇದ ರೂಪವಾದ ೧೮೨ ಪ್ರಕರಣಗಳು
೨. ಕನ್ನಡ ಕಂದ ಪದ್ಯರೂಪವಾದ ವಿಧಿಗಳು

ನಯನ, ನೇತ್ರ, ಅಕ್ಷಿ, ಚಕ್ಷು, ದ್ವಿ, ಯುಗ್ಮ, ಪಾದ, ಅಂಘ್ರಿ, ಪಾಣಿ, ದ್ವಯ.

೩ = ರಾಮ, ತ್ರಿ, ಹರನಯನ, ಗುಣ, ಪುರ, ವಹ್ನಿ, ಹೀತಿಹೋತ್ರ, ಅನಲ, ಅವಸ್ಥೆ, ಸಂಧ್ಯ, ಕಾಲ, ಪುರುಷ, ಲಿಂಗ.

೪ = ಸಾಗರ, ಚತು, ಉಪಾಯ, ಯುಗ, ಶರಧಿ, ವೇದ, ಪುರುಷಾರ್ಥ, ವಿಧಿವದನ, ನಾಲ್ಕು, ವರ್ಣ, ಆಶ್ರಮ.

೫ = ಶರ, ಬಾಣ, ಪಂಚ, ಇಂದ್ರಿಯ, ತರು, ಪಲ್ಲವ, ರುದ್ರವದನ, ಭಕ್ಷ್ಯ, ಮಾರ್ಗಣ, ಭೂತ, ಆಯುಧ, ಮಾಪಾತಕ, ಕೋಲ್, ಕಣೆ.

೬ = ಋತು, ರಸ, ಶಾಸ್ತ್ರ, ಕ್ರಿಯೆ, ಮತ, ಷಟ್‌ರಿಪು, ವೈರಿ, ಶತ್ರು, ಅಳಿಯ ಚರಣ.

೭ = ತುರುಗ, ಮುನಿ, ಶೈಲ, ಅದ್ರಿ, ಗಿರಿ, ಋಷಿ, ಸಪ್ತ, ಅಶ್ವ, ಧಾತು, ಪುರಿ, ದ್ವೀಪ, ಸ್ವರ, ಏಳು, ವಾರ, ವೆಸನ.

೮ = ಹಸ್ತಿ, ವಸು, ನಾಗ, ಫಣಿ, ಗಜ, ಕಕುಭ, ಅಷ್ಟ ದಿಕ್ಕು ಪಾಲಕರು, ಮಾತಂಗ, ದಂತಿ, ಮದ, ಕರಿ.

೯ = ನಿಧಿ, ನವ, ರಸ, ಖಂಡ, ವಿಧಿ, ವರ್ಷ, ದ್ವಾರ, ಲಬ್ಧ, ಗ್ರಹ, ಮೂಲಾಂಕ, ಭಕ್ತಿ, ಅಜ.

೧೦ = ಅವತಾರ, ದಶಕ, ದಶಮ.

೧೧ = ಶಿವನಾಮ, ರುದ್ರ, ಕರಣ.

೧೨ = ರವಿ, ದ್ವಾದಶ, ರಾಶಿ, ಮಾಸ.

ಈ ಗಣಿತದ ಸ್ವಭಾವವನ್ನು ಕುರಿತು ಕವಿಯು
ಗಣನೆಯ ಮಾಡುತ ನೋಡಲು
ಹೆಣಿಗ್ಯಾಟಗಳೆಲ್ಲ ತಪ್ಪಿ ತುಂಬಿದ ಸ್ವಾದಂ
ಅಣಗಿರುತಿಹುದೆಲ್ಲ ತೋರುತ
ಕ್ಷಣ ಕ್ಷಣಕಂ ತೃಪ್ತಿ ಬಡಿಸುತಿಹುದೀ ಗಣಿತಂ
ಎಂದೂ, ಅಂತಿಮವಾಗಿ

ಪೆನಿಯೊಂದು ನಾಲ್ಕು ಫಾರ್ದಿಂ
ಗೆನಿಸುವ ಷಿಲ್ಲಿಂಗಿಗಾಗ ಪೆನಿ ಪನ್ನೆರಡೂ
ನೆನೆಷಿಲ್ಲಿಂಗೆದು ವಿಂಶತಿ
ಯೆನಿಪುದಾ ಪೌಂಡೊಂದು ನಾಣ್ಯ ಇಂಗ್ಲಾಂಡಿನೊಳೂ

ಎಂದರೆ –

| | |
|---|---|
| ೧ ಪೌಂಡಿಗೆ | ೨೦ ಷಿಲ್ಲಿಂಗ್‌ಗಳು |
| ೧ ಷಿಲ್ಲಿಂಗಿಗೆ | ೧೨ ಪೆನ್ಸ್ |
| ೧ ಪೆನ್ಸಿಗೆ | ೪ ಫಾರ್ದಿಂಗ್‌ಗಳು |

ಮತ್ತು ಇಂಗ್ಲಾಂಡ್ ದೇಶದ ಹಳೇ ನಾಣ್ಯ ಗಳ್ಯಾವ್ಯಾವೆಂದರೆ

೫ ಷಿಲ್ಲಿಂಗ್ = ೧ ಕ್ರೌನ್
೨೧ ಷಿಲ್ಲಿಂಗ್ = ೧ ಗಿನಿ.

ಹಿಂದೂ ದೇಶದಲ್ಲಿ ಭೂಮಿಯ ಉದ್ದದ ಅಳತೇ ಪ್ರಮಾಣವು ಎಂದು ಕೆಳಕಂಡ ಪದ್ಯದಲ್ಲಿ ತಿಳಿಸುತ್ತಾನೆ :

ಎಂಟೆವೆಧಾನ್ಯದ ಮಧ್ಯ
ಕುಂಟೆನಿಸುವದಂಗುಲದುವೆ ನಾಲ್ಕನು ಕೇಳ್ದೀ
ನಂಟಿಸೆ ಮುಷ್ಟಿಯುಮದನಂ
ಜಂಟಿಸಲಿಕ್ಕಾರುಹಸ್ತ ಕರ್ನಾಟಕದೊಳ್
ಇತ್ತಿಹ ಹಸ್ತವು ನಾಲ್ಕ
ಕ್ಕೆತ್ತಿದ ಮಾರೊಂದು ಮದುವೆಯರಡುಂ ಸಾವಿರ
ತೆತ್ತಿಸೆಕ್ರೋಶವು ಕೇಳದ
ಪತ್ತಿಸಲು ನಾಲ್ಕನಾಗ ಯೋಜನ ಸರಿಯೈ

| | |
|---|---|
| ೮ ಯವೆಗಳ ಮಧ್ಯ ಪ್ರಮಾಣಕ್ಕೆ | ೧ ಅಂಗುಲ |
| ೪ ಅಂಗುಲ | ೧ ಮುಷ್ಟಿ |
| ೬ ಮುಷ್ಟಿ | ೧ ಹಸ್ತ (ಮೊಳ) |
| ೪ ಹಸ್ತ | ೧ ಮಾರು (ದಂಡ) |
| ೨೦೦೦ ಮಾರು | ೧ ಹರದಾರಿ (ಕ್ರೋಶ) |
| ೪ ಹರದಾರಿ | ೧ ಯೋಜನ (ಗಾವದ) |

೧೮೫೦ರ ಆಸುಪಾಸಿನ ನಮ್ಮ ಸಮಾಜದಲ್ಲಿದ್ದ ಭೂಮಿಯ ಅಳತೆಗಳ ದೇಶ್ಯ ಪರಿಕಲ್ಪನೆ ಇದು.

ಕೆ. ಎಸ್. ಮಧುಸೂದನ
ಡಾ|| ಸಿ. ಎಸ್. ಯೋಗಾನಂದ

ಕ್ಷೇತ್ರಗಣಿತಕ್ಕೆ ಸಂಬಂಧಿಸಿದ ಪೈಥಾಗೊರಸ್ ಥಿಯರಂನ ಸೂತ್ರವನ್ನು ಹೀಗೆ ನೀಡಿದ್ದಾನೆ :

*ಇರುತಿಹ ಕರ್ಣದ ವರ್ಗವು*
*ಇರುತಿಹ ಭುಜಕೋಟಿಯುಗ್ಮದೊರ್ಗದ ಮೊತ್ತಂ*
*ಸರಿಯಾಗಿರುತಿರಲವುಗಳು*
*ವರತ್ರಿಭುಜೆಗಳಳತೆ ನಿರ್ಣಯಂಗಳು ಶಿದ್ದಂ*




ನಮ್ಮ ಗಮನಿಕೆ
ಕರ್ಣ = (ಹೈಪಾಟನ್ಯೂಸ್)
ಕೋಟಿ ಮತ್ತು ಭುಜ = (ಇನ್ನೆರಡು ಪಾರ್ಶ್ವಗಳು)
ಕರ್ಣ ಬಿಟ್ಟುಳಿದ ಎರಡು ಬಾಹುಗಳು

ಹ್ಯಾಗೆಂದರೆ :

| ಕರ್ಣಪ್ರಮಾಣ | ಭುಜೆಪ್ರಮಾಣ | ಕೋಟಿಪ್ರಮಾಣ |
|---|---|---|
| ೫ | ೪ | ೩ |

ವರ್ಗಿಸಲು

೨೫ = ೧೬ + ೯

ಹೀಗೆ ತ್ರಿಭುಜೆಗಳ ಕರ್ಣ ಪ್ರಮಾಣದ ವರ್ಗವು ಭುಜೆ, ಕೋಟಿ ಎಂಬ ಎರಡು ಬಾಹುಗಳ ವರ್ಗದ ಮೊತ್ತಕ್ಕೆ ಸರಿಯಾಗಿರಬೇಕು. ಕೃತಿಕಾರ ನೀಡುವ ಲೆಕ್ಕ ಮತ್ತು ಅದರ ಬಿಡಸುವಿಕೆಯ ಮಾದರಿಯೊಂದನ್ನು ಕೊಟ್ಟು ಈ ಕೃತಿಯ ಸ್ಥೂಲ ಪರಿಚಯ ಮುಗಿಸುತ್ತೇವೆ.

ಉದಾಹರಣೆಗೆ, ಒಂದು ತೆಂಗಿನ ವೃಕ್ಷವು ೧೦೦ ಅಡಿ ಉನ್ನತವಾಗಿತ್ತು. ಅದರ ಬುಡದಿಂದ ೨೦೦ ಅಡಿ ದೂರದಲ್ಲಿ ಒಂದು ಸರೋವರವಿತ್ತು. ಆಗಲು, ಆ ವೃಕ್ಷದ ಮೇಲೆ ಕೂತಿದ್ದ, ಎರಡು ಕಪಿಗಳಲ್ಲಿ ಒಂದು ಆ ವೃಕ್ಷದಿಂದ ಇಳಿದು ಸರೋವರಕ್ಕೆ ನೀರು ಕುಡಿಯಲು ಹೋಯಿತು. ಮತ್ತೊಂದು ಆ ವೃಕ್ಷದಿಂದ ಕೆಲವು ಅಡಿ ಮೇಲಕ್ಕೆ ನೆಗೆದು ಅಲ್ಲಿಂದ ಕರ್ಣ ಸೂತ್ರ ಮಾರ್ಗವಾಗಿ ಆ ಸರೋವರಕ್ಕೆ ಹಾರಿತು. ಆಗ ನೋಡಲಾಗಿ ಅವೆರಡರ ಗಮನ ದೂರವು ಒಂದೇ ಸಮನಾಗಿದ್ದವು. ಆದರೆ ಆ ಎರಡನೇ ಕಪಿ ಹಾರಿದ ಉನ್ನತವೆಷ್ಟು? ಮತ್ತು ಅಲ್ಲಿಂದ ಸರೋವರದವರೆಗೆ ಹಾರಿದ ದೂರವೆಷ್ಟು ಹೇಳಿ.

ಸೂತ್ರ ॥

*ಭುಜೆಕೋಟಖಂಡ ಗುಣಿಸುತ*
*ನಿಜದಿಂದಾ ಕೋಟಖಂಡ ದ್ವಿಗುಣದಿ ಕೂಡಿದ*
*ಭುಜೆಯಿಂದ್ಧರಿಸಬರುವದು*
*ರುಜುವಾಗಿಹ ಕೋಟಿಖಂಡ ಗಣಕರ ಮತದಿಂ*

ವಿವರಣೆ ॥

ಭುಜೆಯನ್ನೂ ಕೋಟ ಖಂಡ ಪ್ರಮಾಣವನ್ನೂ ಗುಣಿಸಿ, ಆ ಲಬ್ಧವನ್ನು (ಕೋಟಿಯ ಖಂಡದ ದ್ವಿಗುಣದಲ್ಲಿ ಭುಜೆಪ್ರಮಾಣದಲ್ಲಿ ಶೇರಿಸಿದರೆ ಆಗುವ ಸಂಖ್ಯೆದಿಂದ) ಭಾಗಿಸು. (ಹರಿಸು= ಭಾಗಿಸು) ಬರುವ ಲಬ್ಧವೇ ಉಳಿದ ಕೋಟಿ ಖಂಡ ಪ್ರಮಾಣವಾಗಿರುವುದು.




ರೀತಿಯು,

ಗುಣಿಸು | (ಭುಜೆಪ್ರಮಾಣ = ೨೦೦ (ಕೋಟಿಯ ಖಂಡ = ೧೦೦ = ೨೦೦x ೧೦೦ / ೨೦೦೦೦

ಇದನ್ನು ಕೋಟಿಯ ಖಂಡ ದ್ವಿಗುಣ = ೧೦೦x೨ =೨೦೦

ಕೂಡಿದ ಭುಜೆ ೨೦೦+೨೦೦ =೪೦೦ ಇದರಿಂದ ಭಾಗಿಸು ೨೦೦೦೦ / ೪೦೦ = ೫೦

ಇದು ೨ ನೇ ಕಪಿ ನೆಗೆದ ಉನ್ನತ ಅಲ್ಲಿಂದ ಕಪಿ ಹಾರಿದ ದೂರ

+ (೧೫೦² = ೨೨೫೦೦) / (೨೦೦² = ೪೦೦೦೦) = ೬೨೫೦೦ √ ೬೨೫೦೦ = ೨೫೦

ಕಪಿ ನೆಗೆದ ಎತ್ತರ = ೫೦ ಅಡಿ

ಅಲ್ಲಿಂದ ಕರ್ಣ ಸೂತ್ರ ಮಾರ್ಗ ಹಾರಿದ ದೂರ = ೨೫೦ ಅಡಿ. ೧ನೇ ಕಪಿ ನೀರು ಕುಡಿಯಲು ಹೋದ ದೂರ = ೧೦೦ಇಳಿತ +೨೦೦ ನಡೆತ = ೩೦೦ ಅಡಿ. ೨ನೇ ಕಪಿ ಮೇಲಕ್ಕೆ ನೆಗೆದು ಸರೋವರಕ್ಕೆ ನೆಗೆತ ಹಾರುವಿಕೆ ಹಾರಿದ ದೂರ = ೫೦ + ೨೫೦ = ೩೦೦ ಅಡಿ). ಆಗಿನ ಕಾಲದ ಸಮಾಜಕ್ಕೆ ಅಗತ್ಯವಾಗಿದ್ದ ಗಣಿತ ಪ್ರಕ್ರಿಯೆಗಳನ್ನು ಈ ಕೃತಿಯಲ್ಲಿ ವಿವರವಾಗಿ ನಿರೂಪಿಸಲಾಗಿದೆ. ಮುಖ್ಯವಾಗಿ ಅಂಕಗಣಿತ ಹಾಗೂ ಕ್ಷೇತ್ರಗಣಿತವನ್ನು ಕುರಿತು ಕವಿ ಗಮನ ನೀಡಿದ್ದಾನೆ. ಅನೇಕ ಚಮತ್ಕಾರಿಕ ಲೆಕ್ಕಗಳನ್ನೂ ಸೂತ್ರ ಉದಾಹರಣೆಗಳೊಂದಿಗೆ ವಿವರಿಸುತ್ತಾನೆ.

ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ನೈಜ ಪರಿಚಯವುಳ್ಳ ಉತ್ತಮ ಗಣಿತ ತಜ್ಞರು ಇದರ ಸ್ವರೂಪ ಹಾಗೂ ಉಪಯುಕ್ತತೆಯನ್ನು ಪರಿಶೀಲಿಸುವ ಅಗತ್ಯವಿದೆ.

ಈ ಲೇಖನದಲ್ಲಿ ಉದ್ಧರಿಸಿರುವ ಲೆಕ್ಕ ಮತ್ತು ಅದನ್ನು ಬಿಡಿಸುವ ಸೂತ್ರದ ಬಗ್ಗೆ ಒಂದು ಪುಟ್ಟ ಟಿಪ್ಪಣಿ.

ಮೊದಲಿಗೆ, ಲೆಕ್ಕದಲ್ಲಿ ಕೊಟ್ಟಿರುವ ಬಾಹುಗಳ ಪ್ರಮಾಣಗಳನ್ನು ನಿರ್ದಿಷ್ಟ ಸಂಖ್ಯೆಗಳ – ೧೦೦ ಅಡಿ, ೨೦೦ ಅಡಿ, ಇತ್ಯಾದಿ – ಬದಲಾಗಿ, ತೆಂಗಿನ ಮರದ ಎತ್ತರ ಮತ್ತು ಅದರ ಬುಡದಿಂದ ಸರೋವರದ ದೂರಗಳನ್ನು a, b ಎಂದು ತೆಗೆದುಕೊಳ್ಳೋಣ; ಹಾಗೆಯೇ, ಕಪಿ ನೆಗೆದ ಎತ್ತರ x ಹಾಗೂ ಕರ್ಣದ ಪ್ರಮಾಣ y ಆಗಿರಲಿ. ಲೆಕ್ಕದಲ್ಲಿ ಕೊಟ್ಟಿರುವ ಅಂಶ ಹಾಗೂ ಪೈಥಾಗೊರಸ್‌ನ ಪ್ರಮೇಯವನ್ನು ಉಪಯೋಗಿಸಿ ಕೆಳಕಂಡ ಸಮೀಕರಣಗಳನ್ನು ಬರೆಯಬಹುದು :

$$x + y = a + b, (a + x)^2 + b^2 = y^2$$

ಮೊದಲ ಸಮೀಕರಣದಿಂದ ಸಿಕ್ಕ $y = (a + b) - x$ ಅನ್ನು ಎರಡನೇ ಸಮೀಕರಣದಲ್ಲಿ ಆದೇಶಿಸಿದಾಗ ಸಿಗುವುದು :

$$a^2 + x^2 + 2ax + b^2 = [(a+b) -x]^2 = a^2 + b^2 + 2ab + x^2 - 2 (a+b)x.$$

ಇದನ್ನು ಸರಳೀಕರಿಸಿದಾಗ x ನ ಬೆಲೆ ದೊರಕುವುದು :

$$x = \frac{= ab}{2a + b}$$

ಈ ಸೂತ್ರವೇ ಲೇಖನದಲ್ಲಿ ಕಾಣಿಸಿರುವ ಸೂತ್ರ !

ಈ ಬಿಡಿಸುವಿಕೆಯ ಲಾಭವೆಂದರೆ, ಈ ಲೆಕ್ಕಕ್ಕಿಂತ ಸ್ವಲ್ಪ ಬೇರೆಯಾದ, ಇದೇ ಮಾದರಿಯ ಲೆಕ್ಕವನ್ನು ಬಿಡಿಸುವ ದಾರಿ ತೋರುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಗಣಿತದ ಸಾಮಾನ್ಯ ಪರಿಕಲ್ಪನೆಗಳನ್ನು ಉಪಯೋಗಿಸಿ ಸೂತ್ರವನ್ನು ಪಡೆಯುವ ವಿಧಾನವನ್ನು ವಿವರಿಸುವ ಬದಲಾಗಿ ಆ ಸೂತ್ರವನ್ನು (ಅದು ಎಲ್ಲಿಂದ ಬಂತು ?!) ಮಾತ್ರ ಕೊಡಲಾಗಿದೆ. ಪುಸ್ತಕದ ವಿಧಾನ ಗಣಿತದ ವಿಚಾರ ಲಹರಿಯನ್ನು ಬೋಧಿಸುವುದಿಲ್ಲ, ಬದಲಾಗಿ ಅದನ್ನು ಒಂದು ಸೂತ್ರಗಳ ಬಾಯಿಪಾಠದ ಅಭ್ಯಾಸವನ್ನಾಗಿ ಮಾಡುತ್ತದೆ. ಈಗಲೂ ಸಹ ಶಾಲೆಗಳಲ್ಲಿ ಬಹುಪಾಲು ಗಣಿತವನ್ನು ಹೀಗೆಯೇ ಬೋಧಿಸುತ್ತಿರುವುದು ಒಂದು ದುರಂತವೇ ಸರಿ.

**ಕೆ. ಎಸ್. ಮಧುಸೂದನ**
ನಿವೃತ್ತ ಪ್ರಿನ್ಸಿಪಾಲ್, ಎಪಿಎಸ್ ಕಲೆ ಮತ್ತು ವಿಜ್ಞಾನ ಕಾಲೇಜು, ನರಸಿಂಹರಾಜ ಕಾಲೋನಿ
ಬೆಂಗಳೂರು - ೫೬೦ ೦೧೯
**ಡಾ॥ ಸಿ. ಎಸ್. ಯೋಗಾನಂದ**
ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರು, ಶ್ರೀ ಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜು,
ಮೈಸೂರು - ೫೭೦ ೦೦೬

# ನಿರ್ಲಕ್ಷ್ಯಕ್ಕೆ ಒಳಗಾಗಿರುವ ಗ್ರಾಮೀಣ ಆರ್ಥಿಕತೆ

**ಎಚ್. ಎಸ್. ದೊರೆಸ್ವಾಮಿ**

ಕೇಂದ್ರ ಸರ್ಕಾರ ಮತ್ತು ಕರ್ನಾಟಕವೂ ಸೇರಿದಂತೆ ಎಲ್ಲ ರಾಜ್ಯಗಳಲ್ಲೂ ಸರ್ಕಾರಗಳು ಅಭಿವೃದ್ಧಿ ಮತ್ತು ಬೆಳವಣಿಗೆ ಕುರಿತು ಮಾತಾಡಿದ್ದೂ ಆಡಿದ್ದೇ. ೧೯೯೨ರಲ್ಲಿ ಜಿಡಿಪಿ ಶೇಕಡ ೩ ಅಥವಾ ೪ ಇದ್ದದ್ದು ೨೦೦೮-೦೯ರಲ್ಲಿ ಅದು ಶೇಕಡ ೯ರಷ್ಟಾಯಿತು ಎಂದು ಸರ್ಕಾರ ತನ್ನ ಬೆನ್ನನ್ನು ತಾನೆ ಚಪ್ಪರಿಸಿಕೊಂಡಿತು. ಐಟಿ ಕಂಪೆನಿಗಳು, ಹಣಕಾಸಿನ ನೆರವಿನ ಸಂಸ್ಥೆಗಳು ಮತ್ತು ಇತರ ವೃತ್ತಿಪರರು ಅಧಿಕ ಸಂಖ್ಯೆಯಲ್ಲಿ ಭಾರತದಲ್ಲಿ ಕಾಣಿಸಿಕೊಂಡಮೇಲೆ, ಈಗ ಬಡವ ಬಲ್ಲಿದರ ನಡುವಿನ ಕಂದರ ಮೊದಲಿಗಿಂತಲೂ ಹೆಚ್ಚು ವೇಗದಿಂದ ಬೆಳೆಯುತ್ತಿದೆ. ಬೆರಳೆಣಿಕೆಯಷ್ಟು ಭಾರತೀಯ ಉದ್ಯಮಿಗಳು ಕರೋಡ್‌ಪತಿಗಳಾಗಿದ್ದಾರೆ. ವಿಶ್ವದ ಹತ್ತು ಮಂದಿ ಅತಿ ದೊಡ್ಡ ಶ್ರೀಮಂತರಲ್ಲಿ ಭಾರತದವರೂ ೩-೪ ಮಂದಿ ಇದ್ದಾರೆ.

ಇದು ದೇಶದ ಬೆಳವಣಿಗೆಯ ಒಂದು ಚಿತ್ರವಾದರೆ ಭಾರತದ ಕೋಟಿಗಟ್ಟಲೆ ಜನ ದಿನಕ್ಕೆ ೩೦ ರೂ.ಗಳಿಗಿಂತ ಕಡಿಮೆ ಸಂಪಾದನೆ ಉಳ್ಳವರಾಗಿದ್ದಾರೆ. ವಿಶ್ವದಲ್ಲೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕೊಳಚೆ ಪ್ರದೇಶದಲ್ಲಿ ವಾಸಮಾಡುವ ಜನ ಭಾರತದಲ್ಲಿದ್ದಾರೆ. ಇವರಿಗೆ ಪೌಷ್ಟಿಕ ಆಹಾರ, ಶುದ್ಧ ನೀರು, ವಿದ್ಯುತ್, ನಿರ್ಮಲೀಕರಣ, ಪ್ರತ್ಯೇಕ ಕಕ್ಕಸ್ ವ್ಯವಸ್ಥೆ ಇವು ಯಾವುದೂ ಇಲ್ಲ. ಕೊಳಚೆ ಪ್ರದೇಶ ಎಂಬುದು ಈ ಬಡ ಜನರು ವಾಸಿಸುವ ಸ್ಥಳಕ್ಕಿಟ್ಟಿರುವ ಅನ್ವರ್ಥನಾಮ.

೧೯೯೧ರಲ್ಲಿ ವಿಶ್ವಬ್ಯಾಂಕ್, ಐಎಮ್‌ಎಫ್ ಇವುಗಳ ನೆರವಿನಿಂದ ಎಲ್‌ಪಿಜಿ ಕಾರ್ಯಕ್ರಮವನ್ನು ಸರ್ಕಾರ ಹಮ್ಮಿಕೊಂಡಿತು. ಎಲ್‌ಪಿಜಿ ಕಾರ್ಯಕ್ರಮಗಳೆಂದರೆ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ. ಈ ಕಾರ್ಯಕ್ರಮಗಳನ್ನು ಅಳವಡಿಸಿಕೊಂಡುದರ ಫಲವಾಗಿ ಸಮಗ್ರ ದೇಶೀಯ ಉತ್ಪನ್ನ (ಜಿಡಿಪಿ) ಶೇಕಡ ೯ ಮುಟ್ಟಿತು. ಈ ಅವಧಿಯಲ್ಲೇ ಡಾಲರ್ ಕೋಟ್ಯಧೀಶರು ಭಾರತದಲ್ಲಿ ಹುಟ್ಟಿಕೊಂಡದ್ದು ಮತ್ತು ಭಾರತದ ಜನಸಂಖ್ಯೆಯ ಶೇಕಡ ೧೦ ಜನರ ಆದಾಯ ಕೂಡ ಮಿತಿಮೀರಿ ಬೆಳೆದದ್ದು. ಈ ಅವಧಿಯಲ್ಲೇ ಬಡವರ ಸಂಖ್ಯೆ ಕೂಡ ತೀವ್ರತಮವಾಗಿ ಹೆಚ್ಚಿದ್ದು. ಅರ್ಜುನ್ ಸೇನ್‌ಗುಪ್ತಾ ತಮ್ಮ ವರದಿಯಲ್ಲಿ ಶೇಕಡ ೭೮ರಷ್ಟು ಅಸಂಘಟಿತ ದುಡಿಮೆಗಾರರು ಭಾರತದಲ್ಲಿ ದಿನಕ್ಕೆ ೨೦ ರೂ.ಗಳಿಗಿಂತ ಕಡಿಮೆ ಆದಾಯ ಪಡೆಯುತ್ತಾರೆಂಬುದನ್ನೂ ನಮೂದಿಸಿದ್ದಾರೆ.

ಬಡವರನ್ನು ಬಲಿಕೊಟ್ಟುದರ ಫಲವಾಗಿ ನಮ್ಮ ಸಮಗ್ರ ದೇಶೀಯ ಉತ್ಪನ್ನದಲ್ಲಿ ಹೆಚ್ಚಳವಾಗಿದೆ ಎಂಬುದನ್ನು ನಾವು ಮರೆಯಬಾರದು.

ಬಡಜನರ ಜಮೀನುಗಳನ್ನು ಕಿತ್ತುಕೊಳ್ಳುವ ಮುಖಾಂತರ, ಅರಣ್ಯವಾಸಿಗಳ ಜಮೀನು ಕಿತ್ತುಕೊಂಡು ಅವರನ್ನು ಅರಣ್ಯದಿಂದ ಓಡಿಸುವ ಮೂಲಕ, ಭಾರತದಲ್ಲಿ ಅಭಿವೃದ್ಧಿಯನ್ನು ಸಾಧಿಸಲಾಗಿದೆ.

ಭಾರತ ತನ್ನ ಉನ್ನತ ಬೆಳೆವಣಿಗೆಯನ್ನು ಮೂರು ಮಾರ್ಗಗಳಿಂದ ಸಾಧಿಸಿದೆ. ಔದ್ಯೋಗೀಕರಣದ ಕಾರಣದಿಂದ ಇತ್ತೀಚೆಗೆ ಆಗಿರುವ ಅಧಿಕ ಆರ್ಥಿಕ ಬೆಳವಣಿಗೆಗೆ ಮೂರು ಕಾರಣಗಳು :

೧. ಕಾರ್ಪೊರೇಟ್‌ಗಳು ನುಗ್ಗಿಬರುತ್ತಿರುವುದು.

೨. ಅವುಗಳಲ್ಲಿ ಬಹುತೇಕ ಕಂಪನಿಗಳು ಖಾಸಗಿಯವದಾಗಿರುವುದು.

೩. ಈ ಬೆಳೆವಣಿಗೆಯನ್ನು ಕಟ್ಟುಪಾಡುಗಳಿಗೆ ಒಳಪಡಿಸುವ ಬದಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾರ್ಪೊರೇಟ್‌ಗಳ ಪ್ರವರ್ತಕರಂತೆ, ದಳ್ಳಾಳಿಗಳಂತೆ, ಕೆಲಸಮಾಡುತ್ತಿರುವುದು.

ಬಹುತೇಕ ಎಲ್ಲ ರಾಜಕೀಯ ಪಕ್ಷಗಳೂ ಈ ಧೋರಣೆಯನ್ನೇ ತಳೆದಿವೆ. ಈ ಬಗೆಯ ಅಭಿವೃದ್ಧಿಯನ್ನು ಸಾಧಿಸಬೇಕಾಗಿದ್ದರೆ ನಾವು ಬಲಿದಾನಕ್ಕೆ ಸಿದ್ಧರಾಗಿರಬೇಕು ಎಂದು ಸರ್ಕಾರಗಳು ಪದೇ ಪದೇ ಹೇಳುತ್ತಲೇ ಇವೆ. ಈ ಬಗೆಯ ಬಲಿದಾನಕ್ಕೆ ಸಿದ್ಧರಾಗಬೇಕಾದವರು ಈ ದೇಶದ ಬಡಜನತೆ. ಸಂಪದ್ಭರಿತ ಕಾರ್ಪೊರೇಟ್‌ಗಳು ಈ ಬಗೆಯ ಬಲಿದಾನ ಮಾಡಬೇಕಾಗಿಲ್ಲ. ಅದಕ್ಕೆ ಪ್ರತಿಯಾಗಿ ಅವರಿಗೆಲ್ಲ ಸರ್ಕಾರಗಳು ಸಹಾಯಧನ ನೀಡಿ ಪೋಷಿಸುತ್ತವೆ. ಉದಾಹರಣೆಗೆ, ಟಾಟಾ ಕಂಪನಿಗೆ ಸಿಂಗೂರಿನಲ್ಲಿ ಘೋಷಿಸಿದ ಸಹಾಯಧನದ ಮೊತ್ತ ೮೫೦ ಕೋಟಿ ರೂಪಾಯಿಗಳು. ಟಾಟಾ ಕಂಪೆನಿ ಹೂಡುವ ಬಂಡವಾಳ ೧೦೦೦ ಕೋಟಿ ಮಾತ್ರ. ಇದೇ ಬಗೆಯ ರಿಯಾಯ್ತಿಗಳನ್ನು ಉತ್ತರಪ್ರದೇಶದಲ್ಲೂ ಅಂಬಾನಿ ಸಹೋದರರಿಗೆ, ಮಹಾರಾಷ್ಟ್ರ ಮತ್ತಿತರ ರಾಜ್ಯಗಳಲ್ಲಿ ವಿಶೇಷ ಆರ್ಥಿಕವಲಯ ಸ್ಥಾಪಿಸುವವರಿಗೆ ನೀಡಲಾಗುತ್ತಿದೆ. ಎಡಪಂಥೀಯರು ಪಟ್ಟಭದ್ರರಿಗೆ ಸಹಾಯಧನ ನೀಡುವ ಈ ಸ್ಪರ್ಧೆಯಲ್ಲಿ ಹಿಂದೆ ಬಿದ್ದಿಲ್ಲ. ವಿಶ್ವಬ್ಯಾಂಕ್, ಐಎಂಎಫ್ ಮತ್ತು ಏಷ್ಯನ್ ಡೆವಲಪ್‌ಮೆಂಟ್ ಬ್ಯಾಂಕುಗಳದೂ ಇದೇ ಧೋರಣೆ.

ಹಿಂದುತ್ವವಾದಿ ಸರ್ಕಾರ ಕೂಡ ಬಲಿಷ್ಠ ಬಹುರಾಷ್ಟ್ರೀಯ ಕಂಪನಿಗಳಿಗೆ, ನಮ್ಮ ದೇಶದ ಉದ್ದಿಮೆಪತಿಗಳಿಗೆ ಶರಣಾಗತರಾಗಿರುವುದು ಸುಸ್ಪಷ್ಟ. ಹಣ ಎಂಥವರನ್ನಾದರೂ ಕೊಳ್ಳಬಲ್ಲದು ಎಂಬುದಕ್ಕೆ ಇದು ಸಾಕ್ಷಿ. ರಾಜಕೀಯದವರು ಎರಡು ನಾಲಗೆಯವರು ಎಂಬುದು ಈಗ ಬಟ್ಟಬಯಲಾಗಿದೆ. ಅದ್ವಾನಿಯವರು ನಂದೀಗ್ರಾಮದಲ್ಲಾದ ಹತ್ಯಾಕಾಂಡವನ್ನು ಜಲಿಯನ್ ವಾಲಾಬಾಗ್ ದುರಂತಕ್ಕೆ ಹೋಲಿಸಿದರು. ಅದೇ ಅದ್ವಾನಿ ಗುಜರಾತಿನಲ್ಲಿ ನರೇಂದ್ರ ಮೋದಿ ಮಾಡಿಸಿದ ಮುಸ್ಲಿಮರ ನಾಲ್ಕೊಲೆಗಳ ಬಗೆಗೆ ಚಕಾರ ಎತ್ತಲಿಲ್ಲ.

ಕಳಿಂಗ ನಗರದ ಆದಿವಾಸಿಗಳು ಟಾಟಾ ಕಂಪೆನಿಗೆ ತಮ್ಮ ಜಮೀನುಗಳನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಅದೇ ರೀತಿ ಸಿಂಗೂರಿನಲ್ಲೂ ರೈತರು ತಮ್ಮ ಜಮೀನುಗಳನ್ನು ಬಿಟ್ಟುಕೊಡಲು ನಿರಾಕರಿಸಿದರು. ಎದುರುನಿಂತ ೧೩ ಮಂದಿ ಆದಿವಾಸಿಗಳನ್ನು ಅಗಾಧ ಬೆಳವಣಿಗೆ ಹೆಸರಿನಲ್ಲಿ ಪೊಲೀಸರು ಕೊಂದರು. ಕೈಗಾರಿಕೀಕರಣ ಮತ್ತು ಬೆಳವಣಿಗೆಯ ಹೆಸರಿನಲ್ಲಿ ಬಹುಸಂಖ್ಯೆಯಲ್ಲಿರುವ ರೈತರನ್ನು ಅಮಾನವೀಯವಾಗಿ ಹತ್ತಿಕ್ಕಲಾಗುತ್ತಿದೆ. ಛತ್ತೀಸ್‌ಘಡದಲ್ಲಿ ಆದಿವಾಸಿಗಳನ್ನು ಒತ್ತಾಯಪೂರ್ವಕವಾಗಿ ಹೊರಗೆ ದಬ್ಬುತ್ತಿದ್ದಾರೆ. ದುಡ್ಡಿನ ದೊಡ್ಡಪ್ಪಗಳಿಗೆ ಈ ಅರಣ್ಯದಲ್ಲಿ ಗಣಿಗಾರಿಕೆ ನಡೆಸಲು ಅವಕಾಶ ಮಾಡಿಕೊಡುವುದಕ್ಕಾಗಿ ಈ ಬಗೆಯ ದೌರ್ಜನ್ಯವನ್ನು ಬಡಜನತೆಯ ಮೇಲೆ ನಡೆಸಲಾಗುತ್ತಿದೆ.

> ಜಾಗತೀಕರಣವನ್ನು ಹೆಚ್ಚು ಹೆಚ್ಚಾಗಿ ನಾವು ಸ್ವಾಗತಿಸಿದಂತೆ ಅನ್ಯ ರಾಷ್ಟ್ರಗಳಿಗೆ ನಮ್ಮ ಮಾರುಕಟ್ಟೆಯನ್ನು ಬಿಟ್ಟುಕೊಡುವ ಅನಿವಾರ್ಯತೆ ಉಂಟಾಗುತ್ತದೆ. ರಫ್ತು ವ್ಯಾಪಾರ ಹೆಚ್ಚಬೇಕೆಂದರೆ ಶ್ರಮಿಕನ ಮೇಲಿನ ಖರ್ಚು ಕಡಿಮೆಯಾಗುವುದು ಅನಿವಾರ್ಯವಾಗುತ್ತದೆ. ಆದ್ದರಿಂದ ಹೊರ ರಾಷ್ಟ್ರಗಳ ಬಂಡವಳಿಗರು ನಮ್ಮ ಮಾರುಕಟ್ಟೆಯನ್ನು ಪ್ರವೇಶಿಸಲು ಅವಕಾಶ ನೀಡಬಾರದು. ನಮ್ಮ ಆರ್ಥಿಕ ಬೆಳೆವಣಿಗೆಯ ಗುರಿ ಉದ್ಯೋಗಾವಕಾಶ ಕಲ್ಪಿಸುವುದೇ ಆಗಬೇಕು. ಈ ಗುರಿಯನ್ನು ಒಂದು ನಿರ್ದಿಷ್ಟ ಅವಧಿಯಲ್ಲಿ ಮುಟ್ಟಬೇಕು. ಈಗ ಚಾಲ್ತಿಯಲ್ಲಿರುವ ಉದ್ಯೋಗ ಖಾತ್ರಿಯ ಯೋಜನೆ ಪೂರ್ಣಾವಧಿಯ ಉದ್ಯೋಗ ಭರವಸೆಯ ಯೋಜನೆಯಾಗಿ ಪರಿವರ್ತನೆಗೊಳ್ಳಬೇಕು.

ಭಾರತದಲ್ಲಿ ಜಮೀನಿನ ಮೇಲ್ವಿಚಾರಣೆ ನಡೆಸುವುದು ರಾಜ್ಯ ಸರ್ಕಾರಗಳ ಹಕ್ಕು. ಭೂಮಿಯನ್ನು ಇಲ್ಲಿ ಭೂ ಮಾಫಿಯಾಗಳಿಗೆ, ಬಂಡವಾಳಶಾಹಿಗಳಿಗೆ, ಹಂಚಿ ಕೊಡುವ ಸ್ಪರ್ಧೆ ನಡೆದಿದೆ. ''ನಮ್ಮ ರಾಜ್ಯದಲ್ಲಿ ಬಂಡವಾಳ ಹೂಡುವವರಿಗೆ ಭೂಮಿ ಕೊಡದಿದ್ದರೆ ಅವರು ಬೇರೆ ರಾಜ್ಯಗಳಿಗೆ ಹೋಗಿಬಿಡುತ್ತಾರೆ; ಆದ್ದರಿಂದ ಅವರನ್ನು ಇಲ್ಲಿಯೇ ಉಳಿಸಿಕೊಳ್ಳಲು ನಾವು ಭೂಮಿ ಕೊಡಲೇಬೇಕು'' ಎಂಬುದು ಸರ್ಕಾರ ಮುಂದೊಡ್ಡುವ ಸಬೂಬು. ಈ ವಾದವನ್ನು ಕೇಂದ್ರ ಸರ್ಕಾರವೂ ಅನುಮೋದಿಸುತ್ತದೆ. ಕಾರ್ಖಾನೆ ಸ್ಥಾಪಿಸಲು, ರಸ್ತೆ ವಿಸ್ತರಣೆ ಮಾಡಲು, ವಿಶೇಷ ಆರ್ಥಿಕವಲಯ ನಿರ್ಮಿಸಲು, ಐಟಿ ಪಾರ್ಕ್ ಮಾಡಲು, ಹೀಗೆ ಹಲವು ಹತ್ತು ಕಾರಣಗಳನ್ನು ಮುಂದೊಡ್ಡಿ ನೆಲವನ್ನು ಅವರ ಜಮೀನನ್ನು ರೈತರಿಂದ ವಶಪಡಿಸಿಕೊಳ್ಳಲಾಗುತ್ತಿದೆ.

ಗ್ರಾಮೀಣ ಆರ್ಥಿಕತೆಯ ದೃಷ್ಟಿಯಲ್ಲಿ ಜಮೀನು ಆಹಾರ ಪೂರೈಕೆಯ ಒಂದು ಸಾಧನ. ಈ ಜೀವನಾಧಾರವಾದ ಭೂಮಿಯನ್ನು ಬಲಪ್ರಯೋಗ ಮಾಡಿ ರೈತನಿಂದ ಸರ್ಕಾರ ಕಿತ್ತುಕೊಳ್ಳುವುದಾದರೆ ಅದು ಬಡಜನತೆಗೆ ಬಗೆಯುವ ದ್ರೋಹ ಎಂದೇ ಭಾವಿಸಬೇಕಾಗುತ್ತದೆ. ರೈತರಿಗೆ ಭೂಮಿ ಜೀವನಾಧಾರ ವಾಗಿರುವ ವಸ್ತುವಾದರೆ, ಉದ್ಯೋಗಪತಿಗಳಿಗೆ ಅದು ಕೊಳ್ಳೆಹೊಡೆಯುವ ಸಾಧನ (ನೈಸರ್ಗಿಕ ಸಂಪತ್ತೂ ಕೂಡಿದಂತೆ), ಬಂಡವಾಳಶಾಹಿಗಳ ಉದ್ಧಾರಕ್ಕಾಗಿ ಬಡವರನ್ನು ಬಲಿಪಶುಗಳನ್ನಾಗಿ ಮಾಡುವ ಸಾಧನ. ಈ ಮೂಲಕ ರೈತರನ್ನು ಗುಳೆ ಎಬ್ಬಿಸುವ ಕಾರ್ಯವೂ ನಡೆಯುತ್ತಿದೆ. ಸರ್ಕಾರದ ಈ ಧೋರಣೆಯನ್ನು 'ಸೃಜನಾತ್ಮಕ ನಾಶ ಕಾರ್ಯ' ಎಂದು ಕರೆಯಬಹುದು. ಸರ್ಕಾರ ಸಾರ್ವಜನಿಕ ಹಿತಾಸಕ್ತಿಯ ಮುಖವಾಡ ಧರಿಸಿಕೊಂಡು, ಶ್ರೀಮಂತರನ್ನು ಮತ್ತಷ್ಟು ಶ್ರೀಮಂತರನ್ನಾಗಿ ಮಾಡಲು ಮತ್ತು ಬಡವರನ್ನು ನಾಶಮಾಡಲು ತೊಡಗಿದೆ.

ಭೂಕಬಳಿಕೆ ಮಾಡಲು ಕಾರ್ಪೊರೇಟ್‌ಗಳಿಗೆ ಅವಕಾಶ ಮಾಡಿಕೊಡುವ ಕಾನೂನನ್ನು ರಚಿಸುವುದರ ಮೂಲಕ ಸರ್ಕಾರ ಬಡವರನ್ನು ಬೀದಿಪಾಲು ಮಾಡುತ್ತಿದೆ.

ನಮ್ಮ ಜನಸಂಖ್ಯೆಯ ಶೇಕಡ ೬೦ ಮಂದಿ ವ್ಯವಸಾಯವನ್ನು ಅವಲಂಬಿಸಿ ಜೀವನ ನಡೆಸುತ್ತಾರೆ. ಪಂಚವಾರ್ಷಿಕ ಯೋಜನೆಯಡಿ ಶೇಕಡ ೫-೬ರಷ್ಟು ಹಣವನ್ನು ಮಾತ್ರ ವ್ಯವಸಾಯ ಕ್ಷೇತ್ರಕ್ಕೆ ವಿನಿಯೋಗಿಸ ಲಾಗುತ್ತಿದೆ. ಸರ್ಕಾರ ನೇರವಾಗಿ ತಳೆಯುತ್ತಿರುವ ರೈತ ವಿರೋಧಿ ಧೋರಣೆ ಇದು. ಸರ್ಕಾರಗಳು ಇಂದು ಮಾಲ್‌ಗಳು, ಮೆಟ್ರೋ ರೈಲು, ಮೇಲ್ಸೇತುವೆಗಳು, ಅಂಡರ್‌ಪಾಸುಗಳು, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಗಾಲ್ಫ್ ಕ್ಲಬ್‌ಗಳು, ಚತುಷ್ಪಥ ರಸ್ತೆ ಮುಂತಾದವುಗಳ ನಿರ್ಮಾಣಕ್ಕೆ ಕೋಟಿ ಕೋಟಿ ರೂಗಳನ್ನು ಸುರಿಯುತ್ತದೆ. ಉಳ್ಳವರಿಗೆ ಕಲ್ಪಿಸಲಾಗುವ ಅಗತ್ಯಗಳು ಇವು. ಶ್ರೀಮಂತರ ಕಾಲಹರಣ ವಾಗದಂತೆ, ಅವರ ಜೀವನ ಉತ್ತಮಗೊಳ್ಳುವುದಕ್ಕೆ ಮತ್ತು ಅವರು ಬಂಡವಾಳವನ್ನು ತೊಡಗಿಸಲು




ಪ್ರೇರಣೆ ನೀಡುವುದಕ್ಕೆ ಈ ಅಪರೋಕ್ಷ ಮಾರ್ಗವನ್ನು ಸರ್ಕಾರ ಅನುಸರಿಸುತ್ತದೆ. ಸಾರ್ವಜನಿಕರ ಹಿತ ಕೋರುವ ಹೆಸರಿನಲ್ಲಿ ಶೇಕಡ ೧೦ ಜನ ಶ್ರೀಮಂತರಿಗೆ ಬಹುಮಟ್ಟಿಗೆ ಪ್ರಯೋಜನವಾಗುವ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ.

ಕೈಗಾರಿಕೆಯಿಂದಲೇ ಈ ದೇಶಕ್ಕೆ ಮುಕ್ತಿ, ವ್ಯವಸಾಯ ದಿಂದಲ್ಲ ಎಂದು ಸರ್ಕಾರ ಭಾವಿಸಿರುವುದರಿಂದ ರೈತರನ್ನು, ರೈತರ ಸಮಸ್ಯೆಗಳನ್ನು ಕಡೆಗಣಿಸಲಾಗುತ್ತಿದೆ. ರೈತರ ದಮನ ನಿರಾತಂಕವಾಗಿ ಸಾಗುತ್ತಿದೆ.

ಈಗ ಹೊಸ ರಾಜಕೀಯವನ್ನು ಆರಂಭಿಸಬೇಕಿದೆ. ಈ ಹೊಸ ರಾಜಕೀಯದ ಆಧಾರದ ಮೇಲೆ ನಮ್ಮ ಪರ್ಯಾಯ ಆರ್ಥಿಕ ನೀತಿಯನ್ನು ರೂಪಿಸಬೇಕಾಗಿದೆ. ನಾವು ಆಂತರಿಕ ಮಾರುಕಟ್ಟೆಯನ್ನು ಹೆಚ್ಚು ಹೆಚ್ಚು ಅವಲಂಬಿಸಲು ಕಲಿಯಬೇಕಿದೆ. ಆ ಮೂಲಕ ನಮ್ಮ ಜನರ ಕೊಳ್ಳುವ ಶಕ್ತಿಯನ್ನು ವೃದ್ಧಿಮಾಡಿಕೊಳ್ಳಬೇಕಿದೆ. ಕೊಳ್ಳುವ ಶಕ್ತಿ ಬೆಳೆಯಲು ಇರುವ ಏಕೈಕ ಮಾರ್ಗ ಉದ್ಯೋಗಾವಕಾಶಗಳನ್ನು ವೃದ್ಧಿಪಡಿಸಿಕೊಳ್ಳುವುದು. ಸಮಗ್ರ ದೇಶೀಯ ಉತ್ಪನ್ನ ಶೇಕಡ ೮ಕ್ಕೆ ಮುಟ್ಟಿದೆಯಾದರೂ ಉದ್ಯೋಗದ ಹೆಚ್ಚಳ ಆಗಿರುವುದು ಶೇಕಡ ೧ರಷ್ಟು ಮಾತ್ರ.

ಕಾರ್ಪೊರೇಟ್ ಸೆಕ್ಟರ್ ಬೆಳೆಯುವುದರಿಂದ ಉದ್ಯೋಗಾವಕಾಶ ಹೆಚ್ಚುವುದೆಂದು ಭಾವಿಸುವುದು ಮೂರ್ಖತನ. ಏಕೆಂದರೆ ಲಾಭ ದೋಚಿಕೊಂಡು ಹೋಗುವುದು ಕಾರ್ಪೊರೇಟ್ ವಲಯದ ಮುಖ್ಯ ಗುರಿಯಾಗಿದೆ. ಅದಕ್ಕಾಗಿ ಅವು ಉತ್ಪಾದನಾ ವೆಚ್ಚವನ್ನು ಆದಷ್ಟು ಕಡಿತಗೊಳಿಸಿ, ಶ್ರಮಿಕನ ಮೇಲಿನ ವೆಚ್ಚವನ್ನು ಆದಷ್ಟೂ ಮಿತಗೊಳಿಸುತ್ತವೆ.

ಜಾಗತೀಕರಣವನ್ನು ಹೆಚ್ಚು ಹೆಚ್ಚಾಗಿ ನಾವು ಸ್ವಾಗತಿಸಿದಂತೆ ಅನ್ಯ ರಾಷ್ಟ್ರಗಳಿಗೆ ನಮ್ಮ ಮಾರುಕಟ್ಟೆಯನ್ನು ಬಿಟ್ಟುಕೊಡುವ ಅನಿವಾರ್ಯತೆ ಉಂಟಾಗುತ್ತದೆ. ರಫ್ತು ವ್ಯಾಪಾರ ಹೆಚ್ಚಬೇಕೆಂದರೆ ಶ್ರಮಿಕನ ಮೇಲಿನ ಖರ್ಚು ಕಡಿಮೆಯಾಗುವುದು ಅನಿವಾರ್ಯವಾಗುತ್ತದೆ. ಆದ್ದರಿಂದ ಹೊರ ರಾಷ್ಟ್ರಗಳ ಬಂಡವಳಿಗರು ನಮ್ಮ ಮಾರುಕಟ್ಟೆಯನ್ನು ಪ್ರವೇಶಿಸಲು ಅವಕಾಶ ನೀಡಬಾರದು.

ನಮ್ಮ ಆರ್ಥಿಕ ಬೆಳವಣಿಗೆಯ ಗುರಿ ಉದ್ಯೋಗಾವಕಾಶ ಕಲ್ಪಿಸುವುದೇ ಆಗಬೇಕು. ಈ ಗುರಿಯನ್ನು ಒಂದು ನಿರ್ದಿಷ್ಟ ಅವಧಿಯಲ್ಲಿ ಮುಟ್ಟಬೇಕು. ಈಗ ಚಾಲ್ತಿಯಲ್ಲಿರುವ ಉದ್ಯೋಗ ಖಾತ್ರಿಯ ಯೋಜನೆ ಪೂರ್ಣಾವಧಿಯ ಉದ್ಯೋಗ ಭರವಸೆಯ ಯೋಜನೆಯಾಗಿ ಪರಿವರ್ತನೆಗೊಳ್ಳಬೇಕು.

ನೈಸರ್ಗಿಕ ಸಂಪತ್ತನ್ನು ಕೇಂದ್ರೀಕೃತಗೊಳಿಸಿಕೊಳ್ಳದೆ ವಿಕೇಂದ್ರಿತ ವ್ಯವಸ್ಥೆಗೆ ಒಪ್ಪಿಸಬೇಕು. ಗ್ರಾಮಪಂಚಾಯ್ತಿ ಗಳಿಗೆ ಪೂರ್ಣ ಸಮಯದ ಉದ್ಯೋಗ ಖಾತ್ರಿ ಯೋಜನೆಯನ್ನು ಕಾರ್ಯಗತಮಾಡುವ ಅಧಿಕಾರ ನೀಡಬೇಕು. ವಿಕೇಂದ್ರಿತ ಯೋಜನೆ ಇದಾಗಬೇಕು. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಈ ವ್ಯವಸ್ಥೆಗೆ ಒಪ್ಪಿಗೆ ನೀಡಬೇಕು. ಈಗ ಜಾರಿಯಲ್ಲಿರುವ ೧೦೦ ದಿನದ ಖಾತ್ರಿ ಉದ್ಯೋಗ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಸರ್ಕಾರ ವಿಫಲವಾಗಿದೆ. ಅದಕ್ಕಾಗಿ ತೆಗೆದಿಟ್ಟ ಹಣದಲ್ಲಿ ಡಿಸೆಂಬರ್ ೨೦೦೬ರವರೆಗೆ ಶೇಕಡ ೧೪ರಷ್ಟು ಮೊತ್ತವನ್ನು ಮಾತ್ರ ಬಳಸಲಾಯಿತು. ವರ್ಷಕ್ಕೆ ೧೦೦ ದಿನಗಳ ಕೆಲಸದ ಖಾತ್ರಿ ಎಂದು ಕೇಂದ್ರ ಸರ್ಕಾರ ಘೋಷಿಸಿದ್ದರೂ ಕೇವಲ ೧೬ ದಿನಗಳ ಕೆಲಸವನ್ನು ಮಾತ್ರ ಒದಗಿಸಲಾಯಿತು.

ಒಲ್ಲದ ರೈತರಿಂದ ಒತ್ತಾಯಪೂರ್ವಕವಾಗಿ ಅವರ ಭೂಮಿಯನ್ನು ಕಬಳಿಸಲು ಸರ್ಕಾರ ಮಾಡುತ್ತಿರುವ ಪ್ರಯತ್ನದಲ್ಲಿ ಶೇಕಡ ೫೦ರಷ್ಟಾದರೂ ಪ್ರಾಮಾಣಿಕವಾಗಿ ಪ್ರಯತ್ನ ಮಾಡಿದ್ದರೆ ವರ್ಷಪೂರ್ತಿ ಕೆಲಸ ನೀಡುವ ಭರವಸೆಯ ಯೋಜನೆಯನ್ನು ಕಾರ್ಯಗತಗೊಳಿಸುವ ದಿಶೆಯಲ್ಲಿ ಮೊದಲ ಹೆಜ್ಜೆ ಇಡಬಹುದಾಗಿತ್ತು.

ವರ್ಷಪೂರ್ತಿ ಕೆಲಸ ನೀಡುವ ಭರವಸೆಯ ಯೋಜನೆಯ ಮೂಲಕ ಮೂಲ ಶಿಕ್ಷಣ, ಆರೋಗ್ಯ ಮತ್ತು ಸಾಮಾಜಿಕ ಭದ್ರತೆಗೆ ಬೇಕಾದ ಹಣವನ್ನು ಹೊರಗಿನಿಂದ ತರುವ ಸಾಲದ ರೂಪದಲ್ಲಾಗಲಿ, ಭಾರತವನ್ನು ಸೂರೆ ಮಾಡಲು ಬಂಡವಾಳಶಾಹಿಗಳನ್ನು ಕರೆಸುವುದರಿಂದಾಗಲಿ ಯಾವ ಮೂಲಭೂತ ಸಮಸ್ಯೆ ಗಳಿಗೆ ಪರಿಹಾರ ದೊರಕುವುದಿಲ್ಲ. ನಮ್ಮ ಸಂಪನ್ಮೂಲ ಗಳಿಂದಲೇ ನಾವು ಆ ಹಣವನ್ನು ಪಡೆದು ಬಳಸು ವಂತಾಗಬೇಕು. ಬಡತನ ನಿರ್ಮೂಲನ ನಮ್ಮ ಮುಖ್ಯ ಗುರಿಯಾಗಬೇಕು. ಈ ಗುರಿ ಸಾಧನೆಗೆ ನಾವು ಪಟ್ಟಭದ್ರ ಹಿತಾಸಕ್ತಿಗಳ ನೆರವನ್ನು ಕೋರದೆ, ಗ್ರಾಮೀಣ ಕೈಗಾರಿಕೆ ಗಳನ್ನು ವಿಕೇಂದ್ರಿತ ರೀತಿಯಲ್ಲಿ ಆರಂಭಮಾಡುವ ಮೂಲಕ ನಮ್ಮ ಜನರ ಬಡತನ ಮತ್ತು ನಿರುದ್ಯೋಗ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬೇಕು.


ಎಚ್. ಎಸ್. ದೊರೆಸ್ವಾಮಿ
ಸಂಖ್ಯೆ ೭೬೧, ೩೭ನೇ ಅಡ್ಡರಸ್ತೆ, ೧೫ನೇ ಮುಖ್ಯರಸ್ತೆ, ಜಯನಗರ
'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

## ಹೆಚ್ಚುತ್ತಿರುವ ನಿವೃತ್ತರು ಮತ್ತು ನಿವೃತ್ತಿ ವೇತನದ ಸಮಸ್ಯೆ

**ಪಾ**ಶ್ಚಾತ್ಯ ರಾಷ್ಟ್ರಗಳಲ್ಲಿ ಒಂದು ಕಡೆ ಇಂದಿನ ಆರ್ಥಿಕ ದುಃಸ್ಥಿತಿಯ ಜೊತೆಗೆ ಬೆಳೆಯುತ್ತಿರುವ ನಿರುದ್ಯೋಗಿಗಳ ಸಂಖ್ಯೆಯ ಚಿಂತೆ, ಇನ್ನೊಂದು ಕಡೆ ಮುಂದಿನ ದಶಕಗಳಲ್ಲಿ ದುಡಿಯುವ ಕೈಗಳು ಕಮ್ಮಿಯಾಗಿ, ನಿವೃತ್ತರ ಬರಿಗೈ ಹೆಚ್ಚಾಗುವ, ವೃದ್ಧಾಪ್ಯದ ಚಿಂತೆ. ಮಾಧ್ಯಮಗಳಲ್ಲಿ ಮುಂದಿನ ಇಪ್ಪತ್ತು ಮುವತ್ತು ವರ್ಷಗಳಲ್ಲಿ ವೃದ್ಧರ ಸಂಖ್ಯೆ ವಿಪರೀತ ಹೆಚ್ಚಾಗಲಿದ್ದು ಯುವಕರ ಸಂಖ್ಯೆ ಕಡಿಮೆಯಾಗುವ ಸಂಭವದಿಂದಾಗಿ ಜನಸಂಖ್ಯೆಯಲ್ಲಿ ಆಗುವ ಏರುಪೇರುಗಳಿಂದ ಸಮಾಜದ ಮೇಲಾಗುವ ಪರಿಣಾಮಗಳ ಕುರಿತು ಚರ್ಚೆ ನಡೆಯುತ್ತಿದೆ. ವಿಶ್ವಸಂಸ್ಥೆಯ ಒಂದು ಅಂದಾಜಿನ ಪ್ರಕಾರ ಪ್ರಪಂಚದ ಇಂದಿನ ೬೯೦೦ ಕೋಟಿ ಜನಸಂಖ್ಯೆಯಲ್ಲಿ ೬೦ ವಯಸ್ಸು ದಾಟಿದವರ ಸಂಖ್ಯೆ ಸುಮಾರು ಶೇಕಡ ೧೧ರಷ್ಟಿದೆ. ೨೦೫೦ನೇ ಸಾಲಿನ ವೇಳೆಗೆ ಈ ಸಂಖ್ಯೆ ಶೇಕಡ ೨೨ಕ್ಕೆ ಏರಲಿದೆ. ಮುಂದುವರಿದ ರಾಷ್ಟ್ರಗಳಲ್ಲಿ ಅದು ಶೇಕಡ ೩೩ರಷ್ಟಾಗಲಿದೆ. ಅಂದರೆ ಶ್ರೀಮಂತ ರಾಷ್ಟ್ರಗಳಲ್ಲಿ ಪ್ರತಿ ಮೂರು ಮಂದಿ ದುಡಿಯುವ ಕೈಗಳಿಗೆ ಒಬ್ಬ ನಿವೃತ್ತ ಪಿಂಚಣಿದಾರನಿರುತ್ತಾನೆ. ಜೀವಾವಧಿ ಹೆಚ್ಚಿರುವುದರಿಂದ ಪ್ರತಿ ಹತ್ತು ಮಂದಿಗೆ ಒಬ್ಬ ೮೦ ವಯಸ್ಸು ದಾಟಿದ ವ್ಯಕ್ತಿ ಇರುತ್ತಾನೆ. ಮನುಷ್ಯನ ಸರಾಸರಿ ಆಯುಷ್ಯ (ಜೀವಾವಧಿ) ಹೆಚ್ಚಾಗುತ್ತಿರುವುದು ಸಂತೋಷದ ಸಂಗತಿಯೆ. ಅದೇ ಸಮಯದಲ್ಲಿ ಅದು ಹೊಸ ಸಮಸ್ಯೆಗಳನ್ನು ಹುಟ್ಟುಹಾಕುತ್ತಿದೆ. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ, ಅಂದರೆ ೧೯೦೦ರಲ್ಲಿ ಪ್ರಪಂಚದಲ್ಲಿ ಮನುಷ್ಯನ ಸರಾಸರಿ ಜೀವಾವಧಿ ೩೦ ವರ್ಷಗಳಾಗಿತ್ತು. ಶ್ರೀಮಂತ ದೇಶಗಳಲ್ಲಿ ಅದು ೫೦ ಆಗಿತ್ತು. ಈಗ ಅದು ಕ್ರಮವಾಗಿ ೬೭ ಮತ್ತು ೭೮ ವರ್ಷಗಳಾಗಿವೆ. ಇದರೊಂದಿಗೇ ಉದ್ಭವಿಸಿರುವ ಇನ್ನೊಂದು ಸಮಸ್ಯೆ ಎಂದರೆ ಪ್ರಪಂಚದಲ್ಲಿ ಎಲ್ಲೆಡೆಗಳಲ್ಲೂ ಸಂತಾನದ ಸಂಖ್ಯೆ ಇಳಿಮುಖವಾಗಿರುವುದು. ಒಂದು ಅಂದಾಜಿನಂತೆ ಪ್ರಪಂಚದಲ್ಲಿ ೧೯೭೦ರ ದಶಕದಲ್ಲಿ ಹೆಂಗಸರು ಸರಾಸರಿ ತಲಾ ೪.೩ ಮಕ್ಕಳನ್ನು ಹೆರುತ್ತಿದ್ದರು. ಈಗ ಆ ಸಂಖ್ಯೆ ೨.೬ಕ್ಕೆ ಇಳಿದಿದೆ. ಶ್ರೀಮಂತ ರಾಷ್ಟ್ರಗಳಲ್ಲಿ ಅದು ೧.೬ಕ್ಕೆ ಇಳಿದಿದೆ. ವಿಶ್ವಸಂಸ್ಥೆ ನಡೆಸಿರುವ ಅಧ್ಯಯನದ ಪ್ರಕಾರ ೨೦೫೦ರ ವೇಳೆಗೆ ಪ್ರಪಂಚದಲ್ಲಿ ಈ ಸಂಖ್ಯೆ ಸರಾಸರಿ ೨ ಆಗುವ ನಿರೀಕ್ಷೆ ಇದೆ. ಈ ಬೆಳವಣಿಗೆಗಳಿಂದ ಆಗುವ ಸಾಮಾಜಿಕ ಆರ್ಥಿಕ ಪರಿಣಾಮಗಳೇ ಚರ್ಚೆಗೆ ಗ್ರಾಸ.

**ಸೀಯಾರ್ಕೆ**

ಬಂಡವಾಳಶಾಹಿ ದೇಶಗಳಲ್ಲಿ ಅದರಲ್ಲೂ ಅಮೆರಿಕಾ ಮತ್ತು ಶ್ರೀಮಂತ ಐರೋಪ್ಯ ರಾಷ್ಟ್ರಗಳಲ್ಲಿ ನಿವೃತ್ತಿ ವೇತನ ಭರಿಸುವುದು ದೊಡ್ಡ ಸಮಸ್ಯೆಯಾಗತೊಡಗಿದೆ. ಪೆನ್ಶನ್‌ದಾರರ ಸಂಖ್ಯೆ ಹೆಚ್ಚುವುದರ ಜೊತೆಗೆ, ಜೀವಿತಾವಧಿಯೂ ಹೆಚ್ಚಿರುವುದರಿಂದ ಪೆನ್ಶನ್‌ಗಳ ಹೊರೆಯೂ ಹೆಚ್ಚಾಗಲಿದೆ. ಹಾಗಾಗಿ ಕೆಲ ಪಾಶ್ಚಾತ್ಯ ದೇಶಗಳಲ್ಲಿ ಈಗ ನಿವೃತ್ತಿಯ ವಯಸ್ಸನ್ನು ೬೪ರಿಂದ ೬೭ರವರೆಗೆ ಹೆಚ್ಚಿಸಿದ್ದಾರೆ. ಹಾಗಿದ್ದರೂ ಇಪ್ಪತ್ತೈದು ವರ್ಷಗಳು ಅಧಿಕ ಸಂಖ್ಯೆಯ ಜನರಿಗೆ ಪೆನ್ಶನ್ ನೀಡಬೇಕಾಗಿರುತ್ತದೆ. ಈ ಅಧಿಕ ವೆಚ್ಚದ ಹೊರೆ ಮುಂದಿನ ವರ್ಷಗಳಲ್ಲಿ ಏರುತ್ತಲೇ ಹೋಗುತ್ತದೆ. ಉದಾಹರಣೆಗೆ, ಅಮೆರಿಕಾದಲ್ಲಿ ನಿವೃತ್ತಿಗೆ ಅಧಿಕೃತ ವಯಸ್ಸು ೬೬. ಆದರೆ ಸಾಮಾನ್ಯವಾಗಿ ಅಮೆರಿಕಾದ ನಾಗರಿಕರು ೬೪ನೇ ವಯಸ್ಸಿನಲ್ಲಿ ನಿವೃತ್ತರಾಗುತ್ತಾರೆ. ಕನಿಷ್ಠ ಮುಂದಿನ ೧೬ ವರ್ಷಗಳು ಅವರು ನಿವೃತ್ತಿವೇತನ ಪಡೆಯುತ್ತಾರೆ. ೧೯೩೫ರಲ್ಲಿ ಪಿಂಚಣಿ ವಿತರಣೆಯ ಮೊತ್ತ ದೇಶದ ನಿವ್ವಳ ಉತ್ಪನ್ನದ ಶೇಕಡ ೦.೨ರಷ್ಟಿತ್ತು. ಈಗ ಅದು ಶೇಕಡ ೨ರಷ್ಟು ಆಗಿದೆ. ಇದರಲ್ಲಿ ಖಾಸಗಿ ಪೆನ್ಶನ್ ನೀಡಿಕೆಯನ್ನು ಹಾಗೂ ವೃದ್ಧಾಪ್ಯದಲ್ಲಿ ಒದಗಿಸುವ ವೈದ್ಯಕೀಯ ಸೌಲಭ್ಯ ವೆಚ್ಚ ಸೇರಿಸಿಲ್ಲ. ೨೦೫೦ರ ವೇಳೆಗೆ ಅಮೆರಿಕಾ ಸರಕಾರಕ್ಕೆ ಸಾಮಾಜಿಕ ಭದ್ರತೆಯ ಕಾರ್ಯಕ್ರಮದ ಅಡಿಯಲ್ಲಿ ನೀಡಿರುವ ಭರವಸೆಯನ್ನು ಪೂರೈಸುವುದು ತಲೆನೋವಾಗಿದೆ. ಒಂದು ಕಾಲದಲ್ಲಿ ಅಮೆರಿಕಾದಲ್ಲಿ ಶತಾಯುಷಿಗಳು ಅಪರೂಪವಾಗಿದ್ದರು. ಈಗ ಅವರ ಸಂಖ್ಯೆ ೧೦೦,೦೦೦ವನ್ನು ಮೀರಿದೆ. ಹಾಗಾಗಿ, ಮುಂದಿನ ದಶಕಗಳಲ್ಲಿ ವಯೋವೃದ್ಧರ ಪೋಷಣೆ ದೊಡ್ಡ ಸವಾಲಾಗಿ ಪರಿಣಮಿಸಲಿದೆ.

ಜಗತ್ತಿನಲ್ಲಿ ಮೊತ್ತಮೊದಲು ನಿವೃತ್ತಿವೇತನ ಜಾರಿಗೆ ಬಂದದ್ದು ಜರ್ಮನಿಯಲ್ಲಿ. ೧೮೮೯ರಲ್ಲಿ ಆಟ್ಟೊವಾನ್ ಬಿಸ್ಮಾರ್ಕ್ ೭೦ ವರ್ಷ ವಯಸ್ಸಾದ ಕೆಲಸಗಾರರಿಗೆ ನಿವೃತ್ತಿ ವೇತನ ವ್ಯವಸ್ಥೆ ಜಾರಿಗೆ ತಂದ. ಆಗ ಮನುಷ್ಯನ ಸರಾಸರಿ ಜೀವಾವಧಿ ೪೫ ವರ್ಷ ಆಗಿತ್ತು. ಬ್ರಿಟನ್ನಿನಲ್ಲಿ ನಿವೃತ್ತಿ ವೇತನ ಕಾಯಿದೆ ಬಂದದ್ದು ೧೯೦೮ರಲ್ಲಿ. ೭೦ ವರ್ಷ ವಯಸ್ಸಾದ ಕಾರ್ಮಿಕರಿಗೆ ವಾರಕ್ಕೆ ೫ ಷಿಲ್ಲಿಂಗ್‌ನಂತೆ ನಿವೃತ್ತಿ ವೇತನ ನೀಡಬೇಕೆಂದು ವಿಧಿಸಲಾಗಿತ್ತು. ಆಗ ಸರಾಸರಿ ಜೀವಾವಧಿ ೫೦ ವಯಸ್ಸು. ಅದೃಷ್ಟ ಚೆನ್ನಾಗಿದ್ದು ಬದುಕಿದ್ದವರು ಪೆನ್ಶನ್ ಪಡೆಯುತ್ತಿದ್ದರು. ಅಮೆರಿಕಾದಲ್ಲಿ ಸಾಮಾಜಿಕ ಭದ್ರತಾ ವ್ಯವಸ್ಥೆ ಬಂದದ್ದು ೧೯೩೫ರಲ್ಲಿ. ನಿವೃತ್ತಿಯ ವಯಸ್ಸು ೬೫ ಎಂದು ನಿಗದಿಯಾಗಿತ್ತು. ಆಗ ಅಮೆರಿಕನ್ನರ ಸರಾಸರಿ ಆಯುಷ್ಯ ೬೨ ಆಗಿತ್ತು. ಈಗ ಪರಿಸ್ಥಿತಿ ಬೇರೆಯೇ ಆಗಿದೆ. ದುಡಿಯುವವರ ಸಂಖ್ಯೆ ಕಡಿಮೆಯಾಗಿದ್ದು, ಕೂತು ತಿನ್ನುವವರ ಸಂಖ್ಯೆ ಅಧಿಕವಾಗುವ ಸಮಸ್ಯೆಯನ್ನು ಹೇಗೆ ನಿಭಾಯಿಸುವುದು ಎನ್ನುವುದು ಶ್ರೀಮಂತ ದೇಶಗಳ ಸರಕಾರಗಳ ಮುಂದಿರುವ ಸಮಸ್ಯೆಯಾಗಿದೆ. ಈ ಬಗ್ಗೆ ಈಗಾಗಲೇ ಚರ್ಚೆಗಳು ನಡೆಯುತ್ತಿವೆ. ನಿವೃತ್ತಿ ವಯಸ್ಸನ್ನು ಹೆಚ್ಚಿಸುವ ಜೊತೆಗೆ, ಶಕ್ತಿಯಿರುವವರೆಗೆ ದುಡಿವ ಯೋಜನೆಯನ್ನು ಜಾರಿಗೆ ತರುವ ಸೂಚನೆ ಇದೆ.



## ಬ್ರಿಟನ್ನಿನಲ್ಲಿ ಹೆಚ್ಚುತ್ತಿರುವ ವಿದ್ಯುಚ್ಛಕ್ತಿ ಬೇಡಿಕೆ: ಭವಿಷ್ಯದ ಬಗ್ಗೆ ಕಾತರ

**ಬ್ರಿ**ಟನ್ನಿನಲ್ಲಿ ವಿದ್ಯುಚ್ಛಕ್ತಿ ಬಳಕೆ ಒಂದೇ ಸಮನೆ ಏರುತ್ತಿದೆ. ವಿದ್ಯುಚ್ಛಕ್ತಿ ಉತ್ಪಾದನೆ ಆಕರಗಳು ಕುಗ್ಗುತ್ತಿರುವ ಹಿನ್ನೆಲೆಯಲ್ಲಿ ಜನ ಭವಿಷ್ಯದ ಬಗ್ಗೆ ಕಾತರಗೊಂಡಿದ್ದಾರೆ. ರಾಜಕಾರಣಿಗಳು, ಆಡಳಿತಗಾರರು ಈ ವಿಚಾರದಲ್ಲಿ ಸರಿಯಾಗಿ ಗಮನಹರಿಸುತ್ತಿಲ್ಲ ಎನ್ನುವ ಆಕ್ಷೇಪ ಇದೆ. ಪರಿಸ್ಥಿತಿ ಹೀಗೇ ಮುಂದುವರಿದರೆ ಮುಂದೊಂದು ದಿನ ವಿದ್ಯುದ್ದೀಪಗಳು ನಂದಿ ಕತ್ತಲೆ ಆವರಿಸೀತು ಎಂಬ ಭೀತಿ ಆವರಿಸಿದೆ. ಪರ್ಯಾಯ ವ್ಯವಸ್ಥೆ ಕುರಿತು ಈಗಾಗಲೇ ಚರ್ಚೆ ಪ್ರಾರಂಭವಾಗಿದೆ. ಮೂವತ್ತು ವರ್ಷಗಳಿಂದ ಬ್ರಿಟಿಷ್ ರಾಜಕಾರಣಿಗಳು ಉತ್ತರ ಸಮುದ್ರದಿಂದ ಲಭಿಸುತ್ತಿರುವ ಇಂಧನದ ಉತ್ಪತ್ತಿ ಕಡಿಮೆಯಾಗುತ್ತಿರುವ ಬಗ್ಗೆ ಕಾಳಜಿ ತೋರಿಲ್ಲ. ದೇಶದಲ್ಲಿರುವ ಕಲ್ಲಿದ್ದಲು ಬಳಸುವ ತಾಪ ವಿದ್ಯುತ್ ಕೇಂದ್ರಗಳು ಹಾಗೂ ನ್ಯೂಕ್ಲಿಯರ್ ವಿದ್ಯುತ್ ಕೇಂದ್ರಗಳು ಹಳತಾಗಿದ್ದು ಮುಚ್ಚುವ ಸಂಭವ ಹೆಚ್ಚಾಗುತ್ತಿದೆ.

೨೦೦೯ರಲ್ಲಿ ಬ್ರಿಟನ್ನಿನಲ್ಲಿ ವಿದ್ಯುಚ್ಛಕ್ತಿ ಬೇಡಿಕೆ ೫೯ ಗಿಗಾವಾಟ್ (೧೦೯)ಗಳಷ್ಟಾಗಿತ್ತು. ಇದರಲ್ಲಿ ಶೇಕಡ ೪೫ರಷ್ಟು ಭಾಗ ಉತ್ತರ ಸಮುದ್ರದಲ್ಲಿ ಲಭಿಸುವ ಇಂಧನಾನಿಲದಿಂದ ಉತ್ಪಾದನೆಯಾಗುವ ಸ್ಥಾವರಗಳಿಂದ ಲಭ್ಯವಾಗಿತ್ತು. ಇನ್ನು ಶೇಕಡ ೩೫ರಷ್ಟು ಭಾಗ ಕಲ್ಲಿದ್ದಲು ಬಳಸುವ ಸ್ಥಾವರಗಳಿಂದ, ಶೇಕಡ ೧೫ರಷ್ಟು ನ್ಯೂಕ್ಲಿಯರ್ ಸ್ಥಾವರಗಳಿಂದ ಲಭ್ಯವಾಗಿತ್ತು. ೨೦೧೫ರ ವೇಳೆಗೆ ದೇಶದಲ್ಲಿ ವಿದ್ಯುಚ್ಛಕ್ತಿ ಬೇಡಿಕೆ ೬೪ ಗಿಗಾವಾಟ್‌ಗಳ ಮಟ್ಟಕ್ಕೆ ಹೆಚ್ಚುವ ಸಾಧ್ಯತೆ ಇದೆ. ಈ ಬೇಡಿಕೆ ಪೂರೈಸಲು ಸಾಧ್ಯವೇ ಎನ್ನುವುದೇ ಪ್ರಶ್ನೆ.

ಈವರೆಗೆ ಉತ್ತರ ಸಮುದ್ರದಿಂದ ಉತ್ಪಾದನೆಯಾಗುವ ಇಂಧನಾನಿಲ ಬ್ರಿಟನ್ನಿಗೆ ವರದಾನವಾಗಿತ್ತು. ೧೯೯೯ರ ನಂತರ ಅದರ ಉತ್ಪಾದನೆ ಇಳಿಮುಖವಾಗಿ ಈಗ ಅದು ಅರ್ಧದಷ್ಟು ಕಡಿಮೆಯಾಗಿದೆ. ೨೦೧೫ರ ವೇಳೆಗೆ ಉತ್ಪಾದನೆ ಮೂರನೇ ಎರಡರಷ್ಟು ಕಡಿಮೆಯಾಗಲಿದೆ. ಕೊರತೆಯನ್ನು ರಷ್ಯಾದಿಂದ ಖರೀದಿಸಿ ಇಂಧನಾನಿಲ ಪೂರೈಸಬೇಕಾಗುತ್ತದೆ. ಈಗ ಸದ್ಯದಲ್ಲಿ ಪೂರಕವಾಗಿ ಅನ್ಯ ಮೂಲಗಳಿಂದ ವಿದ್ಯುತ್‌ಪೂರೈಕೆಯಾಗುತ್ತಿದೆ. ೨೦೧೫ರ ವೇಳೆಗೆ ದೇಶದ ೧೦ ನ್ಯೂಕ್ಲಿಯರ್ ವಿದ್ಯುತ್ ಕೇಂದ್ರಗಳಲ್ಲಿ ಉತ್ಪಾದನೆ ಸ್ಥಗಿತಗೊಳ್ಳಲಿದೆ. ಮತ್ತೆ ಕಲ್ಲಿದ್ದಲು ಬಳಸುವ ವಿದ್ಯುತ್ ಸ್ಥಾವರಗಳು ಹಳೆಯವಾಗಿವೆ. ಹೊಸ ಸ್ಥಾವರಗಳೇನೂ ಈಚೆಗೆ ಸ್ಥಾಪನೆಗೊಂಡಿಲ್ಲ. ೧೯೯೦ರಲ್ಲಿ ಬ್ರಿಟನ್ನಿನಲ್ಲಿ ಸರಕಾರ ವಿದ್ಯುಚ್ಛಕ್ತಿ ಉತ್ಪಾದನಾ ಸ್ಥಾವರಗಳನ್ನು ಖಾಸಗಿ ಕ್ಷೇತ್ರದ ನಿರ್ವಹಣೆಗೆ ವಹಿಸಿಕೊಟ್ಟಿತು. ಆದರೆ ಖಾಸಗಿ ಕ್ಷೇತ್ರ ಉತ್ಪಾದನೆಗೆ ಹೊಸ ಮೂಲಗಳನ್ನು ಅರಸುವ ಗೋಜಿಗೆ ಹೋಗಿಲ್ಲ. ಮುಂದಿನ ದಶಕಗಳಲ್ಲಿ ಇದರಿಂದಾಗಿ ವಿದ್ಯುತ್ ಸಮಸ್ಯೆ ತೀವ್ರವಾಗುವ ಸಂಭವವೇ ಹೆಚ್ಚು. ಅನ್ಯದೇಶಗಳ ಮೇಲೆ ಅವಲಂಬನೆಗೆ ಶರಣಾಗದೆ ಈಗಲೇ ಮುಂದಾಲೋಚನೆ ಮಾಡುವುದು ಸೂಕ್ತ ಎಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ.

## ಲಿಬಿಯಾ ಖೈದಿ ಬಿಡುಗಡೆ ಹಗರಣ

**ಲಾ**ಕರ್‌ಬಿ ಬಾಂಬ್ ಪ್ರಕರಣದ ಆರೋಪಿ ಲಿಬಿಯಾದ ಅಬ್ದುಲ್ ಬಾಸೆಟ್ ಅಲ್ ಮೆಗ್ರಾಹಿಯ ಬಿಡುಗಡೆ ಮತ್ತು ಆಫ್ಘಾನಿಸ್ತಾನದಲ್ಲಿ ಹೆಚ್ಚುತ್ತಿರುವ ಬ್ರಿಟಿಷ್ ಯೋಧರ ಹತ್ಯೆ ಬ್ರಿಟನ್ನಿನಲ್ಲಿ ಬಿರುಗಾಳಿ ಎಬ್ಬಿಸಿದೆ. ಪತ್ರಿಕೆಗಳಲ್ಲಿ ಮತ್ತು ಟಿ ವಿ ಮಾಧ್ಯಮದಲ್ಲಿ ಪ್ರತಿನಿತ್ಯ

ಇವುಗಳನ್ನು ಕುರಿತು ತೀವ್ರವಾದ ಚರ್ಚೆ ನಡೆಯುತ್ತಿದೆ. ಮೆಗ್ರಾಹಿಯ ಬಿಡುಗಡೆ ಮತ್ತು ಲಿಬಿಯಾದ ರಾಜಧಾನಿಯಲ್ಲಿ ಆತನಿಗೆ ನೀಡಿದ ಸ್ವಾಗತ ಅಮೆರಿಕಾದ ಸರಕಾರವನ್ನು ರೊಚ್ಚಿಗೆಬ್ಬಿಸಿದೆ. ಈ ಪ್ರಕರಣ ಅಮೆರಿಕಾ ಮತ್ತು ಬ್ರಿಟನ್‌ಗಳ ಮಧ್ಯೆ ಸಂಬಂಧವನ್ನು ಕದಡಿದೆ. ಅನುಕಂಪದ ಆಧಾರದ ಮೇಲೆ ಮೆಗ್ರಾಹಿಯ ಬಿಡುಗಡೆಯನ್ನು ಅಮೆರಿಕಾ ತೀವ್ರವಾಗಿ ವಿರೋಧಿಸಿತ್ತು. ಈ ಪ್ರಕರಣದಲ್ಲಿ ಬ್ರಿಟಿಷ್ ಸರಕಾರ ಬೇರೆ ಕಾರಣಗಳಿಗಾಗಿ ಶಾಮೀಲಾಗಿದೆ ಎಂದು ಅಮೆರಿಕಾದ ಅಧ್ಯಕ್ಷ ಒಬಾಮಾ ಸರಕಾರ ಆರೋಪಿಸಿದೆ. ಎರಡೂ ಸರಕಾರಗಳ ನಡುವೆ ರಾಜತಾಂತ್ರಿಕ ಮಟ್ಟದಲ್ಲಿ ಆರೋಪ ಪ್ರತ್ಯಾರೋಪಗಳ ಜಗ್ಗಾಟ ನಡೆಯುತ್ತಿದೆ. ಅನುಕಂಪದ ಆಧಾರದ ಮೇಲೆ ಸ್ಕಾಟ್ಲೆಂಡ್ ಸರಕಾರ ಜೀವಾವಧಿ ಶಿಕ್ಷೆಗೆ ಗುರಿಯಾಗಿದ್ದ ಅಲ್ ಮೆಗ್ರಾಹಿಯನ್ನು ಆಗಸ್ಟ್ ೨೦ರಂದು ಕಾರಾಗೃಹದಿಂದ ಬಿಡುಗಡೆ ಮಾಡಿತು. ಬಿಡುಗಡೆಯಾದಾಗ ಆತ ತೀವ್ರವಾದ ಮಾರಣಾಂತಿಕ ಕ್ಯಾನ್ಸರ್ ಕಾಯಿಲೆಯಿಂದ ನರಳುತ್ತಿದ್ದ. ಈ ವಿಷಯದಲ್ಲಿ ತೀರ್ಮಾನವು ಸ್ಕಾಟಿಷ್ ಸರಕಾರದ್ದೇ ಆಗಿದ್ದರೂ, ಬ್ರಿಟಿಷ್ ಸರಕಾರ ಲಿಬಿಯಾದ ಜೊತೆ ವ್ಯಾವಹಾರಿಕ ಸಂಬಂಧ ಕುದುರಿಸಲು ಕುಮ್ಮಕ್ಕು ನೀಡಿದೆ ಎನ್ನುವುದು ಸಾಬೀತಾಗಿದೆ.




ಲಾಕರ್‌ಬಿ ಬಾಂಬ್ ಪ್ರಕರಣ ಎಂದು ಹೆಸರುವಾಸಿಯಾಗಿರುವ ವಿಮಾನ ದುರಂತ ಸಂಭವಿಸಿದ್ದು ೧೯೮೮ರ ಡಿಸೆಂಬರ್‌ನಲ್ಲಿ. ಸ್ಕಾಟ್ಲೆಂಡಿನ ಲಾಕರ್‌ಬಿ ಎಂಬ ಸಣ್ಣ ನಗರದ ಬಳಿ ಅಮೆರಿಕಾದ ಪಾನ್ ಆಮ್ ವಿಮಾನದಲ್ಲಿರಿಸಿದ್ದ ಬಾಂಬ್ ಸ್ಫೋಟಗೊಂಡು ವಿಮಾನದಲ್ಲಿ ಪ್ರಯಾಣಿಸುತ್ತಿದ್ದ ೨೭೦ ಮಂದಿಯೂ ಮೃತರಾದರು. ಇವರಲ್ಲಿ ೧೮೯ ಮಂದಿ ಅಮೆರಿಕಾದ ನಾಗರಿಕರು. ಈ ದುಷ್ಕೃತ್ಯದ ಹಿಂದೆ ಲಿಬಿಯಾ ಸರಕಾರದ ಕೈವಾಡವಿದೆ ಎಂಬ ಆರೋಪ ಇತ್ತು. ಲಿಬಿಯಾದ ಅಧಿಪತಿ ಕರ್ನಲ್ ಗದಾಫಿ ಆಡಳಿತ ಈ ಭಯೋತ್ಪಾದನಾ ಕೃತ್ಯಕ್ಕೆ ಪ್ರೇರಣೆ ನೀಡಿತ್ತು ಎಂದು ಸಾಬೀತುಪಡಿಸಲು ಲಿಬಿಯಾದ ಗುಪ್ತದಳದ ಮೆಗ್ರಾಹಿ ಮತ್ತು ಇನ್ನೊಬ್ಬ ಲಿಬಿಯಾ ನಾಗರಿಕನನ್ನು ಆರೋಪಿಗಳೆಂದು ವಿಚಾರಣೆಗೆ ಗುರಿಪಡಿಸಲಾಯಿತು. ಸ್ಕಾಟಿಷ್ ಕಾಯಿದೆಯಡಿಯಲ್ಲಿ ನೆದರ್‌ಲ್ಯಾಂಡ್ಸ್‌ನ ನ್ಯಾಯಾಲಯದಲ್ಲಿ ವಿಚಾರಣೆ ನಡೆದು ಮೆಗ್ರಾಹಿಗೆ ಶಿಕ್ಷೆಯಾಗಿ, ಅವನ ಸಂಗಾತಿಗೆ ಬಿಡುಗಡೆಯಾಯಿತು. ಇವೆಲ್ಲ ಹಿಂದಿನ ಕತೆ. ಆಗ ಪಶ್ಚಿಮ ರಾಷ್ಟ್ರಗಳ ದೃಷ್ಟಿಯಲ್ಲಿ ಲಿಬಿಯಾದ ಗದಾಫಿ ಭಯೋತ್ಪಾದಕ, ಎದುರಾಳಿ. ಈಗ ಗದಾಫಿ ಭಯೋತ್ಪಾದನೆ ವಿರುದ್ಧ ಸಮರದಲ್ಲಿ ಪಾಶ್ಚಾತ್ಯರ ಮಿತ್ರ. ಈ ಪರಿವರ್ತನೆಯ ಹಿಂದೆ ನಡೆದ ವ್ಯವಹಾರದಲ್ಲಿ ಮೆಗ್ರಾಹಿ ಬಿಡುಗಡೆಯೂ ಸೇರಿದೆ ಎಂಬ ಬಲವಾದ ಸಂಶಯ ಇದೆ. ಬ್ರಿಟನ್ ಮತ್ತು ಲಿಬಿಯಾಗಳ ಮಧ್ಯೆ ಕೆಲವರ್ಷಗಳಿಂದ ವ್ಯಾಪಾರ ವಹಿವಾಟು ವರ್ಧಿಸಿದೆ.

ಒಂದು ವರ್ಷದ ಹಿಂದೆಯಷ್ಟೆ ಎರಡೂ ದೇಶಗಳ ನಡುವೆ ಖೈದಿಗಳ ಹಸ್ತಾಂತರದ ಬಗ್ಗೆ ಒಪ್ಪಂದಕ್ಕೆ ಸಹಿಯಾಗಿತ್ತು. ಬ್ರಿಟನ್ನಿನ ವಾಣಿಜ್ಯ ಸಚಿವ ಲಾರ್ಡ್ ಮೆಂಡೆಲ್ಸನ್ ಎರಡು ಬಾರಿ ಗದಾಫಿಯ ಮಗನನ್ನು ಭೇಟಿಯಾಗಿ ಮಾತುಕತೆ ನಡೆಸಿದ್ದರು. ಅದಲ್ಲದೆ ಕಳೆದ ೧೫ ತಿಂಗಳಲ್ಲಿ ಮೂವರು ಬ್ರಿಟಿಷ್ ಸಚಿವರು ಲಿಬಿಯಾಗೆ ಭೇಟಿ ನೀಡಿದ್ದರು ಮತ್ತು ಪ್ರಮುಖ ಉದ್ದಿಮೆದಾರರು ಭೇಟಿ ನೀಡಿದ್ದರು. ೨೦೦೮ರಲ್ಲಿ ಲಿಬಿಯಾದಿಂದ ಬ್ರಿಟನ್ ಒಂದು ಬಿಲಿಯನ್ ಪೌಂಡ್ ವ್ಯಾಪಾರ ವಹಿವಾಟು ನಡೆಸಿದೆ. ಮುಖ್ಯವಾಗಿ ತೈಲ ಆಮದು ಮಾಡಿಕೊಂಡಿದೆ. ೨೦೧೩ರ ವೇಳೆಗೆ ಬ್ರಿಟಿಷ್ ಉದ್ಯಮಗಳು ಲಿಬಿಯಾದ ತೈಲೋತ್ಪಾದನೆಯನ್ನು ದಿನಕ್ಕೆ ೧.೭ ಮಿಲಿಯ ಬ್ಯಾರೆಲ್‌ಗಳಿಂದ ೩ ಮಿಲಿಯ ಬ್ಯಾರೆಲ್‌ಗಳಿಗೆ ಹೆಚ್ಚಿಸಲು ಯೋಜನೆ ರೂಪಿಸಿವೆ. ಲಿಬಿಯಾದಲ್ಲಿ ಈಗ ಸುಮಾರು ೧೫೦ ಬ್ರಿಟಿಷ್ ಕಂಪನಿಗಳು ವ್ಯಾಪಾರದಲ್ಲಿ ತೊಡಗಿವೆ. ಅಮೆರಿಕಾದ ಉದ್ಯಮ ಸಂಸ್ಥೆಗಳೂ ಲಿಬಿಯಾದಲ್ಲಿ ಪ್ರವೇಶಿಸಲು ಪ್ರಯತ್ನಿಸುತ್ತಿವೆ. ಗದಾಫಿ ಲಿಬಿಯಾದಲ್ಲಿ ಅಧಿಕಾರಕ್ಕೆ ಬಂದ ಮೇಲೆ ೩೬ ವರ್ಷಗಳ ನಂತರ ಮೊದಲ ಬಾರಿಗೆ ಈಗ ಅಮೆರಿಕಾ ರಾಯಭಾರಿ ಕಚೇರಿಯನ್ನು ತೆರೆದಿದೆ. ಲಿಬಿಯಾದ ಮಾರುಕಟ್ಟೆಯಲ್ಲಿ ಬ್ರಿಟನ್ ಸಿಂಹಪಾಲು ಪಡೆದು ಕೊಂಡಿರುವುದೇ ಅಮೆರಿಕಾ ಸರಕಾರದ ಅಸಮಾಧಾನಕ್ಕೆ ಮೂಲ. ಮೆಗ್ರಾಹಿ ಬಿಡುಗಡೆ ಈಗ ಆಕ್ರೋಶಕ್ಕೆ ಎಡೆಮಾಡಿಕೊಟ್ಟಿದೆ. ಲಾಕರ್‌ಬಿ ದುರಂತದಲ್ಲಿ ಸಾವಿಗೀಡಾದವರು ಪ್ರಧಾನವಾಗಿ ತಮ್ಮ ದೇಶದವರಾಗಿರುವುದರಿಂದ ಮೆಗ್ರಾಹಿ ಬಿಡುಗಡೆ ದ್ರೋಹ ಬಗೆದಂತಾಗಿದೆ ಎನ್ನುವುದು ಅಮೆರಿಕಾದ ಅಂಬೋಣ. ಆದರೆ ಅದರ ಹಿಂದಿರುವ ಕಾರಣಗಳು ಮಾತ್ರ ವ್ಯಾಪಾರ.

ಮೆಗ್ರಾಹಿಯ ಬಿಡುಗಡೆಯ ವಿಚಾರ ಇಂದು ನಿನ್ನೆಯದಲ್ಲ. ಆತ ಕ್ಯಾನ್ಸರ್‌ಪೀಡಿತನಾಗಿದ್ದು ಸಾವಿನ ದವಡೆಯಲ್ಲಿರುವನೆಂಬ ಅನುಕಂಪದಿಂದಲೂ ಅಲ್ಲ. ಈ ಬಗ್ಗೆ ಮೂರು ನಾಲ್ಕು ವರ್ಷಗಳಿಂದ ಲಿಬಿಯಾ ಸರಕಾರದೊಂದಿಗೆ ಮಾತುಕತೆ ರಹಸ್ಯವಾಗಿ ನಡೆದಿತ್ತು. ೨೦೦೪ರಲ್ಲಿ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಗದಾಫಿಯನ್ನು ಭೇಟಿಯಾದಾಗ ಈ ವಿಷಯ ಪ್ರಸ್ತಾಪಕ್ಕೆ ಬಂದಿತ್ತು. ಈ ಭೇಟಿಯ ಸಂದರ್ಭದಲ್ಲಿ ತೈಲದ ಆಮದಿಗೆ ಒಪ್ಪಂದವಾಗಿತ್ತು. ಮತ್ತೆ ೨೦೦೭ರಲ್ಲೂ ಬ್ಲೇರ್ ಲಿಬಿಯಾಗೆ ಭೇಟಿ ನೀಡಿದ್ದುದನ್ನು ಈಗ ಗಮನಕ್ಕೆ ತರಲಾಗಿದೆ. ಮೆಗ್ರಾಹಿಯ ಬಿಡುಗಡೆ ಸಂಪೂರ್ಣವಾಗಿ ಸ್ಕಾಟ್ಲೆಂಡಿನ ಸರಕಾರದ ತೀರ್ಮಾನ ಎಂದು ಬ್ರಿಟನ್ ಕೈತೊಳೆದುಕೊಂಡಿದೆ. ಆದರೆ ಈ ಪ್ರಕರಣ ದೊಡ್ಡ ವಿವಾದವನ್ನು ಸೃಷ್ಟಿಸಿದೆ.

* * *

ಅಫ್ಘಾನಿಸ್ತಾನದ ಅಧ್ಯಕ್ಷೀಯ ಚುನಾವಣೆಯ ಸಮಯದಲ್ಲಿ ಒಂದು ವಾರದಲ್ಲಿ ೧೯ ಮಂದಿ ಬ್ರಿಟಿಷ್ ಯೋಧರ ಹತ್ಯೆ ಬ್ರಿಟಿಷ್ ನಾಗರಿಕರನ್ನು ತಲ್ಲಣಗೊಳಿಸಿದೆ. ತಮ್ಮದಲ್ಲದ, ತಮಗೆ ಸಂಬಂಧವಿಲ್ಲದ ಯುದ್ಧದಲ್ಲಿ ಇದುವರೆಗೆ ೨೧೦ ಮಂದಿ ಬ್ರಿಟಿಷ್ ಯೋಧರು ಸಾವಿಗೀಡಾಗಿರುವುದು ಜನರಲ್ಲಿ ಆಕ್ರೋಶ ಉಂಟುಮಾಡಿದೆ. ಅಫ್ಘಾನಿಸ್ತಾನ ಮತ್ತು ಇರಾಕಿನಿಂದ ಬ್ರಿಟಿಷ್ ಯೋಧರನ್ನು ವಾಪಸು ಕರೆಸಿಕೊಳ್ಳಬೇಕೆಂದು ಬಲವಾದ ಒತ್ತಾಯ ಇದ್ದೇ ಇದೆ. ಭಯೋತ್ಪಾದನೆಯ ವಿರುದ್ಧ ಸಮರದಲ್ಲಿ ಸಾವಿಗೀಡಾದ ಯೋಧರ ಸಂಖ್ಯೆ ಒಂದು ಬಗೆಯಾದರೆ, ಗಾಯಗೊಂಡವರ ಸಂಖ್ಯೆ ದೊಡ್ಡ ಸವಾಲಾಗಿ ಪರಿಣಮಿಸಿದೆ. ಅಫ್ಘಾನಿಸ್ತಾನದಲ್ಲಿ ಗಾಯಗೊಂಡ ಬ್ರಿಟಿಷ್ ಯೋಧರ ಸಂಖ್ಯೆ ೩೦೦೦ವನ್ನು ದಾಟಿದೆ. ಗಾಯಗೊಂಡವರಲ್ಲಿ ಕೈಕಾಲು ಕಳೆದುಕೊಂಡು ಗಾಲಿಕುರ್ಚಿಯ ಮೇಲೆ ಜೀವನ ಸಾಗಿಸುತ್ತಿರುವವರ ಬವಣೆ ಚಿಂತಾಜನಕವಾಗಿದೆ. ಬ್ರಿಟಿಷ್ ಸರಕಾರ ಇಂಥ ಯೋಧರಿಗೆ ನೀಡುತ್ತಿರುವ ಸೌಲಭ್ಯಗಳು, ಪರಿಹಾರ ತೀರ ಕಡಿಮೆ. ಇದರ ಬಗ್ಗೆ ಸಾರ್ವಜನಿಕರು ಕಳವಳ ವ್ಯಕ್ತಪಡಿಸುತ್ತಿದ್ದಾರೆ. ಕೆಲವು ಖಾಸಗಿ ಸಂಸ್ಥೆಗಳು ಗಾಯಗೊಂಡಿರುವ ಇಂಥ ಯೋಧರ ನೆರವಿಗೆ ಬಂದಿದ್ದರೂ ಅದು ಏನೇನೂ ಸಾಲದಾಗಿದೆ. ಅಫ್ಘಾನಿಸ್ತಾನದಿಂದ ಸೇನೆಯನ್ನು ವಾಪಸು ಕರೆಸಿಕೊಳ್ಳಬೇಕೆಂಬ ಒತ್ತಾಯ ಇಲ್ಲಿ ದಿನದಿನಕ್ಕೆ ಹೆಚ್ಚಾಗುತ್ತಿದೆ. ಈ ಬಗ್ಗೆ ಪ್ರದರ್ಶನಗಳೂ ನಡೆದಿವೆ.



[illegible]
[illegible] ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - [illegible]

ಪ್ರೊ|| ಜಿ. ಎಚ್. ಹನ್ನೆರಡುಮಠ




**ನ**ನ್ನ ಬೂಟುಗಳು ಖಟ್ ಖಟ್ ಎಂದು ನೆಲ ಕುಟ್ಟುವಾಗ ಯಾರೋ ಚೀರಿದಂತಾಯಿತು!

ಎದೆ ಧಸ್ಸೆಂದಿತು...

ಮೆಲ್ಲನೆ ಕೆಳಗೆ ನೋಡಿದರೆ... ಆಹಾ... ಹುಂಚೀಹೂವು! ಅಂಗಳ ತುಂಬ ಹಳದಿಯ ಹುಂಚೀ ಹೂವುಗಳ ರಾಶಿ ರಾಶಿ. ಆ ಹೂವುಗಳ ಹಳದಿ ಪತ್ತಲದಿಂದ ಆ ನಿರ್ಜೀವ ಮಣ್ಣು ಕೂಡಾ ಮದುವೆ ಹಂದಿರದ ಮುತ್ತೈದೆಯಾಗಿತ್ತು.

ಸಣ್ಣವನಿದ್ದಾಗ ನನಗೆ ಒಂದು ವಿಚಿತ್ರ ಹವ್ಯಾಸವಿತ್ತು. ಆದೆಂದರೆ ಹುಂಚೀ ಹೂವು ತಿನ್ನುವುದು! ಹುಂಚೀ ಹೂವು ಹುಳಿ ರಸದ ಸ್ವರ್ಗವೇ ಅಂತ ನನಗೆ ಖಾತ್ರಿ. ನಾನು ಆ ಎಳೆಯ ಹಲ್ಲುಗಳಿಂದ ಹುಂಚೀ ಹೂವುಗಳನ್ನು ಬಕ ಬಕ ತಿನ್ನುವ ಬಕಪಕ್ಷಿಯಾಗಿದ್ದೆ. ಮನೆಗೆ ಬಂದು ಜೋಳದ ರೊಟ್ಟಿ ಕಡಿಯುವಾಗ, ಹಲ್ಲುಗಳೆಲ್ಲಾ ಒಂದೇ ಬಾರಿಗೆ ಜುಮ್ಮೆಂದಾಗಲೇ ಹಲ್ಲು ಚಳಿತದ್ದು ಗೊತ್ತಾಗುತ್ತಿತ್ತು.

ಒಂದೊಂದು ಸಲ ಹುಣಿಸೆಯ ಎಳಗಾಯಿಗಳನ್ನು ತಿನ್ನುತ್ತಿದ್ದೆ. ಈ ಎಳಗಾಯಿಗಳಿಗೆ ನಾವು ಹುಡುಗರು 'ಮಿಡಿನಾಗರ ಕಾಯಿ' ಎನ್ನುತ್ತಿದ್ದೆವು. ಈ ಮಿಡಿನಾಗರಕಾಯಿಗೆ ಉಪ್ಪು ಹಚ್ಚಿ ತಿಂದೂ ತಿಂದೂ ನನ್ನ ಗೆಳೆಯರ ಗಲ್ಲದ ತುಂಬ ತದ್ದು ಎದ್ದಿದ್ದವು. ಆ ವರ್ಷ, ಅಂದರೆ ನಾನು ಕನ್ನಡ ಮೂರನೇ ಈಯತ್ತೆಯಲ್ಲಿ ಇದ್ದಾಗ, ನನ್ನ ಗಲ್ಲದಲ್ಲಿಯೂ ತದ್ದು ಕಾಣಿಸಿಕೊಂಡವು. ಮನೆಯಲ್ಲಿ ಮಿಡಿನಾಗರಕಾಯಿ ತಿಂದರೆ ತದ್ದು ಆಗುತ್ತವೆಯೆಂದು ಅಂಜಿಸಿದರು. ಆದರೆ ಮಿಡಿನಾಗರ ಕಾಯಿಗಳಿಗೂ ನನಗೂ ಗೆಳೆತನ ನಿಲ್ಲಲೇ ಇಲ್ಲ. ತಿಂದದ್ದೇ ತಿಂದದ್ದು.

* * *

ಮತ್ತೆ ಹುಂಚೀ ಹೂವುಗಳು ಕೂಗಿದವು. ನನ್ನ ಬೂಟುಗಳು ಘಕ್ಕೆಂದು ನಿಂತವು. ನನ್ನ ಬಾಯಲ್ಲಿ ನೀರೂರಿತು. ಮೆಲ್ಲನೆ ಬಗ್ಗಿ, ಐದಾರು ಹುಂಚಿ ಹೂಗಳನ್ನು ಆರಿಸಿಕೊಂಡು ತಿನ್ನುವಾಸೆ ಮೂಡಿತು. ಆದರೆ... ನಾನೀಗ ಸಣ್ಣಪುಟ್ಟ ಹುಡುಗನಲ್ಲ... ದೊಡ್ಡವ... ದೊಡ್ಡ ಪಗಾರದವ... ದೊಡ್ಡ ಪೋಸ್ಟು... ಪ್ಯಾಂಟು ಬೂಟು... ಎಲ್ಲಾ ಅಪ್‌ಟುಡೇಟ್... ಇಂಥಾ ಕಾಲದಲ್ಲಿ... ಅದೂ ರಸ್ತೆಯಲ್ಲಿ ನಿಂತು... ನಾನು ಹುಂಚೀ ಹೂವು ಆರಿಸಿ ತಿಂದರೆ ಜನ ಏನೆಂದಾರು! ಸುತ್ತಲೂ ನೋಡಿದೆ. ಕೆಲವು ಹರೆಯದ ಹುಡಿಗಿಯರು ಪಿಳಿಪಿಳಿ ಕಣ್ಣುಬಿಟ್ಟು ಆಶ್ಚರ್ಯದಿಂದ ನನ್ನನ್ನೇ ನೋಡುತ್ತಿದ್ದರು. ಆ ಕ್ಷಣದಲ್ಲಿ ನಾನು ಅವರಿಗೆ ಹುಂಚೀ ಹೂವು ತಿನ್ನುವ ಕೆಂಪುಕೋತಿಯಾಗಿ ಕಂಡೆನೋ ಏನೋ!

ಒಮ್ಮೆಲೇ ನನ್ನ ಡಿಗ್ನಿಟಿ ಜಾಗೃತವಾಯಿತು. ಬೂಟನ್ನು ಖಟ್ ಖಟ್ ಊರುತ್ತ ಮುಂದೆ ಸಾಗಿಬಿಟ್ಟೆ

* * *

ಒಂದು ವಾರದ ನಂತರ ಅದೇ ಹುಂಚೀ ಗಿಡದ ಕೆಳಗೆ ಹೋಗುವಾಗ ಬಲಿತ ಎಳೆನಾಗರಕಾಯಿಗಳು ಕಂಡವು. ಕೆಲವು ಹುಡುಗರು ಹುಂಚೀ ಗಿಡಕ್ಕೆ ಕಲ್ಲು ಎಸೆದು ನಾಗರಕಾಯಿ ತಿನ್ನುತ್ತಿದ್ದರು. ನನ್ನ ಬಾಯಲ್ಲಿ ಹಂಡೆ ನೀರು ಚಿಲ್ಲೆಂದು ಚಿಮ್ಮಿತು. ನಾಚಿಗೆಗೆಟ್ಟು ನಿಂತೆ. ಆ ಹುಡುಗರಿಗೆ ಜಬರಿಸುವ ನೆಪದಲ್ಲಿ ನಿಂತು ಅವರಿಗೆಂದೆ –

''ಲೇ... ಲೇ... ಕಲ್ಲು ವಗೀಬ್ಯಾಡ್ರಿ... ಯಾರ ತಲಿ ವಡೀಬೇಕಂತ ಮಾಡೀರೆಲೆ...''

ನನ್ನ ಗದರಿಕೆಗೆ ಆ ಹುಡುಗರು ಅಂಜಿ ದಿಕ್ಕಾಪಾಲಾಗಿ ಓಡಿಬಿಟ್ಟರು. ಅಯ್ಯಯ್ಯೋ ಅಂದೆ! ಅವರು ತೂರಿದ ಕಲ್ಲು ನೇರವಾಗಿ ನನ್ನ ತಲೆಗೇ ಬಡಿದಿದ್ದರೂ ನಾನು ಬೇಡ ಅನ್ನುತ್ತಿರಲಿಲ್ಲ. ಅಷ್ಟು ಪ್ರೀತಿ ನನಗೆ ಹುಂಚೀ ಕಾಯಿಯ ಮೇಲೆ.

* * *

ಒಂದು ವಾರದ ನಂತರ ಅದೇ ಮರದ ನೆರಳ ದಾರಿಗೆ ಮೇಘದೂತನಂತೆ ಬಂದೆ. ಅಬ್ಬಾ... ಇನ್ನೂ ಒಂದು ವಿಚಿತ್ರ ಕಂಡೆ! ಹುಂಚೀ ಗಿಡದ ಇಳಿಬಿದ್ದ ಉದ್ದ ಟೊಂಗೆಗಳನ್ನು ಹಿಡಿದು ಕೆಲವು ಹುಡಿಗಿಯರು ಗಿಡಮಂಗನ ಜೋಕಾಲಿ ಜೀಕುತ್ತಿದ್ದರು. ಗಂಡುಹುಡುಗರು ಆ ಹುಡಿಗಿಯರ ಟೊಂಕ ಹಿಡಿದು ನೂಕಿ ಜೀಕಿಸುತ್ತಿದ್ದರು. ಆ ಹುಡಿಗಿಯರು ನೆಲಕ್ಕೆ ಬಿದ್ದು ಹಲ್ಲು ಮುರಿದೀತೆಂಬ ಭಯ ಕೂಡಾ ಇಲ್ಲದೇ ಹುಂಚೀ ಜೋಕಾಲಿ ಆಡುತ್ತಿದ್ದರು. ನನ್ನ ಎದೆಗೆ ಬಾಂಬು ಬಿದ್ದಂತಾಯಿತು. ನಾನೀಗ ಸೀನಿಯರ್ ಪ್ರೊಫೆಸರ್, ಇಂಥಾ ವ್ಯಕ್ತಿ ಈ ಜೋಕಾಲಿ ಹೇಗೆ ಆಡಲಿ? ಒಂದು ಕ್ಷಣ ನಿಂತೆ. ಹೌದು! ನಾನೂ ಹೀಗೆಯೇ ಜೋಕಾಲಿ ಜೀಕುತ್ತಿದ್ದೆ. ನಾನೂ ಕೂಡ ನನ್ನ ಆ ಎಳೆಯ ಗೆಳತಿಯರ ಟೊಂಕ ಹಿಡಿದು ಹೀಗೆಯೇ ಜೀಕಿಸುತ್ತಿದ್ದೆ. ಆದರೆ... ಅಯ್ಯಯ್ಯೋ... ಈಗ ಆ ನನ್ನ ಹಳೆಯ ಎಳೆಯ ಗೆಳತಿಯರಿಗೆ ಅನೇಕ ಮೊಮ್ಮಕ್ಕಳೇ ಹುಟ್ಟಿಬಿಟ್ಟಿದ್ದಾರಲ್ಲಾ!

* * *

ಎರಡು ಮೂರು ವಾರ ದಾಟಿದವು. ಆ ಹುಂಚೀ ಗಿಡದ ಬಳಿಗೆ ಮತ್ತೆ ಬಂದಾಗ ಅಲ್ಲಿ ಹಬ್ಬದ ವಾತಾವರಣ. ಗಿಡದ ತುಂಬ ಕರಿಯ ಮುಸ್ಯಾಗಳು, ಕೆಂಪು ಕೋತಿಗಳು ಜಿಗಿದಾಡುತ್ತಿದ್ದವು. ಗಿಡದ ಕೆಳಗೆ ಎಲ್ಲಾ ಹುಡುಗ-ಹುಡಿಗಿಯರು... ''ಮಂಗ್ಯಾ ಮಂಗ್ಯಾ ಘೂಕ್... ಪಾವ್ ಜ್ವಾಳಾ ಮುಕ್...'' ... ''ಸಾಲಿ ... ಬಿಟ್ಟು ಸರವತ್ತಾತು... ಮಂಗ್ಯಾ ಬಂದು ಬಾಳೊತ್ತಾತು''... ಎಂದು ಹಾಡುತ್ತಿದ್ದರು. ಕೆಲವರು... '''ಕುಂಟಾ ಕುಂಟಾ ಮಂಗಣ್ಣಾ... ಹುಂಚೀಡ್ವಾರಿ ತಾರಣ್ಣಾ...'' ಎಂದು ಕುಣಿಯುತ್ತಿದ್ದರು.

ಈಗಂತೂ ನನ್ನ ಜೀವವೇ ಹೋದಂತಾಯಿತು. ನಾ ತೊಟ್ಟ ಈ ಪ್ರೊಫೆಸರ್ ಡ್ರೆಸ್ಸನ್ನು ಟರಟರ ಹರಿದು ಚಲ್ಲಬೇಕೆನಿಸಿತು. ಕಾರಣ ಡೋರೆ ಹುಣಿಸೆಯ ರುಚಿಯ ರಾಜನೇ ನಾನಾಗಿದ್ದೆ! ಡೋರೆ ಹುಣಿಸೆ ಅಂದರೆ... ಇತ್ತ ಕಾಯಿ ಹುಣಿಸೆಯೂ ಅಲ್ಲ... ಅತ್ತ ಹಣ್ಣು ಹುಣಿಸೆಯೂ ಅಲ್ಲ... ಇದರ ಮಧ್ಯಮ ಹಂತದ ಹಳದಿ - ಹಸಿರು ಬಣ್ಣದ ಡೋರೆ ಹುಣಿಸೆ ಹಣ್ಣು ಒಂದು ವಿಶಿಷ್ಟ ರುಚಿಯ ರಾಣಿ! ಈ ಹಣ್ಣಿನ ಅದ್ಭುತ ರುಚಿಯ ಮುಂದೆ ರತ್ನಗಿರಿ ಆಪೂಸ್ ಮಾವಿನ ಹಣ್ಣನ್ನು ತಿಪ್ಪೆಗೆ ಚಲ್ಲಬೇಕು. ನಾನು ಸಣ್ಣವನಿದ್ದಾಗ ಗರ್ಭಿಣಿ ಸ್ತ್ರೀಯರು ನನಗೆ ವಸೂಲಿ ಹಚ್ಚಿ ಈ ಡೋರೆ ಹುಣಿಸೇಹಣ್ಣು ತರಿಸಿಕೊಂಡು ಸೀಪುತ್ತಿದ್ದರು. ಹೀಗಾಗಿ ನಾನು ಆ ಪುಟ್ಟ ವಯಸ್ಸಿನಲ್ಲಿ ಆ ಓಣಿಯ ಎಲ್ಲ ಗರ್ಭಿಣಿ ಸ್ತ್ರೀಯರ ಗೆಳೆಯನೇ ಆಗಿದ್ದೆ. ನಾನು ಕಿಸೆ ತುಂಬ ಡೋರೆ ಹುಣಿಸೆಹಣ್ಣು ತಂದು ಅವರ ಬಯಕೆಯ ಬೊಗಸೆ ತುಂಬುತ್ತಿದ್ದೆ. ಅವರು ಆ ಡೋರೆ ಹುಣಿಸೆ ಹಣ್ಣುಗಳನ್ನು ತುಡುಗಿನಿಂದ ಬಾಗಿಲ ಪಡಕಿನ ಹಿಂದೆ ಅಡಗಿಕೊಂಡು ಗುಳುಂಗುಳುಂ ನುರಿಸಿ ನುಂಗುತ್ತಿದ್ದರು. ಅವರು ಆ ಹಣ್ಣುಗಳನ್ನು ಅಷ್ಟೊಂದು ತುಡುಗಿನಿಂದ ಏಕೆ ತಿನ್ನುತ್ತಾರೋ ಎಂದು ತಿಳಿಯಬೇಕಾದರೆ... ನನಗೂ ಅವರಷ್ಟು ವಯಸ್ಸೇ ಆಗಬೇಕಾಯಿತೆನ್ನಿ!

* * *

ಮತ್ತೆ ಒಂದು ವಾರ ಕಳೆಯಿತು. ಆ ಹುಣಿಸೆ ಮರದ ಹತ್ತಿರ ಒಂದು ದುಂಡಾದ ಬಂಡೆಗಲ್ಲು ಇತ್ತು. ನಾನು ಜೀವ ತಡೆಯದೇ ಗಾಳಿ ತಿನ್ನುವ ನೆಪಮಾಡಿಕೊಂಡು ಅಲ್ಲಿ

ಹೋಗಿ ಕುಂತೆ. ಸಂಜೆಯ ಸಮಯ. ಅದೇ ಆ ಕವುಜುಗನ ಹಕ್ಕಿ. ಅದೇ ಆ ಮರಕುಟುಕನ ಹಕ್ಕಿ. ಅದೇ ಆ ಬೆಳವ, ಗೊರವಂಕ, ಉದ್ದಬಾಲದ ಕರಿಗುಬ್ಬಿ, 'ದ' ಆಕಾರದ ಬಾಲವುಳ್ಳ ಹಾಮುಕು ಗುಬ್ಬಿ, ಕೊರಕೊಂಜಿ, ಪಿಕಳಾರಿ, ಟಿಟ್ಟಿಭ... ಎಲ್ಲವೂ ಕಂಡವು. ಕ್ಷಣಕಾಲ ನಾನು ಅರ್ಧಶತಮಾನ ಹಿಂದಕ್ಕೆ ಜಿಗಿದುಹೋಗಿ ಆ ನನ್ನ ಹಕ್ಕಿ ಮಿತ್ರರೊಂದಿಗೆ ಮಾತಾಡಿದೆ. ಆ ಕಾಲದ ನನ್ನ ಪ್ರೀತಿಯ ಗೆಳೆಯರಾಗಿದ್ದ ಹಕ್ಕಿ ಮಿತ್ರರು ಇಂದಿನ ಈ ಕಾಲದಲ್ಲೂ ಅದೇ ಪ್ರೀತಿ, ಅದೇ ರಾಗ, ಅದೇ ಕೂಗು ತೋರಿ ಜುಮ್ಮುಜುಮ್ಮಾಡಿಸಿದರು. ಈ ಪಕ್ಷಿಗಳಿಂದ ಈ ವೃಕ್ಷವೃಕ್ಷ ಸಮಗ್ರ ಶೃಂಗಾರ ದೇವತೆಯಾಗಿ ಕಂಡಿತು !

ಮೆಲ್ಲನೇ ಕತ್ತಲೆ ಕೈಬೀಸಿ ಬಂದು, ತಂಗಾಳಿ ನನ್ನನ್ನು ಅಲುಗಿಸಿದಾಗ ಅಲ್ಲಿಂದ ಎದ್ದೆ. ನನ್ನೊಂದಿಗೆ ಆ ಪ್ರೀತಿಯ ಹುಣಸೇಮರವೂ ನಡೆಯುತ್ತ ಬಂದ ಅನುಭವವಾಯಿತು ! ಕನಸಿನ ತುಂಬ ಹುಂಚಿಕಪ್ಪಗಳ ಪ್ಯಾಕಿ ಮಾಡಿ, ಚಕ್ಕಾ ಆಡಿದ ಅನುಭವ. ಹುಂಚಿಕಪ್ಪ ಹುರಿದು ಕುಟಿಂ ಕುಟಿಂ ಹುರಿಗಾಳು ತಿಂದ ಹಳವಂಡ. ಹುಂಚೀ ಹಣ್ಣಿನ ಕೂಡಾ ಉಪ್ಪು , ಜೀರಿಗಿ, ಬೆಲ್ಲ ಬೆರಸಿ, ಕುಟ್ಟಿ ದಂಟಿನ ತುದಿಗೆ ಮೆತ್ತಿ ಜುರುಜುರು ಸೀಪುತ್ತಿರುವ ಆ ಚಿಗಳಿಯ ಸಂಭ್ರಮ !

ಎಂಥ ಹಸಿರು ನೆನಪು ! ಹುಂಚೀ ಗಿಡದೊಂದಿಗೆ ಎಂದೆಂದಿಗೂ ಮರೆಯಲಾರದ ಸಂಬಂಧ ! ಹನಿಮೂನೆಂದು ಹೇಳುವ ಇಂದಿನ ಮೂನುಗಳು ಹುಂಚೀ ಗಿಡದಲ್ಲಿ ಗಿಡಮಂಗನಾಟ ಆಡಿದ ಆನಂದದ ಮುಂದೆ ಬರೀ ಗೂನುಗಳು !!

* * *

ಸುದೀರ್ಘ ಬೇಸಿಗೆ ಬಿಡುವು ಬಂತು. ಮೂರು ತಿಂಗಳ ಕಾಲ ನನ್ನ ಊರಿಗೆ ಹೋದೆ, ಮಧ್ಯದಲ್ಲಿ ಪೇಪರ್ ಕರೆಕ್ಷನ್ನಿನ ಕೃತ್ರಿಮ ಬಿಂಗೆ, ಬಿಸಿಲು ಏರಿದಂತೆ ಈ ಶೀತಲ



ಹುಣಸೆಮರ ಆಗಾಗ ನನ್ನ ಹಟಮಾರಿ ಗೆಳೆಯನಂತೆ ಬೆಟ್ಟುಹಿಡಿದು ಬರುತ್ತಿತ್ತು. ಒಮ್ಮೆಯಂತೂ... ಯಾಕಾದರೂ ಈ ಬೇಸಿಗೆ ಬಿಡುವು ಬಂತಪ್ಪಾ ಎಂದೆನಿಸಿದ್ದೂ ಆಯಿತು ! ಯಾಕೋ ಏನೋ... ಒಂದು ದಿನ ಬೆಳಗಿನ ಕನಸಿನಲ್ಲಿ ಈ ಹುಂಚೀ ಗಿಡ ಅಳುತ್ತ ಅಳುತ್ತ ಬಂದು ನನ್ನನ್ನು ಅಪ್ಪಿಕೊಂಡ ವಿಚಿತ್ರ ಅನುಭವ !

ಸೂಟಿ ಮುಗಿಯಿತು. ದೊಡ್ಡ ಲಗೇಜು ಹೊತ್ತುಕೊಂಡು ಬಸ್ಸಿನಿಂದ ಇಳಿದು ಬಂದೆ. ಅದೇ ಆ ನನ್ನ ಪ್ರೀತಿಯ ಕೈಮುರುಕ ಹಮಾಲನ ಮೇಲೆ ನನ್ನ ಜಡ ಪದಾರ್ಥಗಳನ್ನೆಲ್ಲಾ ಹೊರಿಸಿ, ಅದೇ ದಾರಿಯಿಂದ ಮನೆ ಕಡೆ ಹೊರಟೆ. ಆದರೇನು ?... ಆ ದೊಡ್ಡ ಹುಣಸೆಗಿಡದ ಕೆಳಗೆ ನಾನು ಬಂದಾಗ... ಸುತ್ತಮುತ್ತ ನೋಡಿದೆ... ಆ ಮರವೇ ಕಾಣೆಯಾಗಿತ್ತು! ಆ ಮರದ ಸಾವಿರಾರು ಟೊಂಗೆ ಟಿಸಿಲುಗಳ ಜಾಗದಲ್ಲಿ ಬಚ್ಚಬರಿದು ಬೋಳು ಮುಗಿಲು ಮಾತ್ರ ಸೊನ್ನೆಯಾಗಿ ನಿಂತಿತ್ತು!

ಎದೆ ಹವ್ವನೇ ಹಾರಿ, ಅಲ್ಲಿ ಆಟ ಆಡುತ್ತಿದ್ದ ಒಬ್ಬ ಹುಡುಗನನ್ನು ಕರೆದು ಕೇಳಿದೆ –

''ಏ ತಮ್ಮಾ... ಇಲ್ಲೆ ಹುಂಚೀ ಗಿಡಾ ಇತ್ತಲ್ಲಾ... ಏನಾತು ?''

ಆತ ಸಪ್ಪೆ ಮುಖ ಮಾಡಿಕೊಂಡು ಹೇಳಿದ –

''ಕಡಿದರು... ಕಡಿದುಬಿಟ್ಟರು...''

''ಆಂ... ಆಂ... ? ಕಡಿದರೆ ? ಕಡಿದುಬಿಟ್ಟರೇ ? ಯಾಕೆ ? ಯಾಕೆ ?'' – ಒಂದೆ ಉಸಿರಿನಲ್ಲಿ ಕೇಳಿದೆ.

ಆ ಹುಡುಗನ ಪುಟ್ಟ ಹೃದಯದಿಂದ... ಸರಳ ಸತ್ಯವೇ ಬಾಣವಾಗಿ ಬಂದಂತೆ ಉತ್ತರ ಬಂತು –

''ಹುಂಚೀ ಗಿಡದಾಗ ದೆವ್ವಗೋಳು ಇರ್‍ತಾವಂತ್ರಿ. ಇದರಾಗ ದೆವ್ವಾ ವಾಸ ಮಾಡಿತ್ತಂತ್ರಿ. ಅದಕ್ಕ ಕಡದಬಿಟ್ರು ಸಾವ್ಕಾರು...''

ಆ ಹುಡುಗ ಆ ಮುಗಿಲ ಬಯಲನ್ನು ಕಂಗಾಲಾಗಿ ನೋಡುತ್ತ, ಕಂಬವಾಗಿ ನಿಂತುಬಿಟ್ಟ!

ಮೇಲೆ ಬಿಸಿಲು...

ಕೆಳಗೆ ಉರಿನೆಲ...

ಮಧ್ಯದಲ್ಲಿ ನಗುವ ಗೆಳೆಯನಾಗಿ ನನ್ನನ್ನು ಪ್ರೀತಿಸುತ್ತಿದ್ದ ಆ ಹುಂಚೀ ಮರ ಶೂನ್ಯದಿಂದ ಕೂಗಿತು –

''ಗೆಳೆಯಾ... ಮನುಷ್ಯರು ಯಾಕೆ ಮನುಷ್ಯರಂತೆ ಇಲ್ಲ!''

**ಪ್ರೊ|| ಜಿ. ಎಚ್. ಹನ್ನೆರಡುಮಠ**
ನಂ.೫, 'ಮಾವು ಮಲ್ಲಿಗೆ', ಯೋಗಭವನ, ಇಂದ್ರಪ್ರಸ್ಥ
ಬನ್ನೇರುಘಟ್ಟದ ದಾರಿ, ಗೊಟ್ಟಿಗೆರೆ ಅಂಚೆ
ಬೆಂಗಳೂರು - ೫೬೦೦೮೩



## ಸೂಜಿ

ಕತ್ತರಿಯಾಗದಿರಿ
ಕತ್ತರಿಸುವುದು
ಕಂಡದ್ದೆಲ್ಲವನು

ಕೊಡಲಿಯಾಗದಿರಿ
ಕಡಿಯುವುದು
ಕಂಡದ್ದೆಲ್ಲವನು

ಜೆ.ಸಿ.ಬಿ.ಯಾಗದಿರಿ
ಉರುಳಿಸುವುದು
ಕಂಡದ್ದೆಲ್ಲವನು

ಕೋವಿಯಾಗದಿರಿ
ಸುಡುವುದು
ಕಂಡದ್ದೆಲ್ಲವನು

ಸಣ್ಣದಾದರೂ ಸರಿ
ಸೂಜಿಯಾಗಿರಿ
ಹೊಲಿಯಬಹುದು
ಹರಿದ ಹಳೆ ಹಚ್ಚಡವನ್ನೆಲ್ಲ
ಕೆಲವೊಮ್ಮೆ ಹೃದಯದ ತೂತುಗಳನ್ನೆಲ್ಲ

ಕು. ಸ. ಮಧುಸೂದನ
ಸಂಖ್ಯೆ ೧೫೫೫ ವೈ, 'ಶಶಾಂಕ', ೩ನೇ ಮುಖ್ಯ ರಸ್ತೆ, ೭ನೇ ಬ್ಲಾಕ್
೪ನೇ ಘಟ್ಟ, ಬನಶಂಕರಿ ೩ನೇ ಹಂತ, ಬೆಂಗಳೂರು - ೮೫

# ಶಬ್ದದ ಅರ್ಥದ ಸಾಧ್ಯತೆ: ಸರಜೂ ಕಾಟ್ಕರ್ ಕಾವ್ಯ

ಡಾ|| ಕವಿತಾ ರೈ

ಸಾಹಿತ್ಯ ಚರಿತ್ರೆಯನ್ನು ಅಧ್ಯಯನದ ಅನುಕೂಲಕ್ಕಾಗಿ ಸುಲಭವಾಗಿ ವಿಂಗಡಿಸಿಕೊಳ್ಳುವ ವಿಧಾನವೆಂದರೆ ನವೋದಯ, ನವ್ಯ, ದಲಿತ, ಬಂಡಾಯ ಇತ್ಯಾದಿ. ಒಂದು ಕಲಾಕೃತಿಯನ್ನು ನೋಡುವಾಗ ಸಾಹಿತ್ಯ ಚರಿತ್ರೆಯ ತಾತ್ವಿಕ ಸ್ವರೂಪಕ್ಕಿಂತ ಭಿನ್ನವಾದ ಅನನ್ಯತೆಯ ರಹಸ್ಯವನ್ನು ಕೃತಿಯೊಂದು ತನ್ನ ಒಡಲಲ್ಲಿ ಉಳಿಸಿಕೊಂಡಿರುತ್ತದೆ. ಯಾವುದೇ ಕವಿಯ ಕವನವನ್ನು ಪ್ರಸ್ತುತಗೊಳಿಸಿ ಓದುವಾಗ ಆ ಕವಿತೆಯು ನಿರ್ಮಾಣಗೊಂಡ ಚಾರಿತ್ರಿಕ ಸಂದರ್ಭವು ಎಷ್ಟು ಗಮನಾರ್ಹವೋ ಅಷ್ಟೇ ಪ್ರಧಾನ ಅದರ ಸಾರ್ವಕಾಲಿಕ ಗುಣತ್ವ. ಕಾಲ, ಮನೋಧರ್ಮಗಳಿಂದ ನವೋದಯ, ನವ್ಯ, ದಲಿತ ಬಂಡಾಯವೆಂಬ ನಿಲುವು ಯಾವುದೇ ಕಾವ್ಯ ಸಂದರ್ಭದಲ್ಲೂ ಪ್ರಸ್ತುತವಾಗುತ್ತವೆ. ಕವಿತೆ ರೂಪುಗೊಳ್ಳುವ ವಿಧಾನವು ಎಷ್ಟು ಅರ್ಥಪೂರ್ಣವಾಗಿರುತ್ತದೋ ಅದನ್ನು ಓದುವ ವಿಧಾನವು ಕೂಡ ಅಷ್ಟೇ ಅರ್ಥಪೂರ್ಣವಾಗಿರುತ್ತದೆ. ಯಾವುದೇ ಕವಿತೆಯ ಒಳಪತ್ಯವನ್ನು ತಿಳಿದುಕೊಳ್ಳುವುದಕ್ಕೆ ಕವಿಯ ಕಾಲದ ಅರಿವು ಮುಖ್ಯ. ಅಂತೆಯೇ ಓದುಗನ ನೆಲೆಯ ಅರಿವು ಸಹ. ಇವೆಲ್ಲವುಗಳನ್ನು ಗಮನದಲ್ಲಿಟ್ಟುಕೊಂಡೇ ಸರಜೂ ಕಾಟ್ಕರ್ ಅವರು ರಚಿಸಿರುವ ಕವನಗಳ ವಿಭಿನ್ನ ಆಯಾಮಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ.

''ಮರವನ್ನು ನೋಡುವವನಿಗೆ ಕಾಡು ಕಾಣಿಸುವುದಿಲ್ಲ; ಕಾಡು ನೋಡುವವನಿಗೆ ಮರವೂ ಕಾಣಿಸುವುದಿಲ್ಲ'' ಎಂಬ ಮಾತು ಇಂಗ್ಲಿಷಿನಲ್ಲಿ ಬಳಕೆಯಲ್ಲಿದೆ. ಕವಿಯಾಗಿ ಸರಜೂ ಈ ಎರಡನ್ನೂ ಒಟ್ಟಿಗೆ ಕಂಡವರು. ಬಂಡಾಯದ ಹೊಸ್ತಿಲಲ್ಲಿ ನಿಂತು ಕವಿತೆಯನ್ನು ಕಹಳೆಯ ಧ್ವನಿಯಲ್ಲಿ ಕೂಗಿ ಕರೆದು 'ಹಸಿದ ನೆಲ' (೧೯೭೫)ದಿಂದ 'ಬೆಳ್ಳಿ ಸಾಲ್ಮನ್'(೨೦೦೮)ವರೆಗೆ ನಡೆದುಬಂದ ಇವರ ಕವನಗಳನ್ನು ಓದುವಾಗ ಕವಿ ನೆರೂಡನ ಬಗ್ಗೆ ಚೆಕ್ ಲೇಖಕ ಶಾಲ್ಡ ಹೇಳಿದ ಮಾತುಗಳು ನೆನಪಾಗುತ್ತವೆ. ''ತೊಳೆಯದ, ಬಾಚದ ಬೀದಿಯ ಶಬ್ದಗಳಿಂದಲೇ ಅನಂತತೆಯ ಸಂದೇಶವಾಹಕಗಳನ್ನು ನೆರೂಡ ನಿರ್ಮಿಸಿದ್ದ'' ಎಂದು ಹೇಳುತ್ತಾನೆ ಶಾಲ್ಡ. ಉದ್ದೇಶಪೂರ್ವಕವಾಗಿಯೆ ಮೆರಗು ತುಂಬದ ಬೀದಿಯ ಶಬ್ದಗಳಿಂದ ಕವಿತೆಯನ್ನು ಸೃಷ್ಟಿಸುವುದು ಸಾಮಾನ್ಯವಾದ ಸಾಧನೆಯಲ್ಲ. ಸರಜೂ ಅವರ ಕಾವ್ಯದ ಭಾಷೆ ಗಿಡಕ್ಕೆ ಎಲೆ ಬರುವಂತೆ ಸಹಜವಾದುದು. ಈ ಸಹಜತೆಯಲ್ಲೇ ನಿರಂತರವಾಗಿ ಕಾಡುವ ಕವನಗಳನ್ನು ಕಟ್ಟಿರುವುದು ಸರಜೂ ಅವರ ಸೃಜನಶೀಲತೆಗೆ ಸಾಕ್ಷಿಯಾಗಿದೆ.

ಕವಿ ಸರಜೂ ಕಾಟ್ಕರ್ ಅವರ ಕವನಗಳಲ್ಲಿ ಮುಖ್ಯವಾದ ಮತ್ತು ಕ್ರಮಾಗತವಾದ ಎರಡು ಮಜಲುಗಳಿವೆ. ಒಂದು – ಪ್ರಧಾನವಾಗಿರುವ ಬಂಡಾಯ ಧ್ವನಿ, ಮತ್ತೊಂದು – ಭಾವಪ್ರಧಾನವಾದ್ದು. ಇವೆರಡು ಮಜಲುಗಳಲ್ಲಿ ಸರಜೂ ಹಲವು ರೀತಿಯ ಪ್ರಯೋಗಗಳನ್ನು ನಡೆಸಿದ್ದಾರೆ. ಭಾವಪ್ರಾಧಾನ್ಯತೆಯಿಂದ ಧ್ವನಿಪ್ರಾಧಾನ್ಯತೆಯ ಕಡೆಗೆ ಚಲಿಸುವುದೆಂದರೆ ಶಕ್ತಿ ಸಂಚಯನ ವಿವರಗಳಿಂದ ಸೂಚನೆಗಳತ್ತ ಚಲಿಸುವುದು ಎಂದು ಅರ್ಥ. ಸರಜೂ ಅವರ ಕವನಗಳಲ್ಲಿ ಎರಡು ತತ್ವಗಳು ಕೆಲಸ ಮಾಡುತ್ತವೆ. ಒಂದು ರಚನಾ ಘಟಕಕ್ಕೆ ಸಂಬಂಧಿಸಿದ್ದು, ಇನ್ನೊಂದು ಸೌಂದರ್ಯಕ್ಕೆ ಸಂಬಂಧಿಸಿದುದು. ಮೊದಲನೆಯದು ತಾಂತ್ರಿಕ ಅಗತ್ಯ. ಎರಡನೆಯದು ಸಾಹಿತ್ಯದ ಅಗತ್ಯ. ಈ ಎರಡನ್ನು ಒಟ್ಟು ಸೇರಿಸಿಯೇ ಇವರ ಕವನವನ್ನು ಅರ್ಥೈಸಬೇಕಾಗುತ್ತದೆ. ಈ ನೆಲೆಯಿಂದ ನೋಡಿದಾಗ ಆಧುನಿಕ ಕಾವ್ಯ ಜಗತ್ತಿನಲ್ಲಿ ಸರಜೂ ಕಾಟ್ಕರ್ ನಡೆಸಿದ ಪ್ರಯೋಗಗಳು ಗಮನಕ್ಕೆ ಬರುತ್ತವೆ. ಬಂಡಾಯದ ಭೂಮಿಕೆಯಲ್ಲಿನ ಹಸಿದ ನೆಲ, ಸೂರ್ಯ, ಮ್ಯಾನಿಫೆಸ್ಟೋ, ಪೆಗಾಸಸ್ ವರೆಗಿನ ಸಂಕಲನಗಳು, ನವಿಲೇ ನವಿಲುನಂತಹ ಹೈಕುಗಳು, ಗಜಲ್, ಅವ್ವ, ಗಾಂಧೀ ಟು ಗೋದ್ರಾ, ಬೆಳ್ಳಿ ಸಾಲ್ಮನ್ ನಂತಹ ನವ್ಯೋತ್ತರ ಸಂಕಲನಗಳು ಕನ್ನಡ ಕಾವ್ಯವು ಆಧುನಿಕತೆಯನ್ನು ಮೈಗೂಡಿಸಿಕೊಳ್ಳುತ್ತಾ ಪಡೆದುಕೊಂಡ ಸ್ಥಿತ್ಯಂತರಗಳಿಗೆ ಉತ್ತಮ ನಿದರ್ಶನಗಳು. ಬಂಡಾಯ ಸಾಹಿತ್ಯದ ಮೂಲದ ಆದರ್ಶ ದಟ್ಟವಾಗಿ ಹರಡಿದ ಸಂದರ್ಭದಲ್ಲಿ ಕವಿಯಾಗಿ ಕಾಣಿಸಿಕೊಂಡ ಪ್ರಮುಖರಲ್ಲಿ ಸರಜೂ ಕಾಟ್ಕರ್ ಒಬ್ಬರು (ವಿಕ್ಷಿಪ್ತ, ೧೯೭೩). ಬಂಡಾಯದ ಸಂದರ್ಭದಲ್ಲಿ ಶಕ್ತವಾಗಿ ಗುರುತಿಸಿಕೊಂಡ ಕವಿಗಳು ಹಲವರು. ಆದರೆ ಇವರೆಲ್ಲರಿಗಿಂತಲೂ ಭಿನ್ನವಾದ ಅಭಿವ್ಯಕ್ತಿ ಮಾರ್ಗದಲ್ಲಿ ಸಾಗಿದವರು ಸರಜೂ ಕಾಟ್ಕರ್. ದಲಿತ ಬಂಡಾಯದ ಆಶಯದ ಒಳಗೆ ಹಲ ಬಗೆಯ ಪ್ರಯೋಗವನ್ನು ನಡೆಸುತ್ತ ಅವರು ಸಾಗಿದ ವಿಭಿನ್ನ ದಿಕ್ಕನ್ನು 'ವಿಕ್ಷಿಪ್ತ' (೧೯೭೩)ದಿಂದ ತೊಡಗಿ 'ಬೆಳ್ಳಿ ಸಾಲ್ಮನ್' (೨೦೦೮) ವರೆಗಿನ ಸಂಕಲನಗಳಲ್ಲಿ ಗುರುತಿಸಬಹುದು. ನವ್ಯೋತ್ತರ ದಲಿತ ಬಂಡಾಯ ಕಾವ್ಯಕ್ಕೆ ಸರಜೂ ಅವರ ಕವಿತೆಗಳು ಒಂದು ಸಕಾಲಿಕ ಚಿಕಿತ್ಸೆಯ ರೂಪದಲ್ಲಿ ಬಂದಿರುವಂತೆ ಕಾಣಿಸುವುದು ಕೂಡ ಅವುಗಳ ಪ್ರಯೋಗಶೀಲತೆಯ ನೆಲೆಯಿಂದಲೇ ಆಗಿದೆ.

ನವೋದಯ, ನವ್ಯ, ದಲಿತ, ಬಂಡಾಯ, ಇವು ಈ ಕಾವ್ಯಪರಂಪರೆಯಲ್ಲಿ ಕಾವ್ಯವಸ್ತು ಕಾಲದಿಂದ ಕಾಲಕ್ಕೆ ಪಲ್ಲಟಗೊಂಡಿರುವುದು ಆ ಮೂಲಕ ಪ್ರತ್ಯೇಕ ಕಾವ್ಯಾವಧಿಯನ್ನು ನಿರ್ಮಿಸಿರುವುದು ಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿದರೆ ವ್ಯಕ್ತವಾಗುತ್ತದೆ. ಈ ಬದಲಾವಣೆ ಅನಿವಾರ್ಯವಾಗಿ ಬಂದಿರಬಹುದು. ಇಲ್ಲವೆ ಆಗ್ರಹಪೂರ್ವಕವಾಗಿ ನಡೆದಿರಬಹುದು. ಸಾಮಾಜಿಕ, ಸಾಂಸ್ಕೃತಿಕ ವಿಷಯಗಳು ಕವಿಯ ಮೇಲೆ ಬೀರುವ ಒತ್ತಡ ಕಾಲ ಸನ್ನಿವೇಶಗಳ ಪರಿಣಾಮಗಳಿಂದ ಪ್ರಧಾನವಾಗುತ್ತವೆ. ಕಾವ್ಯ ಪರಂಪರೆಗೆ ಹೊಸ ಧಾತು ಸೇರುತ್ತದೆ. ಕಾವ್ಯಲಕ್ಷಣ ಮತ್ತು ಪರಿಕರಗಳಲ್ಲಿ ಹೊಸತನವು ಕಂಡು, ಕಾವ್ಯಕ್ಕೆ ವಿಶೇಷ ಶೋಭೆ ಸತ್ವಗಳು ಪ್ರಾಪ್ತವಾಗುತ್ತವೆ.

ಸಮೂಹನಿಷ್ಠ ಅನುಭವಗಳು ವ್ಯಕ್ತಿನಿಷ್ಠ ನೆಲೆಯಲ್ಲಿ ಕಾಣಿಸಿಕೊಂಡಾಗ ಅದನ್ನು 'ಸಾಮಾಜಿಕ ಪ್ರಜ್ಞೆ' ಎಂದು ಹೇಳಬಹುದು. ಕವಿಯ ಸಾಮಾನ್ಯ ಅನುಭವವೆನ್ನುವುದು ಒಂದು ಸಾಮೂಹಿಕ ಸ್ವರೂಪ ಪಡೆಯುವುದು ಇಲ್ಲಿ ಮುಖ್ಯ. ಒಂದು ಸಮಾಜದಲ್ಲಿ ಕಂಡುಬರುವ ಸ್ಥಿತಿಗತಿಗಳ ಸೂಕ್ಷ್ಮಾತಿಸೂಕ್ಷ್ಮಗಳನ್ನು ಶೋಧಿಸಿದ, ಸ್ಥೂಲವಾಗಿ ಹಿಡಿದಿಟ್ಟ ಅಥವಾ ಕೇವಲ ಪ್ರತಿಕ್ರಿಯೆ ತೋರಿಸಿದ ಕೃತಿಯನ್ನು 'ಸಾಮಾಜಿಕ ಪ್ರಜ್ಞೆ'ಯುಳ್ಳದ್ದೆಂದು ಸಾರುವಂತಿಲ್ಲ. ಸಾಮಾಜಿಕ ವಸ್ತುವನ್ನು ಕುರಿತು ಬರೆಯುವಲ್ಲಿ ಕೃತಿಕಾರನ ಕ್ರಿಯೆ ಅರಿವಿನ ಹಂತದ್ದೋ ಅಥವಾ ಪ್ರಜ್ಞೆಯ ಹಂತದ್ದೋ ಎಂಬುವುದು ಮುಖ್ಯ. ಯಾಕೆಂದರೆ ಅರಿವು ಮತ್ತು ಪ್ರಜ್ಞೆಗಳಿಗೆ ವ್ಯತ್ಯಾಸವಿದೆ. ಅರಿವು ಒಂದು ಸ್ಥಿತಿಯನ್ನು ಗುರುತಿಸುವಷ್ಟಕ್ಕೆ ತೃಪ್ತವಾದರೆ, ಪ್ರಜ್ಞೆ ಅದರ ತಳಮಟ್ಟದ ಶೋಧನೆಗೆ ತೊಡಗುವಂಥಾದ್ದು. ಆದ್ದರಿಂದ ತೀವ್ರ ಸಂವೇದಿತನಾದ ಪ್ರಜ್ಞಾಶೀಲನೊಬ್ಬ ಹೊರಹೊಮ್ಮಿಸುವ ವಿಚಾರಗಳು ಸಾಮಾಜಿಕವಾಗಿ ಹೆಚ್ಚು ಮೌಲಿಕವಾಗಿರುತ್ತವೆ.

''ಪ್ರಜ್ಞೆಯ ಬಗ್ಗೆ ಮಾತನಾಡುವಾಗ ಬಡತನದಂಥ ಸಾಮಾಜಿಕ ವಸ್ತುವಿನ ಬಗ್ಗೆ ಬರೆಯುವ ಲೇಖಕ ಎಷ್ಟರಮಟ್ಟಿಗೆ ತನ್ನೆಲ್ಲ ವ್ಯಕ್ತಿತ್ವವನ್ನು ಅದರಲ್ಲಿ

ಸರಜೂ ಕಾಟ್ಕರ್ ಅವರ ಕವನಗಳಲ್ಲಿ ಮುಖ್ಯವಾದ ಮತ್ತು ಕ್ರಮಾಗತವಾದ ಎರಡು ಮಜಲುಗಳಿವೆ. ಒಂದು – ಪ್ರಧಾನವಾಗಿರುವ ಬಂಡಾಯ ಧ್ವನಿ, ಮತ್ತೊಂದು – ಭಾವಪ್ರಧಾನವಾದ್ದು. ಇವೆರಡು ಮಜಲುಗಳಲ್ಲಿ ಸರಜೂ ಹಲವು ರೀತಿಯ ಪ್ರಯೋಗಗಳನ್ನು ನಡೆಸಿದ್ದಾರೆ. ಭಾವಪ್ರಾಧಾನ್ಯತೆಯಿಂದ ಧ್ವನಿಪ್ರಾಧಾನ್ಯತೆಯ ಕಡೆಗೆ ಚಲಿಸುವುದೆಂದರೆ ಶಕ್ತಿ ಸಂಚಯನ ವಿವರಗಳಿಂದ ಸೂಚನೆಗಳತ್ತ ಚಲಿಸುವುದು ಎಂದು ಅರ್ಥ. ಸರಜೂ ಅವರ ಕವನಗಳಲ್ಲಿ ಎರಡು ತತ್ವಗಳು ಕೆಲಸ ಮಾಡುತ್ತವೆ. ಒಂದು ರಚನಾ ಘಟಕಕ್ಕೆ ಸಂಬಂಧಿಸಿದ್ದು, ಇನ್ನೊಂದು ಸೌಂದರ್ಯಕ್ಕೆ ಸಂಬಂಧಿಸಿದುದು. ಮೊದಲನೆಯದು ತಾಂತ್ರಿಕ ಅಗತ್ಯ. ಎರಡನೆಯದು ಸಾಹಿತ್ಯದ ಅಗತ್ಯ. ಈ ಎರಡನ್ನು ಒಟ್ಟು ಸೇರಿಸಿಯೇ ಇವರ ಕವನವನ್ನು ಅರ್ಥೈಸಬೇಕಾಗುತ್ತದೆ.



# ಮುಖ್ಯವಾಹಿನಿಯಲ್ಲಿ...

ಹೆಚ್ಚಿದ ಸೋಲಾರ ಬೆಳಕಿನಲಿ
ಕತ್ತಲೆಯ ಬದುಕ ಪಯಣ
ಆಶ್ರಯವಾದ ಆಶ್ರಯ ಮನೆಯ
ಗೂಡಿನಲಿ ಉಸಿರು ಕಟ್ಟಿದ ಅನುಭವ
ಪಕ್ಕಾ ರಸ್ತೆಯಲ್ಲಿ ಹೆಜ್ಜೆ ಇಡುವಾಗ
ಮುಳ್ಳೊತ್ತಿದ ಅನುಭವ
ನಾಗರಿಕತೆಯ ನಾಜೂಕುತನ,
ಒರಟು ಕಾಡಸಂಸ್ಕೃತಿಯ ಬದುಕು
ಕಟ್ಟಿಕೊಳ್ಳಲಾರದ, ಕಟ್ಟಿಕೊಳ್ಳಲೇಬೇಕು ಬದುಕು,
ಹರಿದು ಹಂಚಿದ ಬದುಕಿನಲಿ,
ಕಮರಿದ ನಾಳೆಗಳ ಕನಸು
ನಿಟ್ಟುಸಿರೊಂದೆ ಆಸರೆ,
ಮುಖ್ಯವಾಹಿನಿಯ ಕೊಡುಗೆಯಲ್ಲವೆ ?

ಭಾಗ್ಯ ಹಾಗಲಗಂಚಿ
ಕುಂಚೆಬೈಲು ಅಂಚೆ, ಶೃಂಗೇರಿ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

ತೊಡಗಿಸಿಕೊಂಡಿದ್ದಾನೆ ಎಂಬುದು ಮುಖ್ಯ. ಸಂಪೂರ್ಣ ತೊಡಗುವಿಕೆಯಲ್ಲಿ ಆ ವಸ್ತು ತಾತ್ವಿಕವಲ್ಲದ ತಾತ್ಕಾಲಿಕ ಅನುಕಂಪ ಅಥವಾ ಆಕ್ರೋಶದ ಅಭಿವ್ಯಕ್ತಿಗೆ ಕೇವಲ ಒಂದು ಸಾಧನವಾಗುವುದಿಲ್ಲ; ಸಹಾನುಭೂತಿ ಗಿಟ್ಟಿಸುವುದಕ್ಕೆ ಸಿದ್ಧವಾದ ತೇವಗೊಂಡ ಶಬ್ದ ಸಮೂಹವಾಗುವುದಿಲ್ಲ ಅಥವಾ ತನ್ನ ವೈವಿಧ್ಯಮಯ ವಸ್ತುಭಂಡಾರಕ್ಕೆ ಅನೇಕ ಸೇರ್ಪಡೆಯಾಗಷ್ಟೇ ಉಳಿಯುವುದಿಲ್ಲ. ಇವೆಲ್ಲವನ್ನು ಮೀರಿ ನಿಂತ ಹೆಜ್ಜೆ ಗುರುತನ್ನು ಅದರಲ್ಲಿ ಕಾಣುತ್ತೇವೆ. ವಸ್ತುವಿನ ಒಳಹೊಕ್ಕು ನಡೆಸುವ ಇಂಥ ಶೋಧನೆಯಲ್ಲಿ ಒಂದು ನಿರ್ದಿಷ್ಟ ದಿಕ್ಕು ಸಿಕ್ಕುವುದು ಸಾಧ್ಯ. ಈ ನಿರ್ದಿಷ್ಟ ದಿಕ್ಕು ವೈಜ್ಞಾನಿಕ ತಳಹದಿಯ ಮೇಲೆ ಕಂಡುಕೊಂಡದ್ದಾದರೆ, ಅದು ಇವತ್ತಿನ ಸಂದರ್ಭದಲ್ಲಿ ಗಟ್ಟಿಯಾದದ್ದು. ವ್ಯಕ್ತಿ ಇಂಥ ಚಿಂತನೆಯಲ್ಲಿ ತನ್ನನ್ನು ತೀವ್ರವಾಗಿ ತೊಡಗಿಸಿಕೊಂಡಾಗ ಒಂದು ತಾತ್ವಿಕ ಧೋರಣೆ ರೂಪುಗೊಳ್ಳುತ್ತದೆ. ಇಲ್ಲವೆ ಈಗಾಗಲೇ ಇರುವ ತಾತ್ವಿಕ ನಿಲುವಿನಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಹೀಗಾದಾಗ ಕವಿ ತೋರಿಸುವ ಪ್ರತಿಕ್ರಿಯಾತ್ಮಕ ಕವಿತೆ (ಕೃತಿ)ಯ ಹಿಂದೆಯೂ ಪ್ರಜ್ಞೆಯ ಪಾತಳಿಯಿರುವುದು ಅನುಭವಕ್ಕೆ ಬರುತ್ತದೆ.''

ಬಂಡಾಯ ಪರಂಪರೆಯು ಸೃಷ್ಟಿಸಿಕೊಳ್ಳಬಯಸುವ ವಿಶಿಷ್ಟ ಅಭಿವ್ಯಕ್ತಿ ಮಾರ್ಗ (ಈಡಿಯಮ್)ವನ್ನು ಸರಜೂ ಅವರ ಕವನಗಳ ಸಾಮಾಜಿಕ ಪ್ರಜ್ಞೆಯು ಹೊಸ ನೆಲೆಯಲ್ಲಿ ಪರಿಕಲ್ಪಿಸಿದೆ. ಇಲ್ಲಿ ಕವಿ ಸಂಕೀರ್ಣವಾಗಿರುವ ಸಮಾಜದ ಸೂಕ್ಷ್ಮಾತಿಸೂಕ್ಷ್ಮ ಸ್ವರೂಪವನ್ನು ಗ್ರಹಿಸುವ ಮತ್ತು ಅದರಿಂದ ಉಂಟಾಗುವ ಅನುಭವಗಳಿಗೆ ಭಾಷೆಯ ಮೂಲಕ ಪ್ರತಿಕ್ರಿಯಿಸುವ ಕ್ರಿಯೆಯೇ ಮುಖ್ಯವಾಗುತ್ತದೆ. ಬಂಡಾಯದ ಸ್ವಯಂಪೂರ್ಣ ದೃಷ್ಟಿಕೋನವೇ ಅಂತಿಮವಾಗಿ ಇಲ್ಲಿ ಕವಿಯ ಭಾಷಿಕ ಅಭಿವ್ಯಕ್ತಿಗೆ ಕಾರಣವಾಗಿದೆ. ಈ ಸೃಜನಶೀಲ ಹಾಗೂ ವೈಚಾರಿಕ ಸ್ವಯಂಪೂರ್ಣತೆಯು ಮೂಲಭೂತ ಅಗತ್ಯತೆಯ ಸ್ಥಿತಿಯೇ ಹೊರತು, ಪೂರ್ಣ ತೃಪ್ತ ಸ್ಥಿತಿ ಅಲ್ಲ. ಅದು ಅನ್ವೇಷಕ ಸ್ಥಿತಿಯೂ ಅಲ್ಲ. ಅಗತ್ಯ ಸ್ಥಿತಿ ಮತ್ತು ಅನ್ವೇಷಕ ಸ್ಥಿತಿಗಳ ನಡುವೆ ಒಂದು ಮುಖಾಮುಖಿಯಿಂದಲೇ ಸರಜೂ ಅವರ ಕವನಗಳ ಸೃಜನಶೀಲತೆಯು ಅದರ ಬಹುಮುಖಿತೆಯನ್ನು, ಸಮೃದ್ಧ ಸ್ಥಿತಿಯನ್ನು ಸ್ಥಾಪಿಸಿಕೊಳ್ಳುತ್ತದೆ. ಬಂಡಾಯ ಸಂಸ್ಕೃತಿಯ ಆಂತರಿಕ ಚೌಕಟ್ಟಿನೊಳಗೆ ಅವರ ಕವನಗಳನ್ನು ಚರ್ಚಿಸುವ ಸಾಧ್ಯತೆಗೆ ಅಂತರ್ಮುಖಿ ಸಾರ್ಥಕತೆ ಇದೆ. ಆದರೆ ಅದು ಇಲ್ಲಿನ ಕವನಗಳನ್ನು ಒಂದು ಬಗೆಯ ಸೀಮಿತ ಆಸ್ವಾದನೆಗೆ ಮಾತ್ರ ಮಿತಿಗೊಳಿಸುತ್ತದೆ. ಕನ್ನಡ ಕಾವ್ಯ ಪರಂಪರೆಯಲ್ಲಿ 'ಬಂಡಾಯ'ವು ರೂಪುಗೊಂಡ ಪ್ರಕ್ರಿಯೆಯಲ್ಲಿ ಚಾರಿತ್ರಿಕವಾಗಿ ಹಲಬಗೆಯ ಒತ್ತಡಗಳ, ಶಕ್ತಿಗಳ, ಕ್ಷೇತ್ರಗಳ, ಸನ್ನಿವೇಶಗಳ ಮುಖಾಮುಖಿಯಿದೆ. ಹೀಗೆ ಸಿದ್ಧವಾದ ಚಾರಿತ್ರಿಕ ಎರಕದಲ್ಲಿ ಮೂಡಿದ ಈ ಕವಿಯ ಕವನಗಳಿಗೆ ಅದನ್ನು ಮೀರುವ ಗುಣವೂ ಇದೆ. ಈ ಅಂಶವು ೧೯೭೨ರಿಂದ ೨೦೦೮ರವರೆಗಿನ ಸುಮಾರು ನಾಲ್ಕು ದಶಕಗಳ ಇಲ್ಲಿನ ಕವನಗಳನ್ನು ಪರಿಶೀಲಿಸಿದಾಗ ಹೊರನೋಟಕ್ಕೆ ವ್ಯಕ್ತವಾಗುತ್ತದೆ. ಬಂಡಾಯವು ಒಂದು ಮನೋಧರ್ಮವಾಗಿ ಈ ನಾಲ್ಕು ದಶಕಗಳಲ್ಲಿನ ಕವನಗಳ ಪ್ರಧಾನ ಭೂಮಿಕೆಯಾದರೂ ಇದರ ಸ್ಥಾನ ಮುಖ್ಯವಾಗಿ ಕವಿಯ ಕಾವ್ಯಮೀಮಾಂಸೆ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದ್ದು.

ನಾವು ಅಶಾಂತ ಪೀಳಿಗೆಯ ಜನ
ಶಾಂತಿಗಾಗಿ, ನೆಮ್ಮದಿಗಾಗಿ ನಾಯಿಯಂತೆ
ಸಾವಿರ ಮೈಲು ತಿರುಗಾಡಿ
ಮತ್ತೆ ಅದೇ ಸ್ಥಳಕ್ಕೆ ಬರುವ
ನಮಗೆ ಯಾರ ಬಗ್ಗೆಯೂ ಆಸೆ ಇಲ್ಲ
ಲಜ್ಜೆ, ಮಾನ, ಮರ್ಯಾದೆಗಳಿದ್ದರೂ
ಸಹ ನಾವು ಮಾನಗೇಡಿ, ಲಜ್ಜೆಗೇಡಿಗಳು

('ಬೆಂಕಿ-ಬೀರು', ೧೯೭೨,೧೩)

ಸಾಂಸ್ಥಿಕ ನಿಯಮವನ್ನು ಒಡೆಯುವ ಸಂಪ್ರದಾಯವಾದಿ ತಾತ್ವಿಕತೆಯನ್ನು ಮೀರಿ ಸಾಗುವ 'ಶಾಂತಿಗಾಗಿ ನೆಮ್ಮದಿಗಾಗಿ ನಾಯಿಯಂತೆ' ತಿರುಗಾಡಿ ಮತ್ತೆ ಅದೇ ಸ್ಥಳಕ್ಕೆ ಬರುವ, ಹೆಸರಿಲ್ಲದ ದೆಸೆಯಿಲ್ಲದ, ಎಲ್ಲಿಯೂ ಲಕ್ಷ್ಯವಿಲ್ಲದ, 'ಹೊಕ್ಕಳ ಕೆಳಗೆ ಹೂವಿಲ್ಲ'ದ, ಅಶಾಂತ ಪೀಳಿಗೆಯ ಜನರಿಗೆ ಇರುವ ಎಚ್ಚರ ಯಾವ ಬಗೆಯದು ?

ಬದುಕಿನ ಶೂನ್ಯತೆ, ಕ್ರೌರ್ಯಕ್ಕೆ ಮನಬಿಚ್ಚುವುದು ಅಷ್ಟು ಕಷ್ಟವಲ್ಲ. ಆದರೆ ಮನಬಿಚ್ಚಿ ಪಾಪದ ಆಳಕ್ಕೆ ಇಳಿದು ನೈತಿಕ ಎಚ್ಚರವನ್ನು ಉಳಿಸಿಕೊಳ್ಳುವುದು ಕಷ್ಟ. ಒಂದು ಅನುಭವದ ಅಪಾಯ ಮತ್ತು ದುರಂತವನ್ನು ಎದುರಿಸಿ ಕಾವ್ಯಕ್ಕೆ ಗತ್ತು ನೀಡುವುದನ್ನು ಸರಜೂ ಕಾಟ್ಕರ್ ಅವರ ಹಸಿದ ನೆಲದ 'ಸೂರ್ಯ', 'ಹೊಸಪುರಾಣ', 'ದಂಗೆ', 'ಮೂರು ಪಾತಗಳು', 'ಮಾತು' ಈ ಕವನಗಳಲ್ಲಿ ಗುರುತಿಸಬಹುದು.

ಪಟ್ಟಭದ್ರ ವ್ಯವಸ್ಥೆಯ ಒಳಗಿನಿಂದ ಮನುಷ್ಯ ದಕ್ಕಿಸಿಕೊಳ್ಳಬೇಕಾದ ದ್ವಂದ್ವಮಯ ಸತ್ಯಕ್ಕೆ ಸಂಕೇತವಾದ ಕವನ 'ಗೋಡೆ ನಡೆಯುತ್ತದೆ'.

ಬಹಳ ಹಳೆಯದ್ದು ಅಜ್ಜನ ಮುತ್ತಜ್ಜನ ಕಾಲದ್ದು
ಬಹಳ ಗಟ್ಟಿ ಬ್ರಿಟಿಷರು ಬಂದಾಗ ಹಸೀಗೋಡೆ
ಕಲ್ಲು ಮಣ್ಣು ಇಟ್ಟಿಗೆಗಳು ತುಟ್ಟಿಯಾಗಿರಲಿಲ್ಲ ಆಗ
ಎದ್ದದ್ದು ಇನ್ನೂ ಬಿದ್ದಿಲ್ಲ
('ಹಸಿದ ನೆಲ', ೧೯೭೫, ೧೩)

ಈ ಸಾಲುಗಳು ಇಡೀ ವ್ಯವಸ್ಥೆಯನ್ನು ಗೋಡೆಗೆ ಸಮೀಕರಿಸಿ ಇತಿಹಾಸ ಮತ್ತು ವರ್ತಮಾನವನ್ನು ಮುಖಾಮುಖಿಗೊಳಿಸುವಲ್ಲಿ ಕಾಲದ ಚಲನೆಯ ಪ್ರಜ್ಞೆಯನ್ನು ವಿಡಂಬಿಸುತ್ತವೆ. ಚಲನೆಯನ್ನು ಅರಿಯದೆ ವ್ಯಕ್ತಿಗಳು ತಣ್ಣಗೆ ಸಾಗುವ ಬದುಕಿನ ಸಂಕೇತವೇ ಗೋಡೆ. ಆದರೆ ಕವಿ ನಿರೂಪಿಸುವ ಗೋಡೆ ವಿಚಿತ್ರವಾದ್ದು. ಸಾವಕಾಶವಾಗಿ ವರ್ಷಕ್ಕೊಮ್ಮೆ ಸ್ವಲ್ಪ ಸ್ವಲ್ಪ ಮುಂದೆ ತೆವಳಿ, ಅಡುಗೆಮನೆಗೆ ಹತ್ತಿ ನಿಂತಿದ್ದ ಗೋಡೆ ಹೋಗಿಯೇಬಿಡುತ್ತದೆಂಬ ಹೆದರಿಕೆಯು ಕಾಲನ ಆಗೋಚರ ಚಲನೆಯಂತೆ. ನಿಧಾನವಾಗಿ ಚಲಿಸುವ ಕಾಲವನ್ನು 'ಗೋಡೆ'ಯ ಅಗೋಚರ ಚಲನೆಯಲ್ಲಿ ಪರಿಕಲ್ಪಿಸುವಾಗ ಕವಿಗಿರುವ ಸಮಸ್ಯೆ ಎಂದರೆ, ವ್ಯಕ್ತಿಗಳ ಬುದ್ಧಿಗೆ ಎಟುಕದ, ವಿಂಗಡಣೆಗೆ ಸಿಗದ ಮೂಲ ಭೂತವಾದ ಕಾಲದ ಚಲನೆಯ ನೋವಿಗೆ ಸಂಬಂಧಿಸಿದ್ದು. ಈ ನೋವನ್ನು 'ಕವನ'ದ ಚಹರೆಯ ಒಳಗೆ ತಾಂತ್ರಿಕ ಕುಶಲತೆಯಿಂದ ಹೇಳುವುದು ಕವಿಗಿರುವ ಸವಾಲು. ಸರಜೂ ಅವರ ಕವನಗಳಲ್ಲಿ ಕಾಣುವ ನೋವು ತುಂಬಿದ ಆಕ್ರೋಶ ಮಾನಸಿಕ ನೆಲೆಯದ್ದು. ಈ ಸಮಾಜಕ್ಕೆ ಸಂಬಂಧಿಸಿ ಅದರ ಭಾಗವಾಗಿ ದತ್ತಕವಾದ್ದು.

ಇಂಡಿಯಾದಲ್ಲಿ ನಿರ್ಮಾಣಗೊಳ್ಳುವ ನಗರ ಸಂಸ್ಕೃತಿಯೊಂದು ಗ್ರಾಮೀಣ ಜೀವನ ದರ್ಶನವನ್ನು ತಣ್ಣಗೆ ಸೂರೆಗೊಳ್ಳುವಾಗ ವಿಪ್ಲವದಂತೆ ಕಾಣಿಸುವ ಬಡತನ, ಕೊಳಕುತನ, ಪರಕೀಯತೆ, ಕೃತಕತೆ, ನಿರ್ಲಿಪ್ತತೆಯ ನರಕ ವ್ಯಕ್ತಿಗಳ ಸುತ್ತ ಕಟ್ಟಿಕೊಳ್ಳುತ್ತದೆ. ಈ ಪರಿಸರ ವ್ಯಕ್ತಿಯ ಕಾಲಪ್ರಜ್ಞೆಯನ್ನು ಸಹ ತ್ವರೆಗೊಳಿಸುತ್ತದೆ. ಹೆಚ್ಚೆಚ್ಚು ಹೃದಯಹೀನರನ್ನಾಗಿಸುತ್ತದೆ. ಈ ಹೃದಯಹೀನತೆಯನ್ನು ತೊಡೆಯಲು ಮತ್ತಷ್ಟು ರೋಚಕ ಚಟುವಟಿಕೆಯಲ್ಲಿ ತೊಡಗುವ (ನಗರಗಳಾಗುವ) ವ್ಯಕ್ತಿಗಳ ಕುರಿತು, ಅಂತೆಯೆ ಸಂಸ್ಕೃತಿಯ ಏಕಮುಖಿ ನಡೆಗೆ ನಿಷ್ಠುರವಾದ ಧ್ವನಿಯಲ್ಲಿ ಪ್ರತಿಕ್ರಿಯಿಸುವ ಕವನಗಳು ಮ್ಯಾನಿಫೆಸ್ಟೋ, ಪೆಗಾಸಸ್, ಏಕಾಂತದ ಮನುಷ್ಯ, ಅಪ್ಪ, ಗಾಂಧಿ ಟು ಗೋಧ್ರಾ ಸಂಕಲನಗಳಲ್ಲಿವೆ. ನೈತಿಕತೆಯ ಸ್ಪರ್ಶವಿಲ್ಲದ ನಿರ್ವಾತವೊಂದರ ಸ್ಥಿತಿಗೆ ಸಮಾಜದ ಎಲ್ಲ ವ್ಯವಸ್ಥೆಗಳು ಕಾರಣವಾಗಿಬಿಡುವ ಸನ್ನಿವೇಶವನ್ನು ಸಂಕೇತಗೊಳಿಸಿ ಧ್ವನಿಸುವ ಕವನ ಮ್ಯಾನಿಫೆಸ್ಟೋದ 'ಕಾಡು'. ನಿಸರ್ಗವನ್ನು ವಿಭಿನ್ನವಾಗಿ ವ್ಯಾಖ್ಯಾನಿಸುವ ಒಂದರ್ಥದಲ್ಲಿ ಬಂಡಾಯ ಮನೋಧರ್ಮವು ಒಳಗುಮಾಡಿಕೊಂಡ ನಿಸರ್ಗದ ಪರಿಕಲ್ಪನೆಗೆ ಸಾಕ್ಷಿ ಈ ಕವನ.

ಕಾಡಿನಲ್ಲಿ ಎಲ್ಲೂ
ಮುಖವಾಡಗಳ ಹಾವಳಿ ಇರುವುದಿಲ್ಲ
ಹುಲಿ ಹುಲಿಯಂತೆ
ಕರಡಿ ಕರಡಿಯಂತೆ
ಚಿರತೆ ಚಿರತೆಯಂತೆ
ಎಂದೂ ಯಾರೂ
ಬೇರೊಬ್ಬರ ಮುಖಗಳನ್ನು
ಕದಿಯುವುದಿಲ್ಲ. ('ಮ್ಯಾನಿಫೆಸ್ಟೋ', ೧೯೯೧, ೨)

'ಕಾಡು' ಧ್ವನಿಸುವ ಅರ್ಥ ಹೊಸ ಬಗೆಯದ್ದು. ಮನುಷ್ಯರು ಇರುವುದು ಕೂಡ ಅವರದೇ ಕಾಡಿನಲ್ಲೆ. ಆದರೆ ಮನುಷ್ಯರ ಕಾಡಿನ ನಿಯಮಗಳೇ ಬೇರೆ. ಇಲ್ಲಿ ವ್ಯಕ್ತಿ ವ್ಯಕ್ತಿಗಳು ಒಬ್ಬರ ಮೇಲೊಬ್ಬರು ಎರಗಿ ಇನ್ನೊಬ್ಬರ ಮೇಲೆ ರಕ್ತಕ್ಕಾಗಿ ಹಸಿದು ಕಾಯುವ, ಹಾವಾಗುವ, ಹುಲಿಯಾಗುವಂಥವರು. ಕತ್ತಲಲ್ಲಿ ಮುಖಗಳನ್ನು ಬದಲಿ ಮಾಡುತ್ತಿದ್ದರೂ 'ಗುಲಾಬಿ ಬೆಳೆಯುತ್ತಾರೆ'. ಈ ಕ್ರೌರ್ಯತೆ ಒಡೆದು ತೋರುವುದು ಮುಂಜಾನೆ ನಕ್ಕವರ ರಕ್ತವನ್ನು ಸಂಜೆ ಹೀರಿ ರಾತ್ರಿ ಅವರಿಗಾಗಿ ಶೋಕ ಸಂದೇಶ ಬರೆಯುತ್ತಿರುವ ವ್ಯಕ್ತಿಗಳ ಅಮಾನವೀಯತೆಯಲ್ಲಿ. ತಮ್ಮ ಯಾವುದೇ ವರ್ತನೆಗೂ ಅಂತಃಸ್ಫುರಣೆಗೊಳ್ಳದ, ಮೃದುವಾದ ವ್ಯಕ್ತಿಗಳು ಬದುಕುವ ಕಾಡು ನೈಜಕಾಡುಗಳಿಗಿಂತಲೂ ಅಮಾನವೀಯವಾಗಿದೆ. ಇಲ್ಲಿ ಮಾನವೀಯ ಮತ್ತು ಅಮಾನವೀಯ ಮುಖಗಳು ಮನುಕುಲ ಸಾಗಿಬಂದ ಪ್ರಾತಿನಿಧಿಕ ರೂಪವೆಂದು ಗ್ರಹಿಸುವುದಕ್ಕಿಂತ ಭಿನ್ನವಾಗಿ ಅವರೊಳಗಿರುವ ಸೂಕ್ಷ್ಮವೂ ಆಗೋಚರವೂ ಆದ ಕ್ರೌರ್ಯವು ಅವರೊಳಗಿನ ಸಿನಿಕತನವಾಗಿ ಮಾರ್ಪಡುವುದನ್ನು ಕವನ ತೆರೆದಿಡುತ್ತದೆ.

ಸರಜೂ ಕಾಟ್ಕರ್ ಅವರ ಕವನಗಳಲ್ಲಿ ಅಭಿವ್ಯಕ್ತಗೊಂಡಿರುವ 'ಪ್ರಜಾಪ್ರಭುತ್ವ' ಪರಿಕಲ್ಪನೆಯು ವಿಶಿಷ್ಟ ಬಗೆಯದ್ದು. ಇದು ಕೇವಲ ಮತ ಚಲಾವಣೆಗೆ ಮಾತ್ರ ಸೀಮಿತವಾದುದಲ್ಲ. ಚುನಾವಣೆಗಳ ಶಾಸ್ತ್ರಕ್ಕಷ್ಟೆ ಸಂಬಂಧಿಸಿದುದಲ್ಲ. ಪ್ರಜಾತಂತ್ರ ವ್ಯವಸ್ಥೆಯು ವ್ಯಕ್ತಿಯ ಕಲ್ಪನಾಶೀಲತೆಯಿಂದಲೆ ಸೃಷ್ಟಿಯಾಗುವಂಥದ್ದು. ರೂಪು ತಳೆಯುವಂಥದ್ದು. ಅದು ಜೀವಂತವಾಗಿ ಉಳಿಯ ಬೇಕಾದಲ್ಲಿ ವ್ಯಕ್ತಿ ತನ್ನನ್ನು ತಾನು ಮತ್ತೆ ಮತ್ತೆ ಸೃಜಿಸಿಕೊಳ್ಳುತ್ತಿರಬೇಕು. ಇಲ್ಲಿ ಮಾನವ ಸ್ವಾತಂತ್ರ್ಯ ಮತ್ತು ಹಕ್ಕುಗಳ ಕುರಿತಾದ ಕಲ್ಪನೆಗಳು ಅಂತರ್ಗತಗೊಂಡಿರುವುದೇ ಕಾಲದ ಚಲನೆಯಲ್ಲಿ. ಕಾಲದ ಇಂಥ ಬಹುರೂಪಿ ಆಯಾಮವೇ ಮನುಕುಲದ ಬಹುರೂಪತೆಯನ್ನು ಕಾಪಾಡಬಲ್ಲವು ಎಂಬ ವಿಶ್ವಾಸ ಕವಿಯದು:

ಇಂದಲ್ಲದಿರೆ ನಾಳೆ
ಈ ಜಗವನು ಆಳುವವರು ನಾವೇ
ಸೂರ್ಯನ ಜೊತೆಗೆಯೇ
ಬಂದು ಕತ್ತಲನು ನುಂಗಿಬಿಡುವೆವು
ಪ್ರತಿ ಕಿಡಿಗಳ ತೂರಿ
ಬೆಳಕಾಗಿ ಮನೆ ತುಂಬುವೆವು
ಹಾವಾಗಿದ್ದ ಜನರ ಕೈಗೆ
ಹೂವು ಕೊಡುವೆವು
ವಿಷ ಕಕ್ಕಿದವರಿಗೆಲ್ಲ
ಸಿಹಿ ಹಂಚುವೆವು
ಬಂದೂಕುಗಳಿಗೆ ಹಚ್ಚುವೆವು ಬಿಳಿ ಧ್ವಜ
ಗುಂಡುಗಳಿಗೆ ರಜ
ಜೇಲುಗಳೆಲ್ಲ
ಧಾನ್ಯಗಳ ಕಣಜ
ಸಾವಿನ ಜೊತೆ ಕೂತು
ಮಾಡುವೆವು ಮೇಜುವಾನಿ
ಮುಳ್ಳು ಕಂಟಿಗಳಲ್ಲೂ ಅರಳಿಸುವೆವು
ಮಲ್ಲಿಗೆ ಜಾಜಿ ('ಮ್ಯಾನಿಫೆಸ್ಟೋ', ೧೯೮೮, ೪೦)

'ಮ್ಯಾನಿಫೆಸ್ಟೋ' ಪ್ರಜಾಪ್ರಭುತ್ವವನ್ನು ಸಮಾಜವಾದಿ ಭವಿಷ್ಯದಲ್ಲಿ ಕಲ್ಪಿಸುವ ಕವನ. ಪ್ರಜಾಪ್ರಭುತ್ವದ ಭವಿಷ್ಯವನ್ನು ಹೊಸದಾಗಿ ಕಲ್ಪಿಸುವಾಗ, ಕಥಿಸುವಾಗ ಅದನ್ನು ಪರರ ವಶವಾಗಲು ಬಿಡದೆ, ಸ್ವಂತಿಕೆಯ ಸೀಮೆಯಾಗಿ ವಿಸ್ತರಿಸುವ ಪ್ರಯತ್ನವಿದೆ. ಭವಿಷ್ಯದ ಈ ಕಲ್ಪನಾಕಥನ ಸಂಕಥನವಾಗಿಯೂ ಪರಿಕಲ್ಪನಾ ಕಥನವಾಗಿಯೂ ಪುಷ್ಟಿಗೊಳ್ಳುವಂತೆ ವ್ಯಕ್ತವಾಗುವುದು ಕವನದ ಕೊನೆಯ ಐದು ಸಾಲುಗಳಲ್ಲಿ. ಇಲ್ಲಿ ಭವಿಷ್ಯವೆಂಬುದು ಏಕಮುಖಿ-ಏಕಾಕಾರಿ 'ಕನಸಾಗದೆ', ಬಹುಮುಖಿ ಆಯಾಮವನ್ನು ಪಡೆದುಕೊಳ್ಳುವುದು ಗಮನಾರ್ಹ. ಇಂದಿನ ಜಾಗತಿಕ ವಿದ್ಯಮಾನದಲ್ಲಿ ಜೀವರಕ್ಷಕ ತಂತ್ರದ ಪ್ರಸ್ತುತತೆ ಎಷ್ಟೆಂಬುದನ್ನು ವಿವರಿಸಿಕೊಳ್ಳಬೇಕಾದ ಅಗತ್ಯವಿಲ್ಲ, ಅದು ಎಲ್ಲರಿಗೂ ತಿಳಿದಿರುವ ಸಂಗತಿಯೆ. ಈ ಕಾರಣದಿಂದಲೇ 'ಇಂದಲ್ಲದಿದ್ದರೆ ನಾಳೆ ಈ ಜಗವನು ಆಳುವವರು ನಾವೆ; ಸೂರ್ಯನ ಜೊತೆಗೆಯೇ ಬಂದು ಕತ್ತಲನು ನುಂಗಿಬಿಡುವೆವು' ಎನ್ನುವ ಸಾಲು ಧ್ವನಿಸುವ ಅರ್ಥವು ಒಂದಿಷ್ಟು ದಿವ್ಯ ವಿವೇಕವುಳ್ಳದ್ದೂ ಒಂದಿಷ್ಟು ವಕ್ರಚೇಷ್ಟೆ ವಿಡಂಬನೆಯಾಗಿಯೂ ಕೇಳಿಸುತ್ತದೆ. ಆಧುನಿಕ ರಾಜಕೀಯದ ವ್ಯತಿರಿಕ್ತ ಪರಿಸ್ಥಿತಿಯೂ ಇದಕ್ಕೆ ಕಾರಣವಾಗಿದೆ. ಮತ್ತೊಂದು ರೀತಿಯಲ್ಲಿ ಅರ್ಥೈಸುವುದಾದರೆ; 'ಇಂದಲ್ಲ ನಾಳೆ ಈ ಜಗವ ಆಳುವವರು ನಾವೇ' ಎನ್ನುವ ಭವಿಷ್ಯದ ಆಶಾವಾದದಿಂದ 'ಕಟ್ಟುವುದು' ಕಷ್ಟದ ಕಾರ್ಯವೇನೂ ಅಲ್ಲ. ಆದರೆ ಅಂಥ ವ್ಯಾಖ್ಯೆಯ ಅರ್ಥವ್ಯಾಪ್ತಿಯನ್ನು ಗ್ರಹಿಸುವುದು ಕಷ್ಟ. ಆಧುನಿಕ ರಾಜಕೀಯ ಸಂದರ್ಭದಲ್ಲಿ ಬಹುಜನತೆಯ ರಾಜಕೀಯ 'ವಿಮುಖತೆ'ಯು ಎದ್ದು ತೋರುವ ಸಂಗತಿಯಾಗಿದೆ.

ಆಶಯ ಮತ್ತು ವಾಸ್ತವಗಳ ಪ್ರಜಾಸತ್ತಾತ್ಮಕ ರಾಜಕಾರಣದ ಒಂದು ಸುಪ್ರಸಿದ್ಧ ಗಾಳವೆಂದರೆ 'ಚುನಾವಣೆ'. 'ಐದು ವರ್ಷದ ಹಿಂದೆ' ಎಂಬ ಕವನದಲ್ಲಿ ಗುರುತಿಸುವಂತೆ –

ಐದು ವರ್ಷದ ಹಿಂದೆ ಬಂದ ಗೆದ್ದು ಬಂತು ದಂಡು
ಚುನಾವಣೆ ಸಮಯ ಮನೆ ಮನೆಗೆ ಬಂತು ದಂಡು
ಯಾರೊಬ್ಬರ ಮನೆಯೂ ಬಿಡಲಿಲ್ಲ ಎಲ್ಲರಿಗೂ
ನಮಸ್ಕಾರ

ಭಿನ್ನ ರಾಜಕಾರಣಗಳ ದಂಡು ಬಂತು ದಂಡು
ಪೂರ್ಣವಾಗಿ ನೋಡಲು ವಿನಯವಂತರಾಗಿದ್ದರು
ನೋಟು ಕೊಡುವ ಖೂಳರ ದಂಡು ಬಂತು ದಂಡು
ಗೆದ್ದ ನಂತರ ಈ ಜನರು ಅದೆಲ್ಲಿ ಮಾಯವಾದರೋ
ಐದು ವರ್ಷದ ನಂತರ ಮತ್ತೆ ಅವರು ಬರುವರೋ
('ಗಜ಼ಲ್', ೧೯೯೯, ೩೪)

'ಚುನಾವಣೆ' ಎಂದರೆ 'ಜನರಿಗೇ ಅಧಿಕಾರ ಕೊಡುವ' ವಿಧಾನವೆಂದು ಗಂಟೆಹಿ ಸೆಳೆಯುವ ಈ ವ್ಯವಸ್ಥೆಯು ಹುಸಿಗೊಳ್ಳುವುದು ಕೂಡ ಚುನಾವಣಾ ಪ್ರಣೀತ ರಾಜಕಾರಣದಿಂದಲೇ. ಇದು ಪ್ರಜಾಪ್ರಭುತ್ವವೆಂದರೆ 'ಜನರ ಅಧಿಕಾರ' ಎಂಬುದನ್ನು ಮರೀಚಿಕೆಯನ್ನಾಗಿ ಮಾಡುತ್ತದೆ. ಮತ್ತೆ ಮತ್ತೆ ಬರುವ 'ಚುನಾವಣೆ' ಎಂಬ ಪರಿಕಲ್ಪನೆಯ ಮೂಲದಲ್ಲೇ ಅಡಗಿರುವ ಒಂದು ವೈರುಧ್ಯವನ್ನು 'ಬಂತು ದಂಡು' ಎಂಬ ಪದ ಮತ್ತೆ ಮತ್ತೆ ಪುನರಾವರ್ತನೆಗೊಳ್ಳುವ ಮೂಲಕ ಧ್ವನಿಸುತ್ತದೆ. ಹೊರಗೆ ಕಾಣುವ ಈ ರಾಜಕಾರಣದ 'ದಂಡು', ಇದನ್ನೇ ಇಂದು ಪ್ರಜಾಪ್ರಭುತ್ವವೆಂದು ಕರೆಯುವ ಅನಿವಾರ್ಯತೆಯನ್ನು ಎದುರು ಮಾಡಿರುವುದನ್ನು 'ಐದು ವರ್ಷದ ಹಿಂದೆ' ಕವನವು ವಾಚ್ಯವಾಗಿಯೆ ತೆರೆದಿಟ್ಟಿದೆ. (ಇದೇ ರಾಜಕಾರಣದ ಚಿತ್ರಣವನ್ನು 'ಹೀಗೂ ಆಗಬಹುದು ಒಂದು ದಿನ' ಕವನವು ಕೂಡ ಭಿನ್ನ ಬಗೆಯಲ್ಲಿ ಕಟ್ಟಿಕೊಡುತ್ತದೆ). 'ಯಾರೊಬ್ಬರ ಮನೆಯೂ ಬಿಡಲಿಲ್ಲ ಎಲ್ಲರಿಗೂ ನಮಸ್ಕಾರ' ಎಂಬ ಸಾಲು ಪ್ರಜಾಪ್ರಭುತ್ವದ ಒಳಗಿನ ಸಮಯಸಾಧಕತನವನ್ನು ಮಾರ್ಮಿಕವಾಗಿ ಹೇಳುತ್ತದೆ. ಅಧಿಕಾರವೆಂದರೆ ಇನ್ನೊಬ್ಬರ ಮೇಲಿನ ಅಧಿಕಾರವೆಂಬ ನಂಬಿಕೆಯೇ ಈ ವಿಪರ್ಯಾಸಕ್ಕೆ ಕಾರಣ. ಸ್ವಾರ್ಥ ರಾಜಕೀಯದಲ್ಲಿ ಅಧಿಕಾರಕ್ಕಾಗಿ ನಡೆಸುವ ಹಣಾಹಣಿ, ದುರ್ಬಲರ, ಅಲ್ಪಸಂಖ್ಯಾತರ, ನಿರ್ಗತಿಕ ವರ್ಗಗಳ, ಹೆಂಗಸರ, ಗುಲಾಮರ ಮೇಲಿನ ಅಧಿಕಾರ. ರಾಜಕೀಯ ಅಧಿಕಾರವೆಂಬುದು ಜನರ ಮೇಲಿರುವ ಅಧಿಕಾರವೆಂದು ಭಾವಿತವಾಗುವುದರಿಂದ, ಜನರೇ ಅಧಿಕಾರ ಹೊಂದಿರುವುದೆಂದು ಹೇಳುವುದು ಕೂಡ ಪ್ರಜಾಪ್ರಭುತ್ವದ ವಿಪರ್ಯಾಸವಾಗಿದೆ.

ಸಾಹಿತ್ಯಕ ಸಂದರ್ಭವೊಂದರ ಪರಿಮಿತಿಯಲ್ಲಿ ಸರಜೂ ಕಾಟ್ಕರ್ ಅವರ ಕವನಗಳ ಸೈದ್ಧಾಂತಿಕ ಕಾಳಜಿಗಳು, ತೆಗೆದುಕೊಳ್ಳುವ ನಿಲುವುಗಳು ಮಾರ್ಕ್ಸ್‌ವಾದಿ ಸೌಂದರ್ಯ ಮೀಮಾಂಸೆಯೊಂದಿಗೆ ವ್ಯವಹರಿಸುತ್ತವೆ. ಇವು ಅಧಿಕಾರಶಾಹಿಯ ಕೂಟಸ್ಥಾನಗಳನ್ನು ಒಡೆಯುತ್ತವೆ. ಅಲ್ಲದೆ ಯಾಜಮಾನ್ಯದ ಶೋಷಕ ಮಿಥ್‌ಗಳಿಂದ ಕೂಡಿದ ಸಂಚುಗಳ ಬಗೆಗೆ ಓದುಗ ಸದಾ ಎಚ್ಚರದಿಂದಿರಲು ಒತ್ತಾಯವನ್ನು ಹಾಕುತ್ತವೆ. ಬಹು ಸಂಖ್ಯಾತ ಜನಸಮುದಾಯವನ್ನು ಮರುಳುಮಾಡುವ ಮೂಲಕ ಅವರನ್ನು ಆಳುತ್ತಾ ಸದಾ ಅಧಿಕಾರ ಚಲಾಯಿಸುತ್ತಿರಲು ಅವರಿಂದಲೇ ಒಪ್ಪಿಗೆಯನ್ನು

# ಕನಸು

ನಡೆದಷ್ಟೇ

ಪಯಣ

ಇದೆಯೆಂದಾದ ಮೇಲೆ

ನಿಂತೇ

ಕನಸು ಕಾಣುವ ಜಿಡಿ !

ಸಂತೇಬೆನ್ನೂರು ಫೈಜ್ನಟ್ರಾಜ್
ಕಣಿವೆಬಿಳಚಿ

ಪಡೆಯುವ ಕೆಲವೇ ಜನಗಳ ನಿರ್ದಿಷ್ಟ ಗುಂಪೊಂದರ ಹುನ್ನಾರವನ್ನು ಹೇಳುವುದೇ ಸರಜೂ ಅವರ ಕವನಗಳ 'ರಾಜಕೀಯ ಯಾಜಮಾನ್ಯ' ಪರಿಕಲ್ಪನೆಯ ಸಾರವಾಗಿದೆ. ಬಲಾಢ್ಯ ಅಧಿಕಾರಶಾಹಿಯ ಪ್ರಭಾವಳಿ ಮತ್ತು ಪ್ರತಿಷ್ಠೆಗಳಿಗೆ ಜನಸಮುದಾಯವು ಯಾವಾಗಲೂ ಮಾರುಹೋಗಿರುತ್ತದೆ. ಅದೂ ಅಲ್ಲದೆ ಎದುರು ಬಿದ್ದರೆ ಕ್ರಾಂತಿಕಾರಕವೇ ಆಗಬಹುದಾದ ದಮನಿತ ಜನರನ್ನು ಈ ಬಲಾಢ್ಯ ವರ್ಗವು ನಿತ್ಯನಿರಂತರವಾಗಿ ಯಾಜಮಾನ್ಯವನ್ನು ಒಪ್ಪಿಕೊಳ್ಳುವಂತೆ ನಾನಾ ರೀತಿಯಲ್ಲಿ ಪ್ರೇರೇಪಿಸುತ್ತಿರುತ್ತದೆ. ಜಾತಿ, ವರ್ಗಭೇದದ ಸಮಾಜವನ್ನು ಒಪ್ಪಿಕೊಳ್ಳುವಂತೆ ನಿತ್ಯವೂ ತನ್ನ ಸಾಮಾಜಿಕ ಮತ್ತು ರಾಜಕೀಯ ಹುನ್ನಾರಗಳನ್ನು ಕೆಳವರ್ಗದ ಮೇಲೆ ಇದು ಪ್ರಯೋಗಿಸುತ್ತಿರುತ್ತದೆ. ಈ ಯಾಜಮಾನ್ಯವು ಅಧಿಕಾರದ ನೆಲೆಗಳನ್ನೇ ಬುಡ ಮೇಲು ಮಾಡಬಹುದಾದ ಬೂದಿ ಮುಚ್ಚಿದ ಕೆಂಡದಂತಹ ಶಕ್ತಿಯಾಗಿದೆ. ಈ ಶಕ್ತಿಗಳು ಸಮಾಜದಲ್ಲಿ ಅಡಗಿರುತ್ತವೆ ಎಂಬ ಅರಿವುಳ್ಳದ್ದೂ ಮತ್ತು ಅದನ್ನೆಲ್ಲಾ ಅವುಗಳ ಒಪ್ಪಿಗೆಯ ಮೂಲಕವೇ ನಿಯಂತ್ರಿಸುವಂಥದ್ದೂ ಆಗಿರುತ್ತದೆ ಎಂಬುದಾಗಿ ಮಾರ್ಕ್ಸ್‌ವಾದಿ ಸೌಂದರ್ಯ ಮೀಮಾಂಸೆ ಪರಿಭಾವಿಸುತ್ತದೆ. ಮಾರ್ಕ್ಸ್‌ವಾದಿ ಸೌಂದರ್ಯ ಮೀಮಾಂಸೆಯ ನೆಲೆಯಿಂದಲೇ ಸರಜೂ ಅವರ ಕವನಗಳು ಯಾಜಮಾನ್ಯದ ಸೂಕ್ಷ್ಮವಾದ ಪ್ರಭಾವಗಳಿಗೆ ಪ್ರಜ್ಞಾಪೂರ್ವಕವಾಗಿ ಮುಖಾಮುಖಿ ಗೊಳ್ಳುತ್ತವೆ. ಇವರ ಕವನಗಳ ಬಹು ಮುಖ್ಯ ಆಸಕ್ತಿಯು ವಿಚಾರಗಳ ಭೌತಿಕ ಸ್ವರೂಪದ ಕಡೆಗೆ, ರಾಜಕೀಯ ನಡೆಯ ತಾತ್ವೀಕರಣದ ಕಡೆಗೆ ಮತ್ತು ಯಾಜಮಾನ್ಯದ ಪರಿಕಲ್ಪನೆಯ ಕಡೆಗೇ ಇದೆ. ಹಸಿದ ನೆಲ, ಸೂರ್ಯ, ಮ್ಯಾನಿಫೆಸ್ಟೋ, ಏಕಾಂತದ ಮನುಷ್ಯ, ಪೆಗಾಸಸ್, ಗಾಂಧೀ ಟು ಗೋಧ್ರಾ, ಬೆಳ್ಳಿ ಸಾಲ್ಮನ್‌ವರೆಗಿನ ಸಂಕಲನಗಳ ಹೆಚ್ಚಿನ ಕವನಗಳು ಇತಿಹಾಸವು ಕೇವಲ ಆರ್ಥಿಕತೆಯಿಂದ ಮಾತ್ರ ಪ್ರಭಾವಿಸಲ್ಪಡುವುದಿಲ್ಲ, ಅದು ಐಡಿಯಾಲಜಿ (ವಿಚಾರ)ಗಳಿಂದಲೂ ಪ್ರಭಾವಿಸಲ್ಪಡುತ್ತದೆ ಎಂಬುದನ್ನು ಬಯಲುಮಾಡುತ್ತದೆ. ಕವಿ ಇಲ್ಲಿ ಸಾರ್ವತ್ರಿಕ ಐಡಿಯಾಲಜಿಗಳು ಸದಾ ಕಾಲವೂ ಇರುತ್ತವೆ ಎಂಬುದನ್ನು ನಂಬುವುದಿಲ್ಲ. ಬದಲಾಗಿ ಎಲ್ಲ ಘಟನೆಗಳು ಕಾಲ ಮತ್ತು ಸಂದರ್ಭಗಳಿಂದ ಇತಿಹಾಸೀಕೃತಗೊಂಡಿವೆ ಎಂದು ಪರಿಭಾವಿಸುತ್ತಾರೆ. ಇದರ ಪರಿಣಾಮವಾಗಿಯೇ ಇಲ್ಲಿನ ಕವನಗಳ ಚಿಂತನೆಯಲ್ಲಿ ಸಾಂಸ್ಕೃತಿಕ, ಕಲಾತ್ಮಕ ಮತ್ತು ಸಾಹಿತ್ಯಿಕ ಶಕ್ತಿಗಳ ಪುನರ್‌ಮೌಲ್ಯಮಾಪನ ಪ್ರಜ್ಞೆಯು ಹಾಸುಹೊಕ್ಕಾಗಿದೆ. ಇಲ್ಲಿ ಇಂಡಿಯಾದ ಸಾಮಾಜಿಕ, ರಾಜಕೀಯ, ಜಾತಿ ಆಧಾರಿತ ಇತಿಹಾಸಗಳಿಗೆ ಪ್ರತಿಕ್ರಿಯಿಸುವ ವಿಚಾರ ಭೂಮಿಕೆಯ ಪ್ರಧಾನ ಕಾಳಜಿಯು ನಿಜವಾದ ಪ್ರಜಾಪ್ರಭುತ್ವ ಸಂಸ್ಕೃತಿಯನ್ನು ಸಮರ್ಥಿಸುವುದೇ ಆಗಿದೆ. ಎಂದರೆ, ಸಾಮಾಜಿಕ ವ್ಯವಸ್ಥೆಯೊಂದು ಅದೆಷ್ಟೇ ಪ್ರಬಲವಾಗಿರಲಿ, ಅದರ ಪ್ರಾಬಲ್ಯತೆಯ ಸ್ವರೂಪವೇ ಒಂದು ಮಿತಿಯನ್ನು ಕೂಡ ಹೊಂದಿರುತ್ತದೆ. ಅಥವಾ ತಾನು ನಡೆಸುವ ಚಟುವಟಿಕೆಗಳಲ್ಲಿ ಅದು ಮಾಡಿಕೊಳ್ಳುವ ಆಯ್ಕೆಯೇ ಮಿತಿಯುಳ್ಳದ್ದಾಗಿರುತ್ತದೆ. ಹೀಗಾಗಿ ಪ್ರಬಲ ವ್ಯವಸ್ಥೆಯೊಂದು ಎಂದಿಗೂ ಇನ್ನಿತರ ಎಲ್ಲ ಸಾಮಾಜಿಕ ವಲಯಗಳನ್ನೂ ನಿಶ್ಶೇಷವಾಗಿಸಲು ಸಾಧ್ಯವಿಲ್ಲ. ಆದ್ದರಿಂದ ಇಂಥ ಪ್ರಬಲ ವ್ಯವಸ್ಥೆಗಳು ಯಾವಾಗಲೂ ಎದುರು ಬೀಳಬಲ್ಲ ಪರ್ಯಾಯ ಚಟುವಟಿಕೆಗಳಿಗೆ ತಮ್ಮೊಳಗೆ ಅವಕಾಶವನ್ನೂ ಇಟ್ಟುಕೊಂಡಿರುತ್ತವೆ ಮತ್ತು ಈ ರೀತಿಯ ಪರ್ಯಾಯ ಚಟುವಟಿಕೆಗಳು ಎಷ್ಟೋ ವೇಳೆ ಸಾಮಾಜಿಕವಾಗಿ ಇನ್ನೂ ಸಾಂಸ್ಥಿಕ ರೂಪದಲ್ಲಾಗಲೀ ಇಲ್ಲವೇ ಅಧಿಕಾರ ಸ್ವರೂಪಗಳಲ್ಲಾಗಲೀ ವ್ಯಕ್ತಗೊಂಡಿರುವುದೇ ಇಲ್ಲ ಎಂಬ ಚಿಂತನೆ ಸರಜೂ ಅವರ ಕವನಗಳ ಒಡಲೊಳಗೆ ಇದೆ. ತುಂಬಾ ಕರಾರುವಾಕ್ಕಾಗಿ ಮತ್ತು ಯಾರೂ ನಂಬದಂತೆ, ನಿರೀಕ್ಷಿಸದಂತೆ, ವಾಸ್ತವವನ್ನೇ ಪ್ರತಿಚಿತ್ರಿಸುತ್ತಿರುವಂತೆ ತೋರುವ ಅವರ ಕವನಗಳು 'ವಾಸ್ತವಿಕತೆಯ ನೆಲೆಗಳನ್ನು ಮತ್ತು ಸತ್ಯದ ಆಚರಣೆಗಳನ್ನೇ' ಬದಲಿಸುವಂತಹ ಸಂರಚನೆಗಳಾಗಿವೆ. ಇಲ್ಲಿ ಗಮನಿಸಬೇಕಾದ ಮಹತ್ವದ ಅಂಶವೆಂದರೆ, ಯಾವುದೇ 'ಪ್ರತಿನಿಧೀಕರಣವೇ' (ಸಾಮಾಜಿಕ, ರಾಜಕೀಯ, ಜಾತಿ, ವರ್ಗ, ಆರ್ಥಿಕ) ಇರಲಿ, ಅದು ಹೇಗೆಲ್ಲ ಅಪಪ್ರತಿನಿಧೀಕರಿಸುವ, ಅಪಾರ್ಥ ಉಂಟುಮಾಡುವ, ಸ್ವವಿಡಂಬನೆಗೊಳ್ಳುವ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎಂಬುದರ ಬಗ್ಗೆ ಕವಿಗೆ ಸಂಪೂರ್ಣ ಎಚ್ಚರವಿದೆ. ಹೀಗಾಗಿಯೇ ಇಲ್ಲಿನ ಕವನಗಳು ತಾತ್ವಿಕವಾಗಿ ತಾಟಸ್ಥ್ಯ ವಹಿಸದ, ತನ್ನದೇ ತಾತ್ವಿಕತೆಯ ಮಂಡನೆಗೆ ತೊಡಗುವ ರಚನೆಗಳಾಗಿವೆ. ಕಾವ್ಯಶಿಲ್ಪದ ಜಾಡನ್ನು ಹಿಡಿದು ಹೊರಡುವ ಇವು ಎಲ್ಲ ಬಗೆಯ ಸಾಂಸ್ಥಿಕ ರಚನೆಗಳ ಹಿಂದಿರುವ ಹುನ್ನಾರಗಳನ್ನು ಅರ್ಥ ಮಾಡಿಕೊಳ್ಳುವ ವಿಶ್ಲೇಷಣಾ ಲೋಕವಾಗಿವೆ. ಕವನಗಳ ಅಂತರ್ಯವು ಬಿಂಬಿಸುವ ವಿಶ್ಲೇಷಣೆಯು ಮುನ್ನೆಲೆಯಲ್ಲಿ ತಾತ್ವಿಕ ದೃಷ್ಟಿಕೋನವೊಂದು ಇರಬೇಕೆಂಬ ಹಂಬಲವನ್ನು ಓದುಗನ ಮುಂದಿಡುತ್ತದೆ.

ಡಾ|| ಕವಿತಾ ರೈ
ಅರ್ಕ, ಶಾರದಾ ನಗರ, ಮಾಡೂರು, ಕೋಟೆಕಾರು ಅಂಚೆ,
ಮಂಗಳೂರು



# ನೊಂದವರ ನೋವಿಗೆ ಮಿಡಿವ 'ನಿರಂತರ'




ನಿರಂತರ

ಬಿ.ವಿ.ಕಕ್ಕಿಲ್ಲಾಯ ಸಂಭಾವನಾ ಗ್ರಂಥ - ವಿವಿಧ ಲೇಖಕರು

ಪುಟ: ೩೩೩ ಬೆಲೆ: [illegible]

ಪ್ರಕಾಶಕರು: ಎಂ. ಎಸ್. ಕೃಷ್ಣನ್ ಸ್ಮರಣ ಸಮಿತಿ (ನೋಂ)

೧೧೫, ಎಂಎಚ್ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧


ನಮ್ಮ ನಡುವಿನ ವಯೋವೃದ್ಧ ಕಾಮ್ರೇಡ್ ಬಿ.ವಿ. ಕಕ್ಕಿಲ್ಲಾಯರಿಗೆ ಈಗ ತೊಂಭತ್ತೊಂದು ವರ್ಷ. ಇವರು ಕರುನಾಡಿನಲ್ಲಿ ನಿರಂತರ ಕೆಂಬಾವುಟ ಹಾರಿಸಿದವರಲ್ಲಿ ಪ್ರಮುಖರು. ಇಂಥವರ ಬಗ್ಗೆ ಪ್ರಸ್ತುತಪಡಿಸುವ ಮುನ್ನ ಇವರ ನಡಿಗೆಗೆ ತದ್ವಿರುದ್ಧ ಜಾಯಮಾನದವರ ಬಗ್ಗೆ ಕೊಂಚ ಪ್ರಸ್ತಾಪಿಸುವುದು ಇಲ್ಲಿ ಅಗತ್ಯ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ನಯನ ಸಭಾಂಗಣದಲ್ಲಿ ಏರ್ಪಡಿಸಿದ್ದ (೨೧-೩-೨೦೦೯) 'ಮನೆಯಂಗಳದಲ್ಲಿ ಮಾತುಕತೆ' ಕಾರ್ಯಕ್ರಮದಲ್ಲಿ ಅತಿಥಿಯಾಗಿ ಭಾಗವಹಿಸಿದ್ದ ನಾಡಿನ ಹೆಸರಾಂತ ವಕೀಲರೂ ರಾಜ್ಯ ಸಭಾ ಸದಸ್ಯರೂ ಆದ ಎಂ. ರಾಮಾಜೋಯಿಸರು ಮಾತನಾಡುತ್ತ ''ಇಂದು ಮನುಸ್ಮೃತಿ ಬೋಧನೆ ಅಗತ್ಯ'' ಎಂದು ಉವಾಚಿಸಿ ''ಭವಿಷ್ಯದಲ್ಲಿ ಸಚ್ಚಾರಿತ್ರ್ಯವುಳ್ಳ ಯುವಜನ ಸಮೂಹವನ್ನು ಸೃಷ್ಟಿಸಬೇಕಾದರೆ, ಮನುಸ್ಮೃತಿಯಲ್ಲಿ ಪ್ರತಿಪಾದಿಸಿರುವ ತ್ರಿವರ್ಗ ಸೂತ್ರವನ್ನು ಶಿಕ್ಷಣದ ಹಂತದಲ್ಲಿ ಮಕ್ಕಳಿಗೆ ಬೋಧಿಸಬೇಕು'' ಎಂದು ಸೂಚಿಸಿದ್ದಲ್ಲದೆ ''ಗಾಂಧಿಗೆ ಗುಂಡಿಕ್ಕಿದ್ದು ಒಬ್ಬ ಹುಚ್ಚ'' ಎಂದು ಹೇಳುವ ಮೂಲಕ ೬೦ ವರ್ಷಗಳ ತರುವಾಯ ಸಂಘಪರಿವಾರಕ್ಕೆ ಅಂಟಿದ ನೆತ್ತರಿನ ಕಲೆಯನ್ನು ತೊಳೆಯಲು ಇಂದಿಗೂ ವೃಥಾ ಹೆಣಗುತ್ತಿದ್ದಾರೆ ಈ ನಿವೃತ್ತ ನ್ಯಾಯಮೂರ್ತಿಗಳು. ಯಾವ ಮನುಸ್ಮೃತಿ ಜಾತಿಪದ್ಧತಿ, ವರ್ಣವ್ಯವಸ್ಥೆ, ಅಸ್ಪೃಶ್ಯತೆಗಳ ಆಚರಣೆಯಿಂದ ಭಾರತೀಯ ಸಮಾಜವನ್ನು ಛಿದ್ರಗೊಳಿಸಿತ್ತೋ, ಯಾವ ಮನುಸ್ಮೃತಿ ಮಹಿಳೆಯರ, ದಲಿತರ ಸ್ವತಂತ್ರ ಬಾಳ್ವೆಯ ಹಕ್ಕನ್ನು ಕಿತ್ತುಕೊಂಡಿತ್ತೋ, ಯಾವ ಮನುಸ್ಮೃತಿ ಪುರೋಹಿತಶಾಹಿಯ ಹಿತಾಸಕ್ತಿಯನ್ನು ಮಾತ್ರ ಕೈವಾರಿಸಿತ್ತೋ ಅಂಥ ಜೀವ ವಿರೋಧಿ, ಪ್ರಗತಿ ವಿರೋಧಿ ಗ್ರಂಥವನ್ನು ನಾರಾಯಣಗುರು, ಪೆರಿಯಾರ್, ಜ್ಯೋತಿಬಾ ಫುಲೆ, ಅಂಬೇಡ್ಕರ್, ಕವಿ ಕುವೆಂಪು ಮುಂತಾದ ವಿಚಾರವಂತ ಧೀಮಂತರು, ಇದು ಪ್ರತಿಗಾಮಿ ಎಂದೂ, ಜನತಂತ್ರ ವ್ಯವಸ್ಥೆಯಲ್ಲಿ ಅಪ್ರಸ್ತುತವೆಂದೂ ಘೋಷಿಸಿದರು. ಇಂದು ನಮಗೆ ಪರಮಪವಿತ್ರ ಗ್ರಂಥವೆಂದರೆ ನಮ್ಮ ಸಂವಿಧಾನವಲ್ಲದೆ ಬೇರೊಂದಿಲ್ಲ. ರಾಮಾಜೋಯಿಸರಂಥ ನ್ಯಾಯವಾದಿಗಳಿಗೆ ಇದು ತಿಳಿಯದ ವಿಚಾರವೇನೂ ಅಲ್ಲ. ಆದರೂ ಅವರೇಕೆ ''ಮನುಸ್ಮೃತಿ ಬೋಧನೆ ಅಗತ್ಯ'' ಎನ್ನುತ್ತಾರೆ? ಆದರೆ ಇದೇನು ಯಾರಿಗೂ ತಿಳಿಯದ ವಿಚಾರವಲ್ಲ. ರಾಜಕಾರಣದಲ್ಲಿ ಧರ್ಮವನ್ನು ಬೆರೆಸಿ ಮಾತಾಡುವ ಜೋಯಿಸರಂಥ ಮಂದಿಯ ಒಂದಂಶದ ಅಜೆಂಡಾ ಎಂದರೆ ಸಂಘಪರಿವಾರದ ಸಿದ್ಧಾಂತಗಳನ್ನು ಜಾರಿಗೆ ತರುವುದು, ಭಾರತವನ್ನು ಹಿಂದೂರಾಷ್ಟ್ರವನ್ನಾಗಿ ಘೋಷಿಸಿಬಿಡುವುದು, ಅಷ್ಟೆ. ಅಲ್ಲಿಗೆ ಅಲ್ಪಸಂಖ್ಯಾತರ, ದಲಿತರ, ಮಹಿಳೆಯರ ಕಥೆ ಮುಗಿಯಿತು. ಇವರಿಗೆ ಅವಕಾಶ ಸಿಕ್ಕರೆ, ಪಾರ್ಲಿಮೆಂಟ್ ಅಂಗಳದಲ್ಲಿಯೂ ಕೂಡ ''ಮನುಸ್ಮೃತಿ ಬೋಧನೆ ಅಗತ್ಯ'' ಎಂದು ಪ್ರತಿಪಾದಿಸಿ ಕಾಯಿದೆ ಜಾರಿಗೆ ತಂದುಬಿಡುತ್ತಾರೆ. ಆದ್ದರಿಂದ ಜನತೆ ಇಂತಹವರ ಹುನ್ನಾರವನ್ನು ಅರಿತಿರಬೇಕು. ಹೀಗಿರುವಾಗ ರಾಮಾ ಜೋಯಿಸರ ಮನೆಯಂಗಳದಲ್ಲಿ ಮಾತುಕತೆಗೆ ತದ್ವಿರುದ್ಧ ಜೀವ ಕೇಂದ್ರಿತ ಮೌಲ್ಯವುಳ್ಳ ಕಾರ್ಯಕ್ರಮವೊಂದು ಇದೇ ಮುಂದಿನ ದಿನ (೨೨-೩-೨೦೦೯) ಸೆಂಟ್ರಲ್ ಕಾಲೇಜಿನ ಸೆನೆಟ್ ಸಭಾಂಗಣದಲ್ಲಿ ನಡೆಯಿತು. ಎಂ. ಎಸ್. ಕೃಷ್ಣನ್ ಸ್ಮರಣಸಂಸ್ಥೆಯು ೯೦ ವರ್ಷದ ಇಳಿವಯಸ್ಸಿನ ಚಿಂತಕ, ಕರುನಾಡಿನಲ್ಲಿ ಕೆಂಬಾವುಟ ಹಾರಿಸಿ ಸಾಮ್ಯವಾದದ ಪ್ರವರ್ತಕರಲ್ಲಿ ಒಬ್ಬರಾದ ಬಿ. ವಿ. ಕಕ್ಕಿಲ್ಲಾಯ ಅವರಿಗೆ 'ನಿರಂತರ' ಎಂಬ ಸಂಭಾವನಾ ಗ್ರಂಥ ಸಮರ್ಪಣೆ ಹಾಗೂ ಅಭಿನಂದನಾ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಅದಕ್ಕೆ ಕೃತಜ್ಞತೆ ವ್ಯಕ್ತಪಡಿಸುತ್ತ ಕಕ್ಕಿಲ್ಲಾಯರು ''ಕೋಮುವಾದಿಗಳಿಂದ ಹಿಂದೂ ಧರ್ಮದ ಪಾಠ ನಮಗೆ ಬೇಕಿಲ್ಲ. ಸೌಹಾರ್ದ ಮತ್ತು ಸಹಬಾಳ್ವೆ ನಮಗೆ ಗೊತ್ತು. ನಾವು ಹಾಗೇ ಬಾಳುತ್ತೇವೆ. ನಮಗೆ ಪ್ರೀತಿ-ವಿಶ್ವಾಸ ಬೇಕು. ದ್ವೇಷ-ಅಸೂಯೆ ಅಲ್ಲ. ಶಾಂತಿ ಮತ್ತು ನೆಮ್ಮದಿ ಬೇಕೇ ಹೊರತು ಭಯದ ವಾತಾವರಣ ಅಲ್ಲ. ನಾವೆಲ್ಲರೂ ಒಂದಾಗಿ ಬಾಳಿ ಕೋಮುವಾದಿಗಳಿಗೆ ದಿಟ್ಟ ಉತ್ತರ ಕೊಡೋಣ'' (ಪ್ರಜಾವಾಣಿ, ೨೩-೩-೨೦೦೯) ಎಂದು ಒಂದು ಗಂಟೆಗೂ ಹೆಚ್ಚುಕಾಲ ಭಾವಪರವಶರಾಗಿ ಮಾತನಾಡಿದರು. ಕಕ್ಕಿಲ್ಲಾಯರ ಅಭಿಮಾನಿಗಳೂ ಹಾಗೂ ಅವರ ಕಾಲದ ಅನೇಕ ವೃದ್ಧ ಸಂಗಾತಿಗಳೂ ನೆರೆದಿದ್ದ ಆ ಸಭಾಂಗಣದಲ್ಲಿ ಎಲ್ಲರೂ ಮಂತ್ರಮುಗ್ಧರಾದರೆಂಬಂತೆ ಆಲಿಸುತ್ತಿದ್ದರು. ಯಾಕೆಂದರೆ ಅವರ ಮಾತು ಸಕಾಲಿಕವೂ ಸಾರ್ವಕಾಲಿಕವೂ ಆಗಿತ್ತು.

ಪ್ರಸ್ತುತ ಕರಾವಳಿಯ ಸಂಘಪರಿವಾರದ ಕೇಸರಿ ಪಡೆ ಕಡಲ ತೀರದಲ್ಲಿ ಅಪ್ರತಿಮ ಕಲಾವಿದ ಚಾರ್ಲಿ ಚಾಪ್ಲಿನ್ ಪ್ರತಿಮೆ ಸ್ಥಾಪನೆಗೆ ವಿರೋಧ ವ್ಯಕ್ತಪಡಿಸುತ್ತಿದೆ. ಚಾಪ್ಲಿನ್ ಮಹಾತ್ಮ ಗಾಂಧಿ ಆರಾಧಕನಾಗಿದ್ದ; ಚಾಪ್ಲಿನ್ ನಾಜಿ ನಾಯಕ ಹಿಟ್ಲರನನ್ನು ಲೇವಡಿ ಮಾಡುತ್ತಿದ್ದ; ಚಾಪ್ಲಿನ್ ಕಮ್ಯುನಿಸ್ಟ್ ಆಗಿದ್ದ; ಮೇಲಾಗಿ ಅವನೊಬ್ಬ ಕ್ರೈಸ್ತ ಎಂಬುದು ಅವರ ವಿರೋಧಕ್ಕೆ ಮುಖ್ಯ ಕಾರಣಗಳು. ಹೀಗೆ ಪಶ್ಚಿಮ ಕಡಲತೀರವು ಕೇಸರಿ ಪಡೆಯ ಆಡುಂಬೊಲವಾಗಿದೆ ಇಂದು. ಇಲ್ಲಿ ಮೂಲಭೂತವಾದಿಗಳ ಉಪಟಳ ಎಲ್ಲೆ ಮೀರಿದೆ. ಒಬ್ಬ ಮುಸ್ಲಿಂ ಹುಡುಗಿಯನ್ನು ಒಬ್ಬ ಹಿಂದು ಹುಡುಗ ಅಥವಾ ಹಿಂದು ಹುಡುಗಿಯನ್ನು ಒಬ್ಬ ಮುಸ್ಲಿಂ ಹುಡುಗ ಮಾತನಾಡಲು ಆಗದಂತಹ ಆತಂಕದ ವಾತಾವರಣ ಅಲ್ಲಿದೆ. ಆದರೆ ಜಾತಿ-ಧರ್ಮದ ಹೆಸರಿನಲ್ಲಿ ವಿಷಬೀಜ ಬಿತ್ತುತ್ತಿರುವ ಸಂಘಪರಿವಾರದ ಜನರಿಗೆ ನಮ್ಮ ಜನರೇ ಒಗ್ಗಟ್ಟಿನಿಂದ ಬಾಳ್ವೆ ನಡೆಸುವ ಮೂಲಕ ಸೌಹಾರ್ದ ವಾತಾವರಣವನ್ನು ನಿರ್ಮಾಣ ಮಾಡಬೇಕಿದೆ ಎಂದು ಕಕ್ಕಿಲ್ಲಾಯರು ಎದೆ ತುಂಬಿ ಪ್ರತಿಪಾದಿಸಿದ ಮಾತುಗಳು ಸಂದರ್ಭೋಚಿತವಾಗಿವೆ.

ಕಕ್ಕಿಲ್ಲಾಯರ ಜೀವನ ವೃತ್ತಾಂತ ಇಂದಿನ ಯುವ ಪೀಳಿಗೆಗೆ ಬೆರಗುಪಡಿಸುವಂತಿದೆ. ಈಗಲೂ ಮನುವಾದವನ್ನು ಬಿತ್ತುವ ಮೂಲಭೂತವಾದಿಗಳಿಗೆ ಕಕ್ಕಿಲ್ಲಾಯರಂಥ ಜನ ಬಿತ್ತುವ ಸಾಮ್ಯವಾದ ಸವಾಲಾಗಿದೆ. ಆದ್ದರಿಂದ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ತೊಡಗಿಕೊಳ್ಳುವ ಯುವ ಜನಾಂಗಕ್ಕೆ ಕಕ್ಕಿಲ್ಲಾಯರ ಬದುಕು ಮತ್ತು ಬರಹ ಬತ್ತದ ಚಿಲುಮೆಯಂತಿದೆ. ವಿದ್ಯಾರ್ಥಿದೆಸೆಯಲ್ಲಿಯೆ ಸ್ವಾತಂತ್ರ್ಯ ಚಳವಳಿಗೆ ಧುಮುಕಿ ರಾಜಕೀಯ ಜೀವನವನ್ನು ಆರಂಭಿಸಿದ ಕಕ್ಕಿಲ್ಲಾಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾರ್ಮಿಕ ಸಂಘಟನೆಗಳನ್ನೂ ಕಮ್ಯುನಿಸ್ಟ್ ಚಳುವಳಿಯನ್ನೂ ಕಟ್ಟಿದ ಆದ್ಯ ಪ್ರವರ್ತಕರಲ್ಲಿ ಒಬ್ಬರು; ಅವರದು ಸರಳ ಜೀವನ, ಉನ್ನತ ಚಿಂತನೆ.

ಒಂದು ಶ್ರೀಮಂತ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದರೂ ಕಕ್ಕಿಲ್ಲಾಯರು ಕಮ್ಯುನಿಸ್ಟ್ ಚಳುವಳಿಗೆ ಸೇರಿ ಹೋರಾಟಗಾರರಾಗಿ, ಜನಪರ[illegible] ನಡೆದು ಬಂದದ್ದು ಒಂದು ಮಹಾಗಾಥೆ. [illegible]

(ಮುಂದುವರಿಯುವುದು)

**ಪ್ರೊ॥ ಶಿವರಾಮಯ್ಯ**

# ಗ್ರಾಹಕರ ಆಂದೋಲನದ ಮೈಲುಗಲ್ಲುಗಳು

ಗ್ರಾಹಕವಾದವು ಪ್ರಸಕ್ತ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿರುವ ಆರ್ಥಿಕ ಸುಧಾರಣೆಗಳ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆ ಸಂಘಟನೆಗಳ ನಡುವೆ ನಡೆದ ಒಪ್ಪಂದಗಳ ಫಲಶ್ರುತಿಯಾಗಿದೆ. ಇತ್ತೀಚಿನ ದಿವಸಗಳಲ್ಲಿ ಮಾರುವವರ ಮಾರುಕಟ್ಟೆಯಿಂದ ಕೊಳ್ಳುವವರ ಮಾರುಕಟ್ಟೆಯೆಡೆಗೆ ನಡೆಯುತ್ತಿರುವ ಸ್ಥಿತ್ಯಂತರ ಕೊಳ್ಳುವವರ ಆಯ್ಕೆ ಮತ್ತು ಹಿತಾಸಕ್ತಿಯನ್ನು ಅವಲಂಬಿಸಿರುತ್ತದೆ. ಇದು ಸಾಧ್ಯವಾಗುವುದು ಗ್ರಾಹಕರಿಗೆ ಅರಿವು ಮೂಡಿದಾಗ ಮಾತ್ರ.

ಗ್ರಾಹಕವಾದವೆಂದರೆ ಗ್ರಾಹಕರ ಹಿತರಕ್ಷಣಾ ಕಾಯ್ದೆಯು (೧೯೮೬) ಗ್ರಾಹಕರಿಗೆ ನೀಡಿರುವ ಹಕ್ಕುಗಳನ್ನು ಪ್ರತಿಪಾದಿಸುವ ಪ್ರಕ್ರಿಯೆಯಾಗಿದೆ. ಮುಂದುವರೆದು, ಅದು ತಾನು ಹಣ ಕೊಟ್ಟು ಪಡೆದುಕೊಳ್ಳುವ ವಸ್ತುಗಳು ಮತ್ತು ಸೇವೆಗಳ ಗುಣಮಟ್ಟ ಮತ್ತು ಸುರಕ್ಷತೆಯನ್ನು ಖಾತರಿಪಡಿಸಿಕೊಳ್ಳುವುದಾಗಿದೆ. ಗ್ರಾಹಕ ತಾನು ಹಣಕೊಟ್ಟು ಪಡೆಯುವ ವಸ್ತುಗಳು ಮತ್ತು ಸೇವೆಗಳು ಸಮರ್ಪಕವಾಗಿರುವ ಬಗ್ಗೆ, ನ್ಯೂನತೆ ಮತ್ತು ದೋಷಗಳಿಂದ ಕೂಡಿದ ವಸ್ತುಗಳು ಮತ್ತು ಸೇವೆಗಳಿಗಾಗಿ ಪರಿಹಾರೋಪಾಯ ಪಡೆದುಕೊಳ್ಳುವ ಬಗ್ಗೆ ಮತ್ತು ಹಣಕ್ಕೆ ಸರಿಸಮನಾದ ವಸ್ತು ಮತ್ತು ಸೇವೆಗಳನ್ನು ಪಡೆದುಕೊಳ್ಳಲು ಬಳಸುವ ಹಕ್ಕೊತ್ತಾಯವೇ ಗ್ರಾಹಕವಾದ. ಹಕ್ಕುಗಳ ಒತ್ತಾಯ ಗ್ರಾಹಕ ಹೊಂದಿರುವ ಅರಿವನ್ನು ಆಧರಿಸಿರುತ್ತದೆ. ಅಂತಹ ಅರಿವು ಪಡೆಯಲು ಶಿಕ್ಷಣ ಅವಶ್ಯಕ. ಅಂದರೆ, ಗ್ರಾಹಕವಾದವು ಸೂಕ್ತ ಹಣಕ್ಕಾಗಿ ಸೂಕ್ತ ವಸ್ತುಗಳನ್ನು ಮತ್ತು ಸೇವೆಗಳನ್ನು ಪಡೆಯಲು ಬಳಸುವ ಹಕ್ಕೊತ್ತಾಯವಾಗಿದೆ. ಇದು ಸಾಧ್ಯವಾಗುವುದು ಗ್ರಾಹಕ ಶಿಕ್ಷಣದಿಂದ ಮಾತ್ರ. ಒಟ್ಟಾರೆ ಗ್ರಾಹಕವಾದವು ಒಂದೆಡೆ ಗ್ರಾಹಕರ ಹಕ್ಕುಗಳ ಪ್ರತಿಷ್ಠಾಪನೆಗೆ ಒತ್ತು ನೀಡಿದರೆ ಇನ್ನೊಂದೆಡೆ ಗ್ರಾಹಕರಲ್ಲಿ ಗ್ರಾಹಕವಾದದ ಬಗ್ಗೆ ಮತ್ತು ಗ್ರಾಹಕರ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಶಿಕ್ಷಣವನ್ನು ನೀಡುವುದರ ಮೂಲಕ ಅರಿವು ಮೂಡಿಸುತ್ತದೆ.

ಭಾರತವು ರಾಷ್ಟ್ರೀಯ ಗ್ರಾಹಕ ದಿನಾಚರಣೆಯನ್ನು ಮಾರ್ಚ್ ೧೫ರಂದು ಆಚರಿಸುತ್ತದೆ. ೧೯೮೯ರಿಂದ ಇದು ಜಾರಿಗೆ ಬಂದಿದ್ದು, ಈ ಐತಿಹಾಸಿಕ ದಿನದಂದು ೧೯೬೨ರಲ್ಲಿ ಗ್ರಾಹಕರ ಹಕ್ಕುಗಳ ಕುರಿತು ಅಮೆರಿಕೆಯ ಕಾಂಗ್ರೆಸ್‌ನಲ್ಲಿ ಮಸೂದೆಯನ್ನು ಮಂಡಿಸಲಾಯಿತು. ಅಂದಿನ ಸಂದರ್ಭದಲ್ಲಿ ಅಧ್ಯಕ್ಷ ಜಾನ್ ಎಫ್. ಕೆನಡಿಯವರು ಮಾತನಾಡುತ್ತಾ ''ಗ್ರಾಹಕ ಕೀಳು

## ಸದಾಶಿವ ಮರ್ಜಿ

ದರ್ಜೆಯ ಉತ್ಪನ್ನಗಳನ್ನು ಪಡೆಯುವಂತಾದರೆ, ಅವುಗಳ ಬೆಲೆಗಳು ಅತ್ಯಧಿಕವಾಗಿದ್ದರೆ, ಔಷಧಗಳು ಅಸುರಕ್ಷಿತ ಮತ್ತು ಗುಣಹೀನವಾಗಿದ್ದರೆ, ಸೂಕ್ತ ಮಾಹಿತಿಯ ಆಧಾರದ ಮೇಲೆ ವಸ್ತು ಮತ್ತು ಸೇವೆಗಳನ್ನು ಆಯ್ಕೆ ಮಾಡಿಕೊಳ್ಳಲು ಅಸಮರ್ಥನಾದರೆ, ಆಗ ಆತನ ಡಾಲರ್ ಹಾಳಾದಂತೆ, ಆತನ ಆರೋಗ್ಯ ಮತ್ತು ಸುರಕ್ಷತೆ ಅಪಾಯಕ್ಕೆ ಸಿಲುಕಿದಂತೆ ಆಗುತ್ತದೆ ಮತ್ತು ರಾಷ್ಟ್ರೀಯ ಹಿತಾಸಕ್ತಿ ಕುಂಠಿತಗೊಳ್ಳುತ್ತದೆ'' ಎಂದು ಅಭಿಪ್ರಾಯಪಟ್ಟಿದ್ದಾರೆ.

ಜಾನ್ ಎಫ್. ಕೆನಡಿಯವರು ಸಾಮಾನ್ಯ ಮನುಷ್ಯರ ಗ್ರಾಹಕ ಹಕ್ಕುಗಳನ್ನು ರಾಷ್ಟ್ರೀಯ ಹಿತಾಸಕ್ತಿಗೆ ಹೋಲಿಸಿದ್ದಾರೆ. ಅವರು ನಾಲ್ಕು ಮೂಲಭೂತಹಕ್ಕುಗಳನ್ನು ಗ್ರಾಹಕರಿಗಾಗಿ ಪ್ರತಿಪಾದಿಸಿದ್ದಾರೆ. ಅವುಗಳೆಂದರೆ :

೧. ಸುರಕ್ಷತೆಯ ಹಕ್ಕು : ಆರೋಗ್ಯ ಮತ್ತು ಜೀವಕ್ಕೆ ಅಪಾಯಕಾರಿಯಾದ ವಸ್ತುಗಳನ್ನು ಮಾರಾಟ ಮಾಡುವುದರ ವಿರುದ್ಧ ಸುರಕ್ಷತೆಗಾಗಿ ಪ್ರತಿಪಾದಿಸುವ ಹಕ್ಕು.

೨. ಆಯ್ಕೆ ಮಾಡಿಕೊಳ್ಳುವ ಹಕ್ಕು : ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕ ಬೆಲೆಗಳಲ್ಲಿ ದೊರೆಯುವ ವಿವಿಧ ಬಗೆಯ ಉತ್ಪಾದನೆಗಳು ಮತ್ತು ಸೇವೆಗಳನ್ನು ಪಡೆಯುವ ಬಗ್ಗೆ ಭರವಸೆ ಹೊಂದುವ ಮತ್ತು ನ್ಯಾಯಯುತ ಬೆಲೆ ಮತ್ತು ತೃಪ್ತಿದಾಯಕ ವಸ್ತುಗಳು ಮತ್ತು ಸೇವೆಗಳನ್ನು ಪಡೆಯಲು ಆಯ್ಕೆ ಮಾಡಿಕೊಳ್ಳುವ ಹಕ್ಕು.

೩. ಮಾಹಿತಿ ಹಕ್ಕು : ಮೋಸ, ವಂಚನೆ ಮತ್ತು ಕಪಟಗಳಿಂದ ತಪ್ಪುದಾರಿಗೆಳೆಯುವ ಜಾಹೀರಾತು ಪ್ರಕಟಣೆಗಳು ಹಾಗೂ ಇತರೆ ಮಾಧ್ಯಮಗಳ ವಿರುದ್ಧ ಸೂಕ್ತ ರಕ್ಷಣೆಯನ್ನು ಪಡೆಯುವ ಹಕ್ಕು. ತಾನು ಪಡೆಯುವ ವಸ್ತು ಮತ್ತು ಸೇವೆಗಳ ಬಗ್ಗೆ ಸೂಕ್ತ ಮಾಹಿತಿಯನ್ನು ಪಡೆದು ಆಯ್ಕೆ ಮಾಡಿಕೊಳ್ಳುವ ಹಕ್ಕೊತ್ತಾಯ.

೪. ಅಹವಾಲು ಸಲ್ಲಿಸುವ ಹಕ್ಕು : ಗ್ರಾಹಕರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಸೂಕ್ತವಾದ ಧೋರಣೆಯನ್ನು ಮತ್ತು ಯೋಜನೆಯನ್ನು ಸರಕಾರ ರೂಪಿಸಿ, ನಾಗರಿಕ ಸೇವಾ ಸೌಲಭ್ಯಗಳು ಮತ್ತು ಗ್ರಾಹಕರಿಗೆ ತಮ್ಮ ಅಹವಾಲುಗಳನ್ನು ಸಲ್ಲಿಸಲು ಸೂಕ್ತ ವೇದಿಕೆ ಒದಗಿಸಿ ಮತ್ತು ಆ ಅಹವಾಲುಗಳ ಮೂಲಕ ಸೂಕ್ತ ಪರಿಹಾರೋಪಾಯ ಪಡೆಯಲು ಅವಕಾಶ ನೀಡುವ ಭರವಸೆಯ ಹಕ್ಕು.

ದಿ ಕನ್ಸ್ಯೂಮರ್ಸ್ ಇಂಟರ್‌ನ್ಯಾಷನಲ್ (ಸಿ.ಐ.) ಸಂಸ್ಥೆಯು ನೂರಕ್ಕೂ ಅಧಿಕ ರಾಷ್ಟ್ರಗಳಲ್ಲಿಯ ೨೪೦ ಗ್ರಾಹಕ ಸಂಘಟನೆಗಳಲ್ಲಿ ಗ್ರಾಹಕರ ೮ ಹಕ್ಕುಗಳನ್ನು ಗುರುತಿಸಿದೆ. ಅವುಗಳೆಂದರೆ (೧) ಮೂಲಭೂತ ಅವಶ್ಯಕತೆಗಳು, (೨) ಸುರಕ್ಷಿತತೆ, (೩) ಮಾಹಿತಿ, (೪) ಆಯ್ಕೆ, (೫) ಪ್ರಾತಿನಿಧ್ಯ, (೬) ಪರಿಹಾರೋಪಾಯಗಳು, (೭) ಗ್ರಾಹಕರ ಶಿಕ್ಷಣ, ಮತ್ತು(೮) ಆರೋಗ್ಯಕರ ಪರಿಸರ.



ವ್ಯಾಪಾರಸ್ಥರು, ಉತ್ಪಾದಕರು, ಸೇವಾಸಂಸ್ಥೆಗಳು ಮತ್ತು ಇತರ ವಾಣಿಜ್ಯ ವಹಿವಾಟುಗಳನ್ನು ನಡೆಸುವ ಸಂಸ್ಥೆಗಳಿಂದಾಗುವ ಶೋಷಣೆಯನ್ನು ನಿರ್ಬಂಧಿಸಲು ಮತ್ತು ಸೂಕ್ತ ಪರಿಹಾರೋಪಾಯಗಳನ್ನು ಗ್ರಾಹಕರಿಗೆ ಒದಗಿಸಲು ಗ್ರಾಹಕರ ಹಿತರಕ್ಷಣಾ ಕಾಯ್ದೆ (1986)ಯ ಮೂಲಕ ಅವಕಾಶ ಕಲ್ಪಿಸಿರುವುದು ಗ್ರಾಹಕರಿಗೆ ಸರಕಾರ ನೀಡುವ ಭದ್ರತೆ ಮತ್ತು ಸುರಕ್ಷಿತತೆಯು ಕ್ರಾಂತಿಕಾರಿಯಾದ ಬೆಳವಣಿಗೆಯಾಗಿವೆ. ಸದರಿ ಕಾಯ್ದೆಯಲ್ಲಿ ವಾಣಿಜ್ಯ ವಹಿವಾಟುಗಳನ್ನು ನಡೆಸುವ ವ್ಯಕ್ತಿಗಳು, ಸೇವಾಸಂಸ್ಥೆಗಳು ತಮ್ಮ ನಿಗದಿತ ಆದಾಯದ ಸ್ವಲ್ಪ ಭಾಗವನ್ನು ಗ್ರಾಹಕರ ಸೇವಾ ಸೌಲಭ್ಯಗಳು ಮತ್ತು ಪರಿಹಾರಗಳಿಗಾಗಿ ವ್ಯಯಿಸಲು ಅವಕಾಶ ಕಲ್ಪಿಸಿರುವುದು ಸ್ವಾಗತಾರ್ಹವಾದ ಬೆಳವಣಿಗೆಯಾಗಿದೆ.



ದಿ ಕನ್ಸ್ಯೂಮರ್ಸ್ ಇಂಟರ್‌ನ್ಯಾಷನಲ್ ಸಂಸ್ಥೆಯು ಹೊರಡಿಸಿದ ಸನ್ನದಿನಲ್ಲಿನ ಗ್ರಾಹಕರ ಈ ಎಂಟು ಹಕ್ಕುಗಳು ವಿಶ್ವದ ಬಡ ಮತ್ತು ಅಸಂಘಟಿತ ಗ್ರಾಹಕರ ಆಶೋತ್ತರಗಳನ್ನು ಪ್ರತಿನಿಧಿಸುತ್ತವೆ. ಈ ಮೇಲಿನ ಗ್ರಾಹಕರ ಹಕ್ಕುಗಳನ್ನು ವಿಶ್ವಸಂಸ್ಥೆ ೧೯೮೫ರಲ್ಲಿ ಮಾನ್ಯ ಮಾಡಿದುದು ಐತಿಹಾಸಿಕ.

ಸ್ವಾತಂತ್ರ್ಯಾನಂತರ ಭಾರತದಲ್ಲಿ ಔದ್ಯೋಗಿಕ ಕ್ಷೇತ್ರದಲ್ಲಿ ಉಂಟಾದ ಬೆಳವಣಿಗೆ ಮತ್ತು ಔದ್ಯೋಗಿಕೀಕರಣಗಳಿಂದಾಗಿ, ಗ್ರಾಹಕರ ಮೇಲೆ ಅಗಾಧ ಪರಿಣಾಮ ಬೀರುವಂತಹ ಔದ್ಯೋಗಿಕ ಧೋರಣೆಗಳಿಂದಾಗಿ ಸಾಮಾನ್ಯರು ಸಂಕಷ್ಟಕ್ಕೆ ಈಡಾಗುವಂತಾಯಿತು.

ಆಹಾರದ ಕಲಬೆರಕೆ, ದೋಷಪೂರಿತ ತೂಕ ಮತ್ತು ಅಳತೆಗಳು, ಹಾನಿಕಾರಕ ಔಷಧಗಳು, ಅನಿಯಂತ್ರಿತ ಮಾರುಕಟ್ಟೆ ಬೆಲೆಗಳು, ಅಸಮರ್ಪಕ ಮಾರುಕಟ್ಟೆ ಮತ್ತು ಅಗತ್ಯವಸ್ತುಗಳ ಕಳಪೆ ಗುಣಮಟ್ಟ, ಕಾಳಸಂತೆ ಮಾರಾಟಗಾರರು ಹೆಚ್ಚು ಲಾಭ ಗಳಿಸಲು ಹೂಡುವ ಕಾರ್ಯತಂತ್ರಗಳು, ಗುಣಮಟ್ಟವಿಲ್ಲದ ಉತ್ಪಾದನೆಗಳು, ಬೋಗಸ್ ಗ್ಯಾರಂಟಿಗಳು ಮತ್ತು ಸಾರ್ವಜನಿಕ ಉದ್ಯಮದಲ್ಲಿರುವ ದೂರವಾಣಿ, ನೀರು ಸರಬರಾಜು ಮತ್ತು ಒಳ ಚರಂಡಿ, ರೈಲ್ವೆ ಸೇವೆಗಳು, ವಿದ್ಯುಚ್ಛಕ್ತಿ ಮುಂತಾದವುಗಳ ಅಸಮರ್ಪಕ ಸೇವೆಗಳಿಂದಾಗಿ ದೇಶದ ಬಹುತೇಕ ಗ್ರಾಹಕರು ತೀವ್ರ ತೊಂದರೆಗೆ ಒಳಗಾಗುವಂತಹ ಪರಿಸ್ಥಿತಿ ಇತ್ತು.

ಇಂತಹ ಪರಿಸ್ಥಿತಿಯಲ್ಲಿ ಅರವತ್ತರ ದಶಕದಲ್ಲಿ ಉತ್ತಮ ಉತ್ಪಾದನೆಗಳು ಮತ್ತು ಸಮರ್ಪಕ ಸೇವೆಗಳನ್ನು ಒದಗಿಸಬೇಕೆಂಬ ಚಳುವಳಿ ಪ್ರಾರಂಭವಾಯಿತು. ನಗರ ಪ್ರದೇಶಗಳಿಗೆ ಸೀಮಿತಗೊಂಡಂತೆ, ಗ್ರಾಹಕರ ಹಕ್ಕುಗಳ ಕುರಿತು ಸಾಕಷ್ಟು ವಿಷಯಗಳ ಬಗ್ಗೆ ಬೆಳಕು ಚೆಲ್ಲುವಂತಹ ಪ್ರಯತ್ನಗಳನ್ನು ಮಾಡುವಂತಾಯಿತು. ದಿ ಇಂಟರ್‌ನ್ಯಾಷನಲ್ ಆರ್ಗನೈಜೇಷನ್ ಆಫ್ ಕನ್ಸ್ಯೂಮರ್ಸ್ ಯೂನಿಯನ್ ಅನ್ನು (ಐ.ಓ.ಸಿ.ಯು) ೧೯೬೦ರಲ್ಲಿ ಪ್ರಾರಂಭಿಸಲಾಯಿತು. ನೆದರ್‌ಲ್ಯಾಂಡಿನ ಹೇಗ್‌ನಲ್ಲಿ ಪ್ರಾರಂಭವಾದ ಐ.ಓ.ಸಿ.ಯು ನಂತರ ದಿ ಕನ್ಸ್ಯೂಮರ್ಸ್ ಇಂಟರ್‌ನ್ಯಾಷನಲ್ ಆಗಿ ಪರಿವರ್ತನೆ ಹೊಂದಿತ್ತು. ಈಗ ಈ ಸಂಸ್ಥೆಯು ಲಂಡನ್ನಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ವಿಶ್ವದ ಗ್ರಾಹಕರ ಹಕ್ಕುಗಳ ಪ್ರತಿಪಾದನೆ ಮತ್ತು ಗ್ರಾಹಕರ/ಬಳಕೆದಾರರ ಹಿತವನ್ನು ರಕ್ಷಿಸುವ ದೃಷ್ಟಿಯಿಂದ ಈ ಸಂಸ್ಥೆಯು ಪ್ರತಿ ಮೂರು ವರ್ಷಗಳಿಗೊಮ್ಮೆ ವಿಶ್ವಗ್ರಾಹಕ ಕಾಂಗ್ರೆಸ್ ಅನ್ನು ಸಂಘಟಿಸುತ್ತದೆ.

೧೯೬೬ರಲ್ಲಿ ಮುಂಬಯಿಯಲ್ಲಿ ದಿ ಕೌನ್ಸಿಲ್ ಫಾರ್ ಫೇರ್ ಬಿಜಿನೆಸ್ ಪ್ರಾಕ್ಟೀಸಸ್ ಸಂಸ್ಥೆಯನ್ನು ಪ್ರಾರಂಭಿಸಲಾಯಿತು. ನಂತರದಲ್ಲಿ ಕರ್ನಾಟಕ, ಆಂಧ್ರ ಪ್ರದೇಶ, ತಮಿಳುನಾಡು, ಗುಜರಾತ್, ರಾಜಸ್ಥಾನ ಮತ್ತು ದೆಹಲಿ ರಾಜ್ಯಗಳಲ್ಲಿ ಗ್ರಾಹಕರ ಸಂಘಟನೆಗಳು ಪ್ರಾರಂಭವಾದವು. ೧೯೬೯ರಲ್ಲಿ ಎಂ.ಆರ್.ಟಿ.ಪಿ. ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಅದರನ್ವಯ ದಿ ಮನಾಪಲಿಸ್ ಆ್ಯಂಡ್ ರೆಸ್ಟ್ರಿಕ್ಟಿವ್ ಟ್ರೇಡ್ ಪ್ರಾಕ್ಟೀಸಸ್ ಕಮಿಷನ್ ಎಂಬ ಸಂಸ್ಥೆಯನ್ನು ಹುಟ್ಟುಹಾಕಲಾಯಿತು. ಈ ಸಂದರ್ಭದಲ್ಲಿ ಮಧ್ಯಂತರ ಪರಿಹಾರಗಳನ್ನು ನೀಡಲು ಈ ಸಂಸ್ಥೆಗೆ ಅಧಿಕಾರ ನೀಡಲಾಯಿತು. ಉತ್ಪಾದಕ ಘಟಕಗಳ ನಡುವಿನ ಸ್ಪರ್ಧೆಗಳನ್ನು ತಡೆಗಟ್ಟಲು, ಉತ್ಪಾದನೆಗಳ ಬಗ್ಗೆ ತಪ್ಪು ಹಾಗೂ ಸುಳ್ಳು ಜಾಹಿರಾತುಗಳನ್ನು ನೀಡಿ ಗ್ರಾಹಕರಿಗೆ ಮೋಸ ಮಾಡುವ ಕೃತ್ಯಗಳಿಂದ ಕೂಡಿದ ವ್ಯಾಪಾರ ಪದ್ಧತಿಗಳ ವಿರುದ್ಧ ಕಮಿಷನ್‌ಗೆ ದಂಡ ವಿಧಿಸುವ ಅವಕಾಶವನ್ನು ಕಲ್ಪಿಸಲಾಗಿತ್ತು.

೭೦ರ ದಶಕದಲ್ಲಿ ಗ್ರಾಹಕರ ಸಂಘಟನೆಗಳು ಗ್ರಾಹಕರ ಹಿತರಕ್ಷಣೆಗಾಗಿ ವಿವಿಧ ಮಾಧ್ಯಮಗಳಲ್ಲಿ ಲೇಖನಗಳನ್ನು ಪ್ರಕಟಪಡಿಸುವುದೇ ಅಲ್ಲದೆ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದವು. ಗ್ರಾಹಕರ ಹಕ್ಕುಗಳನ್ನು ಸಂರಕ್ಷಿಸಲು ಗ್ರಾಹಕರ ಧೋರಣೆಗಳು ಮತ್ತು ಕಾಯ್ದೆಗಳನ್ನು ಜಾರಿಗೊಳಿಸಲು ಸರ್ಕಾರದ ಮೇಲೆ ಈ ಸಂಘಟನೆಗಳು ಒತ್ತಡ ತರುತ್ತಿದ್ದವು. ಮುಂಬಯಿಯಲ್ಲಿ ಗ್ರಾಹಕರ ಹಿತರಕ್ಷಣೆಗಾಗಿ ಹೋರಾಡುತ್ತಿದ್ದ ಮೃಣಾಲ್ ಗೋರೆಯವರು ಜಾಥಾ, ವಸ್ತುಪ್ರದರ್ಶನ ಮತ್ತು ಪಿಕೆಟಿಂಗ್‌ಗಳನ್ನು ಆಯೋಜಿಸಿ ಗ್ರಾಹಕರ ಮತ್ತು ಸರಕಾರದ ಗಮನ ಸೆಳೆಯುತ್ತಿದ್ದರು.

ಇದೇ ಸಂದರ್ಭದಲ್ಲಿ ಪೂನಾದಲ್ಲಿ ಅಖಿಲ ಭಾರತೀಯ ಗ್ರಾಹಕ ಪಂಚಾಯತ್ ಅನ್ನು ಪ್ರಾರಂಭಿಸಲಾಯಿತು. ಈ ಸಂಸ್ಥೆಯು ಗೃಹೋಪಯೋಗಿ ವಸ್ತುಗಳನ್ನು ಸಗಟು ದರಗಳಲ್ಲಿ ಖರೀದಿಸಿ ಅವುಗಳನ್ನು ತನ್ನ ಗ್ರಾಹಕರ ಕುಟುಂಬಗಳಿಗೆ ಒದಗಿಸುವ ಉದ್ದೇಶವನ್ನು ಹೊಂದಿತ್ತು. ಇದರಿಂದಾಗಿ ಮಧ್ಯವರ್ತಿಗಳಿಂದಾಗುವ ನಿರಂತರ ಶೋಷಣೆಯನ್ನು ನಿವಾರಿಸಲು ಸಾಧ್ಯವಾಯಿತು. ಈ ಸಂಘಟನೆಯು ಕೂಡ ಜಾಥಾ, ಹರತಾಳ ಮತ್ತು ಪಿಕೆಟಿಂಗ್‌ಗಳನ್ನು ಆಯೋಜಿಸಿ ಗ್ರಾಹಕರು ಮತ್ತು ಸರಕಾರದ ಗಮನ ಸೆಳೆಯುವ ಪ್ರಯತ್ನಗಳನ್ನು ಮಾಡುತ್ತಿತ್ತು. ಇಂತಹುದೇ ಕಾರ್ಯಕ್ರಮಗಳನ್ನು ಮುಂಬಯಿ ಗ್ರಾಹಕ ಪಂಚಾಯತ್ ನಡೆಸಿಕೊಂಡು ಬರುತ್ತಿದೆ.

ನ್ಯಾಯ ಬೆಲೆ ಅಂಗಡಿಗಳಲ್ಲಿ ನಡೆಯುವ ದುರ್ವ್ಯವಹಾರ ಮತ್ತು ಸಾರಿಗೆ ಸಂಸ್ಥೆಗಳಲ್ಲಿರುವ ರಸ್ತೆ ಅಸುರಕ್ಷಿತತೆ ಮತ್ತು ಸಾರಿಗೆ ವಾಹನಗಳಲ್ಲಿ ಜನಸಂದಣಿ ಸಮಸ್ಯೆಗಳನ್ನು ಸರಕಾರದ ಗಮನಕ್ಕೆ ತರಲು ತಮಿಳುನಾಡಿನ ತಿರುಚಿಯಲ್ಲಿ ೧೯೭೪ರಲ್ಲಿ ಗ್ರಾಹಕರ ಸಂಘಟನೆಯೊಂದನ್ನು ಹುಟ್ಟುಹಾಕಲಾಯಿತು. ಸ್ವಾತಂತ್ರ್ಯ ಹೋರಾಟಗಾರ ಮತ್ತು ಗಾಂಧೀವಾದಿ ಆರ್. ಆರ್. ದಳವಾಯಿ ಅವರು ಚೆನ್ನೈ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಗ್ರಾಹಕರ ಸಹಕಾರ ಸಂಸ್ಥೆಗಳನ್ನು ಪ್ರಾರಂಭಿಸಿದರು. ಆ ಮೂಲಕ ಜನರಲ್ಲಿ ಗ್ರಾಹಕರಿಗಾಗುವ ತೊಂದರೆಗಳು ಮತ್ತು ಅವುಗಳ ಪರಿಹಾರಕ್ಕಾಗಿ ಸಂಘಟಿತ ಹೋರಾಟ ಮಾಡಲು ಅರಿವು ಮೂಡಿಸುತ್ತಿದ್ದರು. ಹೀಗೆ ಗುಜರಾತ್, ರಾಜಸ್ಥಾನ ಮೊದಲಾದ ರಾಜ್ಯಗಳಲ್ಲಿಯೂ ಗ್ರಾಹಕರ ಪರ ಹೋರಾಡುವ ಸಂಸ್ಥೆಗಳನ್ನು ಪ್ರಾರಂಭಿಸಲಾಯಿತು.

**ಗ್ರಾಹಕರ ದಿನಾಚರಣೆಯ ಜನನ: ಗ್ರಾಹಕರ ಹಿತರಕ್ಷಣಾ ಕಾಯ್ದೆ ೧೯೮೬**

ಜಾನ್ ಎಫ್. ಕೆನಡಿಯವರು ಅಮೆರಿಕೆಯ ಸಂಯುಕ್ತಸಂಸ್ಥಾನದ ಕಾಂಗ್ರೆಸ್ಸಿನಲ್ಲಿ ಗ್ರಾಹಕರ ಹಕ್ಕುಗಳನ್ನು ಪ್ರತಿಪಾದಿಸಿದ ಐತಿಹಾಸಿಕ ದಿನವನ್ನು ಅಂತರರಾಷ್ಟ್ರೀಯ ಸಂಸ್ಥೆಯಾದ ಕನ್ಸ್ಯೂಮರ್ಸ್ ಇಂಟರ್‌ನ್ಯಾಷನಲ್ ೧೯೮೩ರಲ್ಲಿ ೧೫ನೇ ಮಾರ್ಚ್ ವಿಶ್ವ ಗ್ರಾಹಕರ ದಿನಾಚರಣೆ ಎಂದು ಆಚರಿಸಲು ತೀರ್ಮಾನಿಸಿತು. ವಿಪರ್ಯಾಸವೆಂದರೆ, ವಿಶ್ವದ ಬಹುದೊಡ್ಡ ಗ್ರಾಹಕರ ಸಂಖ್ಯೆಯನ್ನು ಹೊಂದಿರುವ ಮತ್ತು ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರವಾಗಿರುವ ಅಮೆರಿಕಾದಲ್ಲಿಯೇ ವಿಶ್ವ ಗ್ರಾಹಕರ ದಿನಾಚರಣೆಯನ್ನು ಆಚರಿಸುವುದಿಲ್ಲ.

ಭಾರತದಲ್ಲಿ ಸಾಮಾಜಿಕ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಹಲವಾರು ಸಾಮಾಜಿಕ ಶಾಸನಗಳನ್ನು ಅನುಷ್ಠಾನ ಗೊಳಿಸಲಾಗಿದೆ. ಸ್ವಾತಂತ್ರ್ಯಾನಂತರ ವಿಶ್ವದಲ್ಲಿಯೇ ಜಾತಿ, ಧರ್ಮ, ಲಿಂಗ ಮತ್ತು ವರ್ಗಗಳ ನಡುವೆ ಭೇದವೆಣಿಸದೆ ಸರ್ವರಿಗೂ ಸಮಾನವಾದ ಸಾರ್ವತ್ರಿಕ ಮತದಾನದ ಹಕ್ಕನ್ನು ಕಲ್ಪಿಸಿರುವ ಮುಂಚೂಣಿ ರಾಷ್ಟ್ರಗಳಲ್ಲಿ ಭಾರತವೂ ಒಂದು. ಇತರೆ ಸಾಮಾಜಿಕ ಶಾಸನಗಳಂತೆಯೇ ಗ್ರಾಹಕರ ಹಿತ



ಕಾಪಾಡುವ ದೃಷ್ಟಿಯಿಂದ ನಮ್ಮ ನಾಡಿನಲ್ಲಿ ಗ್ರಾಹಕರ ಹಿತರಕ್ಷಣಾ ಕಾಯ್ದೆಯನ್ನು ೧೯೮೬ರಲ್ಲಿ ಜಾರಿಗೊಳಿಸಲಾಯಿತು.

ಈ ಕಾಯ್ದೆಯನ್ವಯ ಮೂರು ಹಂತದ ಗ್ರಾಹಕರ ಕೋರ್ಟ್‌ಗಳನ್ನು– ಜಿಲ್ಲಾ ಹಂತದಲ್ಲಿ ಜಿಲ್ಲಾ ವೇದಿಕೆ, ರಾಜ್ಯಮಟ್ಟದಲ್ಲಿ ರಾಜ್ಯ ಆಯೋಗ ಮತ್ತು ರಾಷ್ಟ್ರಮಟ್ಟದಲ್ಲಿ ರಾಷ್ಟ್ರೀಯ ಆಯೋಗಗಳನ್ನು – ಸ್ಥಾಪಿಸಲಾಗಿದೆ. ಈ ಕೋರ್ಟ್‌ಗಳನ್ನು ಪರಿಹಾರೋಪಾಯಕ್ಕಾಗಿ ಸ್ಥಾಪಿಸಲಾಗಿದೆಯೇ ಹೊರತು ದಂಡಿಸುವುದಕ್ಕಾಗಿ ಅಲ್ಲ. ಇಲ್ಲಿ ಹೂಡುವ ದಾವೆಯ ವಿಧಾನ ಸರಳ ಹಾಗೂ ಶೀಘ್ರ ಪರಿಹಾರೋಪಾಯ ದೊರಕುತ್ತದೆ ಮತ್ತು ಖರ್ಚುರಹಿತ. ಈ ಕೋರ್ಟ್‌ಗಳಲ್ಲಿ ದಾವೆ ಹೂಡುವ ಕಕ್ಷಿದಾರರು ವಕೀಲರನ್ನಾಗಲಿ ಅಥವಾ ಪ್ರತಿನಿಧಿಗಳನ್ನಾಗಲಿ ಅವಲಂಬಿಸದೆ ತೀರಾ ಸರಳವಾದ ರೀತಿಯಲ್ಲಿ ಬಿಳಿ ಹಾಳೆಯ ಮೇಲೆ ಅಗತ್ಯ ಸಾಕ್ಷ್ಯ ಮತ್ತು ದಾಖಲಾತಿಗಳೊಂದಿಗೆ ತಮಗೆ ಕಿರುಕುಳ, ತೊಂದರೆ ಮತ್ತು ಅಸಮರ್ಪಕ ಸೇವೆ ಒದಗಿಸಿದ ವ್ಯಾಪಾರಸ್ಥರು/ಸೇವಾ ಸಂಸ್ಥೆಗಳು/ಸರಕಾರಿ ಮತ್ತು ಸರ್ಕಾರೇತರ ಒಡೆತನದಲ್ಲಿರುವ ಸೇವಾಸಂಸ್ಥೆಗಳ ವಿರುದ್ಧ ಪರಿಹಾರ ಕೋರಿ ದಾವೆ ಹೂಡಬಹುದಾಗಿದೆ.

ವ್ಯಾಪಾರಸ್ಥರು, ಉತ್ಪಾದಕರು, ಸೇವಾಸಂಸ್ಥೆಗಳು ಮತ್ತು ಇತರ ವಾಣಿಜ್ಯ ವಹಿವಾಟುಗಳನ್ನು ನಡೆಸುವ ಸಂಸ್ಥೆಗಳಿಂದಾಗುವ ಶೋಷಣೆಯನ್ನು ನಿರ್ಬಂಧಿಸಲು ಮತ್ತು ಸೂಕ್ತ ಪರಿಹಾರೋಪಾಯಗಳನ್ನು ಗ್ರಾಹಕರಿಗೆ ಒದಗಿಸಲು ಗ್ರಾಹಕರ ಹಿತರಕ್ಷಣಾ ಕಾಯ್ದೆ (೧೯೮೬)ಯ ಮೂಲಕ ಅವಕಾಶ ಕಲ್ಪಿಸಿರುವುದು ಗ್ರಾಹಕರಿಗೆ ಸರಕಾರ ನೀಡುವ ಭದ್ರತೆ ಮತ್ತು ಸುರಕ್ಷಿತತೆಯು ಕ್ರಾಂತಿಕಾರಿಯಾದ ಬೆಳವಣಿಗೆಯಾಗಿದೆ. ಸದರಿ ಕಾಯ್ದೆಯಲ್ಲಿ ವಾಣಿಜ್ಯ ವಹಿವಾಟುಗಳನ್ನು ನಡೆಸುವ ವ್ಯಕ್ತಿಗಳು, ಸೇವಾಸಂಸ್ಥೆಗಳು ತಮ್ಮ ನಿಗದಿತ ಆದಾಯದ ಸ್ವಲ್ಪ ಭಾಗವನ್ನು ಗ್ರಾಹಕರ ಸೇವಾ ಸೌಲಭ್ಯಗಳು ಮತ್ತು ಪರಿಹಾರಗಳಿಗಾಗಿ ವ್ಯಯಿಸಲು ಅವಕಾಶ ಕಲ್ಪಿಸಿರುವುದು ಸ್ವಾಗತಾರ್ಹವಾದ ಬೆಳವಣಿಗೆಯಾಗಿದೆ.

ನಗರಪ್ರದೇಶಗಳಲ್ಲಿ ಕೇಂದ್ರೀಕೃತವಾಗಿರುವ ಗ್ರಾಹಕರ ಕ್ಲಬ್‌ಗಳು ಮತ್ತು ಗ್ರಾಹಕರ ಸೇವಾ ಸಂಸ್ಥೆಗಳು ಗ್ರಾಮೀಣ ಭಾಗಗಳಿಗೂ ಗ್ರಾಹಕರ ಹಿತರಕ್ಷಣಾ ಚಟುವಟಿಕೆಗಳನ್ನು ಒಯ್ಯಲು ಅವರಿಗೆ ಹಣಕಾಸಿನ ನೆರವು ನೀಡುವುದು ಅವಶ್ಯವಾಗಿದೆ. ಈ ನಿಟ್ಟಿನಲ್ಲಿ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳು ಗ್ರಾಮ ಪಂಚಾಯತ್ ಮಟ್ಟದಲ್ಲಿ ಗ್ರಾಹಕರ ಸೇವಾ ಕೇಂದ್ರಗಳನ್ನು ತೆರೆದು ಅವುಗಳ ಮೂಲಕ ಗ್ರಾಹಕರಲ್ಲಿ ಜಾಗೃತಿ ಮೂಡಿಸುವುದು ಇಂದಿನ ತುರ್ತು ಅಗತ್ಯಗಳಲ್ಲಿ ಒಂದಾಗಿದೆ.

ಕೇಂದ್ರ ಮತ್ತು ರಾಜ್ಯ ಸರಕಾರಗಳು ತಮ್ಮ ವಿವಿಧ ಇಲಾಖೆಗಳ ಮತ್ತು ಸರಕಾರದ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಾರ್ವಜನಿಕ ಉದ್ದಿಮೆಗಳು, ಮತ್ತು ಸೇವಾ ಸಂಸ್ಥೆಗಳಾದ ವಿದ್ಯುಚ್ಛಕ್ತಿ, ರೈಲ್ವೆ ಸೇವೆಗಳು, ಅಂಚೆ ಮತ್ತು ತಂತಿ ಇಲಾಖೆ ಸೇವೆಗಳು, ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ, ಸಾರಿಗೆ ಸಂಪರ್ಕ ಸಂಸ್ಥೆಗಳು, ಭಾರತ್ ಸಂಚಾರ್ ನಿಗಮ ನಿಯಮಿತ, ವಿಮೆ ಕಂಪನಿಗಳು, ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಸಂಸ್ಥೆಗಳು ಇತ್ಯಾದಿ ನಾಗರಿಕರಿಗೆ ಒದಗಿಸುವ ಸೌಲಭ್ಯಗಳಲ್ಲಿ ಕೊರತೆ ಮತ್ತು ತಮ್ಮ ಸೇವಾ ನ್ಯೂನತೆಗಳಿಗಾಗಿ ಪರಿಹಾರೋಪಾಯ ಕೋರಿ ದೂರು/ಅಹವಾಲುಗಳನ್ನು ಸಲ್ಲಿಸಲು ಗ್ರಾಹಕರಿಗೆ ಅವಕಾಶ ಕಲ್ಪಿಸಿಕೊಡುವ ನಾಗರಿಕ ಸನ್ನದು ಜಾರಿಗೊಳಿಸಿರುವುದು ಒಂದು ಕ್ರಾಂತಿಕಾರಿ ಬೆಳವಣಿಗೆಯಾಗಿದೆ. ಇದರೊಂದಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಜಾರಿಗೊಳಿಸಿರುವ ಮಾಹಿತಿ ಹಕ್ಕು ಅಧಿನಿಯಮವು ನಾಗರಿಕ ಸೇವಾ ಸೌಲಭ್ಯಗಳ ಕುರಿತು ಮಾಹಿತಿಯನ್ನು ಪಡೆಯುವಲ್ಲಿ ಅತ್ಯಂತ ಪರಿಣಾಮಕಾರಿ ಹೆಜ್ಜೆಯಾಗಿದೆ.

ಸದಾಶಿವ ಮರ್ಜಿ
ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾ.ವ್ಯ. ಇಲಾಖೆ, ಕೊಪ್ಪಳ

'ನೊಂದವರ ನೋವಿಗೆ ಮಿಡಿವ 'ನಿರಂತರ' *(೫೧ನೇ ಪುಟದಿಂದ)*

ಕಾರಣಕ್ಕಾಗಿ ಅವರು ಸ್ವಾತಂತ್ರ್ಯಪೂರ್ವದಲ್ಲಿ ಹಾಗೂ ಸ್ವಾತಂತ್ರ್ಯಾನಂತರವೂ ಒಟ್ಟು ಎಂಟು ವರ್ಷಗಳ ಕಾಲ ಸೆರೆಮನೆವಾಸ ಅನುಭವಿಸಿದ್ದಾರೆ. ಬಿ. ವಿ. ಕಕ್ಕಿಲ್ಲಾಯರ ಸುದೀರ್ಘ ಜೀವನದಲ್ಲಿ ಮಾಡಿದ ಹೋರಾಟ, ತ್ಯಾಗ, ಸಾಮಾಜಿಕ ಸೇವೆ ಎಲ್ಲವೂ ಸುದೀರ್ಘ ಕಥನವೇ. ಹಾಗೆಯೇ ಅವರು ಕನ್ನಡಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ಕೂಡ ಅನನ್ಯವಾಗಿದ್ದು ಹೆಚ್ಚು ಕಾಲ ಉಳಿಯುವಂಥದು. ಕಕ್ಕಿಲ್ಲಾಯರು ಇದುವರೆಗೆ ೧೫ ಸ್ವತಂತ್ರ ಕೃತಿಗಳನ್ನೂ, ೧೧ ಅನುವಾದ ಕೃತಿಗಳನ್ನೂ ಕನ್ನಡಕ್ಕೆ ತಂದಿದ್ದಾರೆ. ೧೯೪೯ರ ಕಾಲದಲ್ಲಿ, ಕನ್ನಡದಲ್ಲಿ ಮಾರ್ಕ್ಸ್‌ವಾದೀ ಸೈದ್ಧಾಂತಿಕ ಪುಸ್ತಕಗಳೇ ಇಲ್ಲದಿದ್ದ ಕಾಲದಲ್ಲಿ, ಮಾರ್ಕ್ಸ್ ಸಾಹಿತ್ಯ ಎಂದರೆ ಬಂಡವಾಳಶಾಹಿ ಮಡಿವಂತಜನ ಮೂಗು ಮುರಿಯುವ ಸನ್ನಿವೇಶದಲ್ಲಿ 'ವಿಶ್ವದ ನಡಿಗೆ - ಸಮಾಜವಾದದೆಡೆಗೆ' ಮತ್ತು 'ದ್ವಂದ್ವಮಾನ ಚಾರಿತ್ರಿಕ ಭೌತಿಕವಾದ' ಎಂಬ ಎರಡು ಕಿರು ಹೊತ್ತಿಗೆಗಳನ್ನೂ, ೧೯೫೪ರಲ್ಲಿ ಕಮ್ಯುನಿಸ್ಟ್ ಪಕ್ಷದ ಹೊಸ ಸದಸ್ಯರಿಗೆ ಕಮ್ಯುನಿಸಂ ಕುರಿತು ಅರಿವು ನೀಡುವುದಕ್ಕೆಂದು ಬರೆದ 'ಕಮ್ಯುನಿಸಂ' (ಪುಟಗಳು ೪೮) ಎಂಬ ಇನ್ನೊಂದು ಕಿರುಪುಸ್ತಕವನ್ನೂ ಬರೆಯುವ ಮೂಲಕ ಸಾಮಾನ್ಯರಿಗೂ ಮಾರ್ಕ್ಸ್‌ವಾದದ ಪರಿಚಯ ಮಾಡಿಕೊಟ್ಟ ಮೊದಲ ಕೀರ್ತಿ ಕಕ್ಕಿಲ್ಲಾಯರಿಗೆ ಸಲ್ಲಬೇಕು.

೧೯೮೩-೮೬ರಲ್ಲಿ ಬರವಣಿಗೆಯತ್ತ ಗಂಭೀರ ಗಮನಕೊಟ್ಟ ಲೇಖಕರು 'ಕಾರ್ಲ್ ಮಾರ್ಕ್ಸ್: ಬದುಕು - ಬರಹ' ಮತ್ತು 'ಫ್ರೆಡರಿಕ್ ಎಂಗೆಲ್ಸ್: ಜೀವನ - ಚಿಂತನ' ಎಂಬ ಸ್ವತಂತ್ರ ಕೃತಿಗಳನ್ನೂ ; ೧೯೮೯ರಲ್ಲಿ 'ಪ್ರಾಚೀನ ಭಾರತದಲ್ಲಿ ಭೌತಿಕವಾದ' ; ೧೯೯೪ರಲ್ಲಿ 'ಭಾರತೀಯ ದರ್ಶನಗಳು' ಎಂಬ ಅನುವಾದ ಕೃತಿ (ಮೂಲ : ದೇವಿಪ್ರಸಾದ್ ಚಟ್ಟೋಪಾಧ್ಯಾಯ)ಗಳನ್ನೂ ತಂದರು. ಕಕ್ಕಿಲ್ಲಾಯರ ಸಾಹಿತ್ಯ ಸೇವೆಯನ್ನು ಗುರುತಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಅವರನ್ನು ಗೌರವಿಸಿದೆ. ಕೋ.ಚೆ.ಯವರು ಸಾದರಪಡಿಸುವಂತೆ (ನೋಡಿ: 'ನಿರಂತರ' ಬಿ. ವಿ. ಕೆ.ಯವರ ಸಂಭಾವನಾ ಗ್ರಂಥ) ಕಕ್ಕಿಲ್ಲಾಯರು ಕಾರ್ಲ್ ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಸಿದ್ಧಾಂತದ ಬಗ್ಗೆ ಬರೆಯುವ ಮುನ್ನ ಆ ಪಾಶ್ಚಾತ್ಯ ತತ್ತ್ವಶಾಸ್ತ್ರವು ಭಾರತೀಯ ಭಾಷೆಗಳಲ್ಲಿ ಮೂಡಿಬಂದಿರಲಿಲ್ಲ. ಅಂಥಲ್ಲಿ ಈ ಲೇಖಕರು ಮಾರ್ಕ್ಸ್ ಸಿದ್ಧಾಂತ ನಿರೂಪಣೆಗೆ ಅವರದೇ ಆದ ಹೊಸ ಪರಿಭಾಷೆಯನ್ನು ಕಂಡುಕೊಳ್ಳುವ ಅಗತ್ಯವಿತ್ತು. ಆ ಕಷ್ಟದ ಕೆಲಸವನ್ನು ಕಕ್ಕಿಲ್ಲಾಯರು ಸವಾಲಾಗಿ ಸ್ವೀಕರಿಸಿ ಬರೆದದ್ದು ಅವರ ಕನ್ನಡ ಭಾಷಾ ಪ್ರೌಢಿಮೆಗೆ ಒಂದು ಮೈಲಿಗಲ್ಲು.

ನಾವಿಲ್ಲಿ ಒಂದು ಮಾತನ್ನು ನೆನಪಿಡಬೇಕು. ಸೈದ್ಧಾಂತಿಕವಾಗಿ ಕಮ್ಯುನಿಸಂ ಕುರಿತಂತೆ ಕನ್ನಡದಲ್ಲಿ ಅಷ್ಟಾಗಿ ಚರ್ಚೆಯಾಗಿರಲಿಲ್ಲ ಎನ್ನಬಹುದು. ೧೯೪೪ರ ಸುಮಾರಿಗೆ ಕುವೆಂಪು ತಮ್ಮ ಸೃಜನಶೀಲ ಕಾವ್ಯವೊಂದರಲ್ಲಿ ಸಾಮ್ಯವಾದದ ಸಾರವನ್ನು ಭಟ್ಟಿ ಇಳಿಸಿದ್ದರು ಎಂದರೆ ವಿಸ್ಮಯವಾಗುತ್ತದೆ. (ನೋಡಿ: 'ಕುವೆಂಪು: ಕೋಗಿಲೆ ಮತ್ತು ಸೋವಿಯತ್ ರಷ್ಯಾ', ಕವನ ಸಂಕಲನ, ೧೯೪೪)

ಕಮ್ಯುನಿಸಂ ಸರಿಯಾಗಿ ಅರ್ಥವಾಗಬೇಕಾದರೆ ಹಿಂದೂ ಧರ್ಮದ ಸಾರ ಸ್ವಲ್ಪಮಟ್ಟಿಗಾದರೂ ತಿಳಿದಿರಬೇಕು. ಈ ನಿಟ್ಟಿನಲ್ಲಿ ಕಕ್ಕಿಲ್ಲಾಯರು 'ಭಾರತೀಯ ಚಿಂತನೆ, ಹಿಂದೂಧರ್ಮ ಮತ್ತು ಕಮ್ಯುನಿಸಂ' ಎಂಬ ಇನ್ನೊಂದು ಕಿರು (ಪುಟಗಳು ೬೫) ಹೊತ್ತಿಗೆಯನ್ನೂ ಬರೆದಿದ್ದಾರೆ. ಇದರಲ್ಲಿ ಭಾರತೀಯ ಷಡ್ದರ್ಶನಗಳ ಸಾರವನ್ನು ಸ್ಪಷ್ಟಪಡಿಸುತ್ತಾರೆ. ಕಕ್ಕಿಲ್ಲಾಯರ ಪಾಂಡಿತ್ಯ ಹಾಗೂ ಪರಾಮರ್ಶನ ಸಾಮರ್ಥ್ಯಕ್ಕೆ ಈ ಕಿರುಹೊತ್ತಿಗೆ ಒಂದು ಸಾಕ್ಷಿ. ಹಾಗೆಯೇ 'ಇರವು ಮತ್ತು ಅರಿವು' (ಪುಟಗಳು ೪೪) ಎಂಬ ಪುಟ್ಟ ಪುಸ್ತಕ ಸಹ ಕಕ್ಕಿಲ್ಲಾಯರು ನಿಗಾ ಇಟ್ಟು ಬರೆದರೆ ಎಂಥ ಅಮೂರ್ತ ಸಂಗತಿಗಳಿಂದ ತುಂಬಿದ ತತ್ತ್ವಗಳನ್ನು ಎಷ್ಟು ಸರಳವಾಗಿ ಮನಮುಟ್ಟುವಂತೆ ಹೇಳಬಲ್ಲರು ಎಂಬುದನ್ನು ಸಾಬೀತುಪಡಿಸುತ್ತದೆ. ಇದಕ್ಕೆಲ್ಲ ಆಳವಾದ ಅಧ್ಯಯನ ಹಾಗೂ ದೀರ್ಘಸಾಧನೆ ಇಲ್ಲವಾದರೆ ಸಾಧ್ಯವಿಲ್ಲದ ಮಾತು.

ಕಕ್ಕಿಲ್ಲಾಯ ಅವರದು ಬಹುಮುಖ ಸೇವೆ. ೧೯೫೨ರಿಂದ ಎರಡು ವರ್ಷಗಳ ಕಾಲ ರಾಜ್ಯ ಸಭಾ ಸದಸ್ಯರಾಗಿ, ೧೯೭೨ರಿಂದ ಎರಡು ಅವಧಿಗೆ ರಾಜ್ಯ ವಿಧಾನಸಭಾ ಸದಸ್ಯರಾಗಿ, ಎರಡೂ ಶಾಸಕಾಂಗ ಸಭೆಗಳಲ್ಲಿ ಜನಸಾಮಾನ್ಯರ ಬೇಡಿಕೆಗಳಿಗೆ ಪ್ರತಿಧ್ವನಿಯಾದರು. ರಾಜ್ಯ ಭೂಸುಧಾರಣಾ ಮಸೂದೆಯ ಪರಿಶೀಲನಾ ಸಮಿತಿಯ ಸದಸ್ಯರಾಗಿ ಕಕ್ಕಿಲ್ಲಾಯರು ಅದರಲ್ಲಿ ರೈತರ ಪರವಾಗಿ ತಿದ್ದುಪಡಿಗಳನ್ನು ತರಲು ವಿಶೇಷವಾಗಿ ಶ್ರಮಿಸಿದ್ದಾರೆ. ಉತ್ತಮ ವಾಗ್ಮಿಯಾದ ಇವರು ಇಂಗ್ಲಿಷ್, ಕನ್ನಡ, ಮಲಯಾಳಂ ಭಾಷೆಗಳಲ್ಲಿ ನಿರರ್ಗಳವಾಗಿ ಭಾಷಣಮಾಡಬಲ್ಲರು. ವಯಸ್ಸಿನ ಕಾರಣ ಈಗ ಸಕ್ರಿಯ ರಾಜಕಾರಣದಿಂದ ದೂರವಿದ್ದರೂ ಸಾಮಾಜಿಕ ನ್ಯಾಯಬದ್ಧತೆಯ ಬಗ್ಗೆ ದನಿ ಎತ್ತಿ ಕಿರಿಯರಿಗೆ ಮಾರ್ಗದರ್ಶನ ಮಾಡುವವರಾಗಿದ್ದಾರೆ.

ಪ್ರೊ|| ಶಿವರಾಮಯ್ಯ
ನಂ. ೧೭೨, ಹೊಂಗೆಸಾಲುಮನೆ, ಐಸೆಕ್ ರಸ್ತೆ, ನಾಗರಬಾವಿ ಗ್ರಾಮ, ಬೆಂಗಳೂರು -೫೬೦೦೭೨

ನಮ್ಮ ಸ್ನೇಹಿತರೊಬ್ಬರಿಗೆ ಆರು ತಿಂಗಳ ಹಿಂದೆ ಸರ್ವಾಂಗ ತುರಿಕಜ್ಜಿ ಆರಂಭವಾಯಿತು. ಅಸಾಧ್ಯವಾದ ತುರಿಕೆಯನ್ನು ತಡೆಯಲಾರದೆ ಆತ್ಮಹತ್ಯೆಗೂ ಒಮ್ಮೆ ಮನಸ್ಸು ಮಾಡಿದ್ದರೆಂದು ಅವರ ಪತ್ನಿ ಹೇಳಿದ್ದರು. ಕಜ್ಜಿ ಆರಂಭವಾದಂದಿನಿಂದಲೇ ತಡಮಾಡದೆ ಪ್ರಸಿದ್ಧ ಚರ್ಮರೋಗತಜ್ಞರನ್ನು ಕಂಡು ಚಿಕಿತ್ಸೆ ಪಡೆದುಕೊಂಡಿದ್ದರು. ಒಂದಿಬ್ಬರು ಆಯುರ್ವೇದ ಹಾಗೂ ಹೋಮಿಯೋಪಥಿ ವೈದ್ಯರಿಂದಲೂ ಮದ್ದು ಮಾಡಿಸಿಕೊಂಡಿದ್ದರು. ಆದರೂ ಯಾವ ಪ್ರಯೋಜನವೂ ಆಗದೆ ನಿರಾಶರಾಗಿ ಈ ನರಕಯಾತನೆಯಿಂದ ಹೇಗೆ ಮುಕ್ತಿ ಪಡೆಯಲಿ ಎಂದು ಯೋಚಿಸುತ್ತಿರುವಾಗಲೇ ದೂರದ ಸಂಬಂಧಿಯೊಬ್ಬರು ಅವರ ಮನೆಗೆ ಬಂದವರು ''ನಮ್ಮ ಮನೆಯ ಹತ್ತಿರ ಪ್ರಸಿದ್ಧ ಜ್ಯೋತಿಷಿಯೊಬ್ಬರಿದ್ದಾರೆ. ಎಲ್ಲವೂ ಅವರು ಹೇಳಿದಂತೆಯೇ ಆಗುತ್ತದೆ. ದೂರದ ಊರಿನಿಂದಲೂ ಅವರನ್ನು ನೋಡಲು, ಸಲಹೆ ಪಡೆಯಲು ಗಣ್ಯ ವ್ಯಕ್ತಿಗಳು ಬರುತ್ತಾರೆ. ಒಮ್ಮೆ ರಾಜ್ಯದ ರಾಜ್ಯಪಾಲರೂ ಬಂದಿದ್ದರು. ಮಂತ್ರಿಗಳ ಸವಾರಿಯಂತೂ ತಪ್ಪಿದ್ದಲ್ಲ. ಅವರು ನಿಮ್ಮ ಜಾತಕ ನೋಡಿ ಇದಕ್ಕೆ ಖಂಡಿತ ಪರಿಹಾರ ಸೂಚಿಸುತ್ತಾರೆ'' ಎಂದು ಹೇಳಿ ತನ್ನೊಂದಿಗೆ ಅಂದೇ ಕರೆದುಕೊಂಡು ಹೋದರು. ನೆರೆಯಲ್ಲಿ ಕೊಚ್ಚಿಹೋಗುತ್ತಿರುವವನಿಗೆ ಹುಲ್ಲುಕಡ್ಡಿಯ ಆಸರೆ ಸಿಕ್ಕಿದಂತಾಯಿತು.

# ರಾಹುಭುಕ್ತಿ ಮುಗಿಯದೆ ನಿಮ್ಮ ತುರಿಕಜ್ಜಿ ಗುಣವಾಗದು

ಎಂ. ವಿ. ಭಟ್

ಜ್ಯೋತಿಷಿಯ ಬಳಿಗೆ ಹೋದಾಗ ಜ್ಯೋತಿಷಿ ''ಇಂದು ಮಂಗಳವಾರ. ಚೆನ್ನಾಗಿರುವುದಿಲ್ಲ. ನಾಳೆ ಬನ್ನಿ'' ಅಂದರು. ಮರುದಿನ ಬೆಳಗ್ಗೆ ಹೋದಾಗ ಅಲ್ಲಿ ಹತ್ತಾರು ಮಂದಿ ತಮ್ಮ ಜಾತಕವನ್ನು ತೋರಿಸಿ ಭವಿಷ್ಯ ತಿಳಿದುಕೊಳ್ಳಲು ಸಾಲಾಗಿ ಕುಳಿತಿದ್ದರು. ಮಧ್ಯಾಹ್ನ ಇವರ ಸರದಿ ಬಂತು. ಒಳಗೆ ಹೋಗಿ ಕೈಮುಗಿದು, ಜಾತಕವನ್ನು ತೆರೆದು ಅವರಿಗೆ ಕೊಟ್ಟರು. ಜ್ಯೋತಿಷಿ ಜಾತಕದ ಮೇಲೆ ಒಮ್ಮೆ ಕಣ್ಣಾಡಿಸಿ ಹತ್ತಾರು ಕವಡೆಗಳನ್ನು ತೆಗೆದು ಅತ್ತಿತ್ತ ಕೂಡಿಸಿದರು, ಕಳೆದರು. ಸ್ವಲ್ಪ ಹೊತ್ತಿನ ಮೇಲೆ ಹೇಳಿದರು – ''ನಿಮಗೀಗ ಕುಜದೆಶೆಯಲ್ಲಿ ರಾಹುಭುಕ್ತಿ. ಇನ್ನೂ ಆರು ತಿಂಗಳು ಇರುತ್ತದೆ. ತುಂಬಾ ಕಠಿಣ ಕಾಲ. ಯಾವ ಮದ್ದಿನಿಂದಲೂ ನಿಮ್ಮ ತುರಿಕಜ್ಜಿ ಗುಣವಾಗದು. ಒಂದೇ ಒಂದು ಪರಿಹಾರವೆಂದರೆ ಆದಷ್ಟು ಬೇಗನೆ ವೈದಿಕರನ್ನು ಕರೆಸಿ ಕುಜರಾಹು ಸಂಧಿಶಾಂತಿ ಮಾಡಿಸಿದರೆ ಈ ಕಷ್ಟದಿಂದ ಪಾರಾಗಬಹುದು, ಬೇರೆ ದಾರಿಯೇ ಇಲ್ಲ'' ಎಂದು ಹೇಳಿ ಫೀಸ್ ೫೦೦ ರೂ.ಗಳನ್ನು ಪೀಕಿಕೊಂಡು ''ಮಂತ್ರಿಗಳೊಬ್ಬರು ಕರೆದಿದ್ದಾರೆ, ಹೊತ್ತಾಯಿತು. ಅಲ್ಲಿಗೆ ಹೋಗಬೇಕಾಗಿದೆ'' ಎಂದು ಹೇಳಿ ಯಾರೋ ಕಾಣಿಕೆಯಾಗಿತ್ತ ಫಾರಿನ್ ಕಾರನ್ನೇರಿ ಹೋದರು.

ಮನೆಗೆ ಬಂದ ನಮ್ಮ ಮಿತ್ರರಿಗೆ ಸಂಧಿಶಾಂತಿಯಿಂದ ಕಾಯಿಲೆ ಗುಣವಾಗುತ್ತದೆ ಎಂಬುದನ್ನು ತಿಳಿದು ಮನಸ್ಸಿಗೆ ತುಸು ನೆಮ್ಮದಿಯಾಯಿತು.

ಒಂದು ವಾರದಲ್ಲಿ ವೈದಿಕರನ್ನು ಬರಮಾಡಿಕೊಂಡು ಅದ್ದೂರಿಯಿಂದ ಸಂಧಿಶಾಂತಿ ಮಾಡಿಸಿದರು. ಆಮೇಲೆ ಯಾರೋ ಹೇಳಿದರೆಂದು ಸುಬ್ರಹ್ಮಣ್ಯಕ್ಷೇತ್ರಕ್ಕೆ ಹೋಗಿ ಸರ್ಪದೋಷ ಪರಿಹಾರಕ್ಕಾಗಿ ಷಣ್ಮುಖನಿಗೆ ಬೆಳ್ಳಿಯ ಸರ್ಪವನ್ನೂ ಕಾಣಿಕೆಯಿತ್ತು ಬಂದರು. ಅವರ ಮಡದಿಗೆ ಅಲ್ಲಿ ಗಂಡನಿಂದ 'ಮಡೆಸ್ನಾನ' (ಮಡೆಹೊರಳು) ಮಾಡಿಸಬೇಕೆಂದಿತ್ತು. ಆದರೆ 'ತುರಿಕಜ್ಜಿ' ಅಡ್ಡಬಂದುದರಿಂದ ಅವರ ಬಯಕೆ ಬಯಕೆಯಾಗಿಯೇ ಉಳಿಯಿತು.

ಆರು ತಿಂಗಳು ಕಳೆಯಿತು. ರಾಹುಭುಕ್ತಿ ಕೊಟ್ಟದ್ದನ್ನೆಲ್ಲಾ 'ಭುಕ್ತಿ' ಮಾಡಿ ಹೊರಟುಹೋದ. ನಮ್ಮ ಸ್ನೇಹಿತರಿಗೆ ಅಂಟಿದ 'ತುರಿಕಜ್ಜಿ' ಮಹರಾಯ ಮಾತ್ರ ಏನು ಮಾಡಿದರೂ ಹೊರಟುಹೋಗಲೇ ಇಲ್ಲ. ಇನ್ನೇನು ಮಾಡುವುದೆಂದು ಸಲಹೆ ಕೇಳಲು ಒಂದು ದಿನ ಅವರ ಮಡದಿ ಗಂಡನನ್ನು ಕರೆದುಕೊಂಡು ಮನೆಗೆ ಬಂದರು. ಬಂದವರೇ ''ಏನ್ ಸಾರ್, ನಿಮ್ಮ ಮಗನೇ ಆಯುರ್ವೇದ ಡಾಕ್ಟರ್ ಆಗಿದ್ದರೂ ನಮಗೇಕೆ ಉಪಕಾರ ಮಾಡುವುದಿಲ್ಲವಲ್ಲಾ?'' ಎಂದು ಬೇಸರದಿಂದ ಕೇಳಿದರು. ಆಗ ನನ್ನ ಮಗನೇ ''ನೀವು ಇಷ್ಟರಲ್ಲಿ ಎಲ್ಲಾ ಬಗೆಯ ಚಿಕಿತ್ಸೆಯನ್ನು ಮಾಡಿ ನೋಡಿದಿರಿ. ಇನ್ನು ನಾನೇನು ಮದ್ದು ಕೊಡಲಿ ? ನಿಮಗೆ ನಂಬಿಕೆ ಇದೆ ಎಂದಾದರೆ ಕೊನೆಯದಾಗಿ ಮೊದಲು 'ಬಸ್ತಿ' ಆಮೇಲೆ 'ಪಂಚಕರ್ಮ' ಚಿಕಿತ್ಸೆ ನೀಡಿ ನೋಡುತ್ತೇನೆ. ಗುಣವಾದರೆ ನಿಮ್ಮ ಪುಣ್ಯ'' ಎಂದ. ಅವರು ಒಪ್ಪಿದರು. ಮರುದಿನದಿಂದಲೇ 'ಬಸ್ತಿ' ಇತ್ಯಾದಿ ಚಿಕಿತ್ಸೆ ಪ್ರಾರಂಭವಾಯಿತು. ಒಂದೇ ತಿಂಗಳಲ್ಲಿ ಸ್ನೇಹಿತ ತುರಿಕಜ್ಜಿಯಿಂದ ಸಂಪೂರ್ಣ ಬಿಡುಗಡೆಹೊಂದಿ, ಪುನರ್ಜನ್ಮ ಪಡೆದುಕೊಂಡರು. ಈ ಅವಧಿಯಲ್ಲಿ ಆತ ಮಂತ್ರವಾದಿಗಳ ಸಲಹೆ, ದೇವರ ಅನುಗ್ರಹಗಳಿಗೆ ಖರ್ಚು ಮಾಡಿದ ಹಣಕ್ಕೆ ಲೆಕ್ಕವೇ ಇಲ್ಲ. ಎಲ್ಲವೂ ನೀರಲ್ಲಿಟ್ಟು ಹೋಮ ಮಾಡಿದಂತಾಗಿತ್ತು.

ಇದು ನಮ್ಮ ಜನರ ಹಣೆಬರಹ. ಮೊನ್ನೆತಾನೇ ಲೋಕಸಭೆಗೆ ಚುನಾವಣೆ ನಡೆಯಿತು. ಮಂತ್ರವಾದಿಗಳಿಗೆ, ಜ್ಯೋಯಿಸರುಗಳಿಗೆ, ಹಸ್ತಸಾಮುದ್ರಿಕರಿಗೆ, ಕಣಿ ಹೇಳುವವರಿಗೆ, ಪುರೋಹಿತರಿಗೆ, ದೇವಸ್ಥಾನಗಳ ಪೂಜಾರಿಗಳಿಗೆ ಹಾಗೂ ಕೆಲವು ಮಠಾಧಿಪತಿಗಳಿಗೆ 'ಶುಕ್ರದೆಶೆ'. ಮಠಾಧಿಪತಿಗಳನ್ನು ವಾಚಾಮಗೋಚರವಾಗಿ ಬಯ್ಯುತ್ತಿದ್ದ ಚುನಾವಣಾ ಉಮೇದುವಾರರೂ ಇಂದು ಅವರ ಬಳಿಗೆ ಹೋಗಿ, ಗಂಟೆಗಟ್ಟಲೆ ಕಾದು ಕುಳಿತು, ಕಾಣಿಕೆ ಇತ್ತು, ಕಾಲಿಗೆ ಅಡ್ಡಬಿದ್ದು ಆಶೀರ್ವಾದ ಪಡೆದು ಬರುತ್ತಿದ್ದಾರೆ. ''ಅವರು



ಹೇಳಿದ್ದು ಸರಿಯಾಗುತ್ತದೆ'' ಎಂದು ಅರಸೀಕೆರೆ ಹತ್ತಿರ ಇರುವ ಒಬ್ಬ ಪೀಠಾಧಿಪತಿಗಳ ಬಳಿಗೆ ಓಡುವ ರಾಜಕೀಯ ಮುಖಂಡರ ಸಂಖ್ಯೆ ದಿನದಿಂದ ದಿನಕ್ಕೆ ಏರುತ್ತಲೇ ಇದೆ.

ಇನ್ನು ಚುನಾವಣೆಯಲ್ಲಿ ಗೆಲ್ಲುವುದಕ್ಕಾಗಿ ಹೋಮ, ಹೋಮ, ಸುದರ್ಶನ ಹೋಮ, ಚಂಡಿಕಾಯಾಗ, ಹರಕೆ ಕಾಣಿಕೆ ಸರ್ವತ್ರ ನಡೆಯುವುದು ಮಾಮೂಲಿನ ವಿಷಯ. ರಾಹುಕಾಲ, ಗುಳಿಕಕಾಲ, ಯಮಗಂಡಕಾಲ, ಪ್ರೇತಕಾಲ (?) ನೋಡಿಕೊಳ್ಳದೆ ಮನೆಯಿಂದ ಹೊರಡುವ ಮಹಾನುಭಾವರು ಒಬ್ಬರೂ ಇಲ್ಲ. ಅಭ್ಯರ್ಥಿಯೊಬ್ಬರು ನಾಮಪತ್ರ ಸಲ್ಲಿಸುವಾಗ ರಾಹುಕಾಲ ಇತ್ತೆಂದು ಮತ್ತೊಮ್ಮೆ ನಾಮಪತ್ರ ಸಲ್ಲಿಸಿದ್ದೂ ಇದೆ. ಈ ವಿಷಯದಲ್ಲಿ ಎಲ್ಲಾ ಪಕ್ಷಗಳ, ಎಲ್ಲಾ ಜಾತಿಗಳು/ಮತಗಳ ಉಮೇದುವಾರರಿಗೂ ಸಮಪಾಲು! ಆರು ವರ್ಷಗಳ ಶಿಕ್ಷೆಗೆ ಒಳಗಾಗಿ ಜಾಮೀನಿನ ಮೇಲೆ ಹೊರಬಂದ, ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಸಿನಿಮಾ ನಟನೊಬ್ಬ ಹಣೆಗೆ ಕುಂಕುಮ ತಾಗಿಸದೆ ಯಾವ ಸಭೆ-ಸಮಾರಂಭಕ್ಕೂ ಹೋಗುವುದಿಲ್ಲ.

ಚುನಾವಣೆಯ ದಿನ ರಾಹುಕಾಲವಿದೆ ಎಂದು ಚುನಾವಣಾಧಿಕಾರಿ ಓಟು ಹಾಕಿಸಲು ಅರ್ಧತಾಸು ವಿಳಂಬ ಮಾಡಿದ ಉದಾಹರಣೆಯೂ ಇದೆ. ಅನ್ಯಮತಸ್ಥ ಉಮೇದುವಾರನೊಬ್ಬ 'ವಿಜಯಪ್ರಾಪ್ತಿಗಾಗಿ ಸುದರ್ಶನ ಹೋಮ' ಮಾಡಿದ ಸುದ್ದಿ ಪತ್ರಿಕೆಯಲ್ಲಿ ಬಂದಿತ್ತು.

೧೯೭೭ರಲ್ಲಿ ಲೋಕಸಭೆಯ ಚುನಾವಣೆಯ ವೇಳೆ ನಾನು ಬೆಳ್ತಂಗಡಿ ತಾಲ್ಲೂಕಿನ ಒಂದು 'ಬೂತಿ'ಗೆ ಸಹಾಯಕ ಪ್ರಿಸೈಡಿಂಗ್ ಆಫೀಸರನಾಗಿ ಹೋಗಿದ್ದೆ. ಕಡೆಂಗೋಡ್ಲು ಶಂಕರ ಭಟ್ಟರು ಪ್ರಿಸೈಡಿಂಗ್ ಆಫೀಸರರಾಗಿ ಬಂದಿದ್ದರು. ಅಲ್ಲಿಯ ಉಮೇದುವಾರನ ಪ್ರತಿನಿಧಿಯೊಬ್ಬ ಉಮೇದು ವಾರನ ಅಪೇಕ್ಷೆಯಂತೆ ಓಟುಹಾಕುವ ಮೊದಲು ಮತಪೆಟ್ಟಿಗೆಗೆ ಪೂಜೆ ಸಲ್ಲಿಸಿ, ಆರತಿ ಎತ್ತಿ ಮತ ಚಲಾಯಿಸಲು ಆರಂಭಿಸುವಂತೆ ಕೇಳಿಕೊಂಡಾಗ ಕೋಪಗೊಂಡ ಶಂಕರ ಭಟ್ಟರು ''ಇದು ಈ ಶಾಲೆಯ ಶಾರದಾಪೂಜೆಯಲ್ಲ. ಸಾರ್ವಜನಿಕ ಸತ್ಯನಾರಾಯಣ ಪೂಜೆಯೂ ಅಲ್ಲ. ನಿಮ್ಮ ಪೂಜಾ ಸಾಮಗ್ರಿಗಳನ್ನು ಹೊರ ಇಟ್ಟು ಆ ಬದಿಯಲ್ಲಿ ಕುಳಿತುಕೊಳ್ಳಿ'' ಅಂದಿದ್ದರು.




ಕಳೆದ ಅಸೆಂಬ್ಲಿಯ ಚುನಾವಣೆಯಲ್ಲಿ ಉಮೇದುವಾರನೊಬ್ಬ ತಾನು ಓಟು ಹಾಕಲಿರುವ ಮತಪೆಟ್ಟಿಗೆಗೆ ಕುಂಕುಮ ತಾಗಿಸಿ ನಮಸ್ಕರಿಸಿದ್ದನ್ನು ನಾನು ನೋಡಿದ್ದೇನೆ. ವಾಹನ ಚಲಾಯಿಸುವವ ಮೊದಲು, ಮರ ಏರುವ ಮೊದಲು ಸವಾರರು ವಾಹನಕ್ಕೆ, ಮರಕ್ಕೆ ನಮಸ್ಕಾರ ಮಾಡುವುದನ್ನು ಎಲ್ಲರೂ ನೋಡಿರುತ್ತಾರೆ. ಹೊಸ ವಾಹನಗಳಿಗಂತೂ ಭರ್ಜರಿಯ ಪೂಜೆ ಸಲ್ಲಿಸುತ್ತಾರೆ. ಹಣ್ಣುಕಾಯಿ ಅರ್ಪಿಸುತ್ತಾರೆ. ವಾಹನಗಳು ಹಣ್ಣುಕಾಯಿ ಮಾತ್ರ ಸ್ವೀಕರಿಸುವುದಿಲ್ಲ. ಮೆಣಸಿನಕಾಯಿಯ ಮಾಲೆ ಹಾಕಿಸಿಕೊಂಡು ನಿಂಬೆ ಹಣ್ಣುಗಳನ್ನು ಚಕ್ರಗಳ ಅಡಿಯಲ್ಲಿ ಇರಿಸಿಕೊಂಡು ಆಮೇಲೆಯಷ್ಟೇ ಓಟಕ್ಕೆ ಓಂಕಾರ ಹಾಕುತ್ತವೆ. ಮತ್ತೆ ವಾಹನಗಳ ಅಡಿಗೆ ಬಿದ್ದು ಎಷ್ಟು ಜನರು ಬೇಕಾದರೂ ಸತ್ತುಕೊಳ್ಳಲಿ! ಅದು ಅವರ ತಪ್ಪಲ್ಲ. ಹಣ್ಣುಕಾಯಿ ನುಂಗಿದ ಆ ದೇವರ ತಪ್ಪು, ಚಾಲಕರಂತೂ ಜವಾಬ್ದಾರರಲ್ಲ.

ಇನ್ನು ಸರ್ಕಾರಿ ಕಾರ್ಯಾಲಯಗಳಲ್ಲೂ ಕೆಲಸ ಆರಂಭಿಸುವ ಮೊದಲು ಲಕ್ಷ್ಮೀ, ದುರ್ಗೆ ಇತ್ಯಾದಿ ದೇವತೆಗಳ ಫೋಟೋಗಳಿಗೆ ಒಂದೆರಡು ಹೂವಿಟ್ಟು ಅಗರಬತ್ತಿ ಉರಿಸಿ ಪ್ರಸಾದ ಸ್ವೀಕರಿಸಿದ ಮೇಲೆಯೇ ಕೆಲಸಕ್ಕೆ ಆರಂಭ. ದೇವರ ಅನುಗ್ರಹವಿಲ್ಲದೆ ಆ ದಿನದ ಲಂಚ ಹಿಂದಿನ ದಿನದ ಲಂಚಕ್ಕಿಂತ ಹೆಚ್ಚು ಬರುವುದಾದರೂ ಹೇಗೆ? ಕೆಲಸ ಆರಂಭಿಸುವಾಗ ಒಂದರ್ಧ ಗಂಟೆ ವಿಳಂಬವಾದರೂ ಚಿಂತಿಲ್ಲ. ಬಂದವರು ಕೆಲಸ ಮಾಡಿಸಿಕೊಳ್ಳದೆ ಓಡಿಯೇನೂ ಹೋಗುವುದಿಲ್ಲ.

ಒಮ್ಮೆ ನಾನು ಮತ್ತು ನನ್ನ ಮಗ ಒಂದು ಸರ್ಕಾರಿ ಆಫೀಸಿಗೆ ಹೋಗಿದ್ದೆವು. ಒಂದು ಪ್ರಮಾಣಪತ್ರಕ್ಕೆ ಸಾಹೇಬರ ದಸ್ಕತ್ತು ಹಾಕಿಸಿಕೊಳ್ಳುವುದಕ್ಕಾಗಿ. ಸಾಹೇಬರು ದಸ್ಕತ್ತು ಹಾಕಿ ಪ್ರಮಾಣಪತ್ರವನ್ನು ಕೊಡುತ್ತಾ ಆಫೀಸಿನ ಸೀಲ್ ಹಾಕಿಸಿಕೊಳ್ಳಿ ಅಂದರು. ಹೊರಬಂದು ಸೀಲ್ ಹಾಕಿಸಿಕೊಳ್ಳಲು ಪೇದೆಗಾಗಿ ಅತ್ತಿತ್ತ ನೋಡುತ್ತೇನೆ, ಆತ ಕಾಣಿಸಲಿಲ್ಲ. ಆಗ ''ಕುಳಿತುಕೊಳ್ಳಿ. ಹೊರಗೆ ಹೋಗಿರಬೇಕು. ಈಗ ಬರುತ್ತಾನೆ'' ಅಂದ ಅಲ್ಲಿದ್ದ ವ್ಯಕ್ತಿಯೊಬ್ಬ. ಕುಳಿತುಕೊಂಡೆವು. ಆತ ಎಷ್ಟು ಹೊತ್ತಾದರೂ ಬಾರದಿದ್ದಾಗ ಹೊರಗೆ ಬಂದು ಆತನನ್ನು ಹುಡುಕುತ್ತಾ ಕೊನೆಯ ಅಂತಸ್ತಿನವರೆಗೂ ಹೋದೆವು. ನಾಲ್ಕು ಮಂದಿ ಒಂದು ಮೂಲೆಯಲ್ಲಿ ಕುಳಿತುಕೊಂಡು ಇಸ್ಪೀಟು ಆಡುತ್ತಿದ್ದರು. ಅವರಲ್ಲಿ ನಮಗೆ ಬೇಕಾದ ಪೇದೆಯೂ ಇದ್ದ. ಇಸ್ಪೀಟು ಆಟ ಆಡಿಯೂ ಸಂಬಳ ಪಡೆಯಬಹುದಾದ ಈ ದೇಶದಲ್ಲಿ ನಮ್ಮಂತಹ ಪ್ರಾಮಾಣಿಕರೇ ದಡ್ಡರು, ಹೆಡ್ಡರು!

ಕುರುಡು ನಂಬಿಕೆ ಮತ್ತು ಸಾರ್ವಜನಿಕ ಕ್ಷೇತ್ರದ ಸರ್ಕಾರಿ ಕೆಲಸಗಳಲ್ಲೂ ದೈವಭಕ್ತಿ ಪ್ರದರ್ಶನ ಎಂಬ ಎರಡು ಕುಜ ರಾಹುಗಳಿಂದ ನಮಗೆ, ನಮ್ಮ ದೇಶಕ್ಕೆ ಮುಕ್ತಿ ದೊರಕುವವರೆಗೆ ನಮ್ಮ ದೇಶ ಎಂದಿಗೂ ಸುಖ ಸಮೃದ್ಧಿಯನ್ನು ಕಾಣದು. ನಾವು ಮೂಢರಾಗಿಯೇ ಇರಬೇಕಾದೀತು. ನಾನು ದೇವರು ಗುರುಹಿರಿಯರ ಮೇಲೆ ಶ್ರದ್ಧೆ, ಭಕ್ತಿ ಇರಬಾರದೆಂದು ಖಂಡಿತ ಹೇಳುವುದಿಲ್ಲ. ಆದರೆ ಅದು ವೈಯಕ್ತಿಕವಾಗಿರಲಿ. ಸ್ವಾರ್ಥಕ್ಕಾಗಿ ಅವುಗಳನ್ನು ಹೊರತಂದು ದುರುಪಯೋಗಪಡಿಸಿಕೊಳ್ಳಬಾರದು.

ನಮ್ಮ ದೇಶದಲ್ಲಿ ಅಶಿಕ್ಷಿತರೇ ಹೆಚ್ಚು ಮಂದಿ. ಆದುದರಿಂದ ಅವರು ಬಹು ಬೇಗನೆ ದೊಡ್ಡ ಜನರ ಬದುಕಿನ ರೀತಿನೀತಿಗಳನ್ನು ಅನುಕರಿಸಿಬಿಡುತ್ತಾರೆ. ಹರಕೆಹೊತ್ತು ಮಂತ್ರಿಯಾದವನೊಬ್ಬ ಚಂಡಿಗೆ ನೂರಒಂದು ಕುರಿಗಳನ್ನು ಬಲಿಕೊಡುತ್ತಾನೆಂದರೆ ಉಳಿದ ಅಲ್ಪಜ್ಞರು ಕುರಿ, ಮೇಕೆ, ಕೋಳಿ, ಕೋಣಗಳನ್ನು ಬಲಿಕೊಡುವುದರಲ್ಲಿ ಆಶ್ಚರ್ಯವೇನಿದೆ? ನಿಧಿಗಾಗಿ, ನಿಧಿಯ ಶೋಧಕ್ಕಾಗಿ ಮುಗ್ಧ ಬಾಲಿಕೆಯನ್ನು ಈ ದೇಶದಲ್ಲಿ ಬಲಿಕೊಡುತ್ತಾರೆಂದರೆ ಇನ್ನೇನು ಉಳಿದೀತು? ವಾಸ್ತುಶಾಸ್ತ್ರಕ್ಕನುಸಾರ ಮನೆ-ನಿವೇಶನಗಳ ಖರೀದಿ, ನಿರ್ಮಾಣ ಇತ್ಯಾದಿ ಈಗ ಹಳೆಯ ಮಾತಾಯಿತು. ಮನೆಯ ಯಜಮಾನನ ನಕ್ಷತ್ರ ರಾಶಿಗಳನುಸಾರ ಮನೆಗಳಿಗೆ ಬಣ್ಣ ಬಳಿಯುವ ಹುಚ್ಚೂ ಆರಂಭವಾಗಿದೆ. ಅಂತೂ ವಾಸ್ತು ಶಾಸ್ತ್ರಿಗಳಂತು ವಾಸ್ತು ಶಾಸ್ತ್ರಕ್ಕನುಸಾರವಾದ ಮನೆಗಳಲ್ಲಿದ್ದು ಹೇರಳ ಸಂಪತ್ತು ಸಂಪಾದಿಸುತ್ತಾರೆಂಬುದು ನಿಜ.

ಹೆಣ ಸುಡಲೂ ದುಡ್ಡಿಲ್ಲದ ಜನರು ಈ ದೇಶದಲ್ಲಿರುವಾಗ ಕಲ್ಪಿತ ದೇವರಿಗಾಗಿ ದುಡ್ಡು ಉಳ್ಳವರು ಲಕ್ಷ ಲಕ್ಷ ಹಣ ಖರ್ಚು ಮಾಡುತ್ತಾರೆ. ಬೆಲೆಬಾಳುವ ವಸ್ತುಗಳನ್ನು ದೇವರಿಗೆ ಅರ್ಪಿಸುತ್ತಾರೆ. ಅವರ ಯಾವ ದೇವರೂ ಈ ದೇಶವನ್ನು ಕಾಪಾಡಲಾರ. ಒಂದು ಅಂದಾಜಿನ ಪ್ರಕಾರ ಈ ದೇಶದಲ್ಲಿ ವರ್ಷ ಒಂದಕ್ಕೆ ಐದು ಕೋಟಿ ಹಣ, ಒಂದು ಕೋಟಿ ತೆಂಗಿನಕಾಯಿ, ಐವತ್ತುಸಾವಿರ ಎಳನೀರು, ಅಷ್ಟೇ ಸಂಖ್ಯೆಯ ಬಾಳೆಗಿಡ, ಜೇನು, ತುಪ್ಪ, ಚರು, ಹಾಲು, ಶ್ರೀಗಂಧ, ವಸ್ತ್ರ ವ್ಯರ್ಥವಾಗಿ ಹೋಗುತ್ತಿದೆ. ಇನ್ನು ದೇವರಿಗೆ ಕಾಣಿಕೆ, ಉತ್ಸವಗಳಿಗಾಗಿ ಖರ್ಚಾಗುವ ಹಣಕ್ಕೆ ಲೆಕ್ಕವೇ ಇಲ್ಲದಂತಾಗಿದೆ. ನಮ್ಮ ಆಚರಣೆಗಳು ಸರಳವಾಗಿರಲಿ ಎಂದಿಷ್ಟೇ ನಮ್ಮ ಪ್ರಾರ್ಥನೆ. ದುಡಿಮೆಯೇ ದೇವರು, ಪ್ರಾಮಾಣಿಕತೆಯೇ ದೈವಭಕ್ತಿ ಎಂದು ತಿಳಕೊಂಡು ಅದಕ್ಕನುಸಾರ ನಡೆದುಕೊಂಡರೆ ಮಾತ್ರ ನಮ್ಮ ದೇಶಕ್ಕೆ ಉಜ್ವಲ ಭವಿಷ್ಯ, ಜನರಿಗೆ ಸುಖ ಸಂತೋಷ. ಅದು ಬಿಟ್ಟು ಅಧಿಕಾರಕ್ಕಾಗಿ ಮಂದಿರ, ಮಸೀದಿ, ಜಾತಿನೀತಿ, ಮೇಲುಕೀಳು, ಕೋಮುವಾದ, ಹಿಂದೂ-ಮುಸ್ಲಿಮ್, ಆ ಪ್ರಾಂತದವರು, ಈ ಪ್ರಾಂತದವರು ಎಂದು ಇನ್ನೂ (ಇಷ್ಟು ವರ್ಷಗಳೂ ಸಾಕಾಗದೆ) ಕಚ್ಚಾಡುತ್ತಾ, ಪರಸ್ಪರ ಕೆಸರು ಎರಚುತ್ತಾ, ಒಬ್ಬರು ಇನ್ನೊಬ್ಬರನ್ನು ಸಂಶಯದಿಂದ ನೋಡುತ್ತಾ ಸಾಗಿದರೆ, ಕತ್ತಿ ಮಸೆಯುತ್ತಾ ಕುಳಿತುಕೊಂಡರೆ 'ಮಸಣವೇ' ನಮ್ಮ ಮುಂದಿನ ಗಂತವ್ಯ ಸ್ಥಾನವಾದೀತು. ನಿಜ ಹೇಳುವುದಾದರೆ ನಮ್ಮ ದೇಶದಲ್ಲಿ ಹಿಂದೂ ಮುಸ್ಲಿಮರ ನಡುವೆ ಯಾವ ಸಮಸ್ಯೆಯೂ ಇಲ್ಲ. ಇವೆಲ್ಲವೂ ಪಕ್ಷಗಳು, ರಾಜಕಾರಣಿಗಳು ತಮ್ಮ ಬೇಳೆ ಬೇಯಿಸಿಕೊಳ್ಳುವುದಕ್ಕಾಗಿ ಬೇಕೆಂದೇ ಸೃಷ್ಟಿಸಿದ ವ್ಯೂಹರಚನೆ. ಅವರವರು ಅವರ ಪಾಡಿಗೆ ಸಾಗುತ್ತಾ ಹೋದರೆ ಯಾರಿಗೇನು ಸಂಕಟ ಬರುತ್ತದೆ? ಯಾರಿಗೇನು ಹಾನಿಯಾಗುತ್ತದೆ?


ಎಂ. ವಿ. ಭಟ್
''ಶ್ರೀಮಿತ್ತೂರು'', ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

# ಹೀಗೊಂದು ಚಿಂತನೆ

**ಭಾ**ರತದ ಹಳ್ಳಿಗಳಲ್ಲಿ ಜಾತಿಗಳು, ಜಾತಿಭೇದಗಳು, ಸ್ಪಷ್ಟ ನೇರ, ಕ್ರೂರ ಹಾಗೂ ಅಮಾನವೀಯ! ಹಿಂಸೆಯನ್ನು ಸಾಮಾಜಿಕ ಬಹಿಷ್ಕಾರವನ್ನು ನೇರವಾಗಿ ವ್ಯಕ್ತಪಡಿಸಬಲ್ಲದು; ಜಾತಿ ಕಟ್ಟಲೆಗೆ ಬದ್ಧವಾದ ಹಿಂದು ಹಳ್ಳಿಗಳ ನ್ಯಾಯ ಪಂಚಾಯ್ತಿ ಸಹಜವಾಗಿ ದಲಿತರ ವಿರುದ್ಧವಾಗಿಯೇ ತೀರ್ಪು ನೀಡಬಲ್ಲದು; ಪ್ರಶ್ನಾತೀತವಾಗಿ.

ನಗರ ಪ್ರದೇಶಗಳಲ್ಲಿ ಜಾತಿಭೇದದ ತೀವ್ರತೆ ಕಮ್ಮಿ ಎಂದೆನಿಸಿದರೂ ಅದು ಪರೋಕ್ಷವಾಗಿ ಬಹುಮುಖಿ ನೆಲೆಗಳಲ್ಲಿ ಶೋಧಿಸಿ ಜಾತಿಗಳನ್ನು ಕಂಡುಕೊಳ್ಳಬಲ್ಲದು. ಆ ಮೂಲಕ ಬೆರೆಯುವ, ನಿರ್ಲಕ್ಷಿಸುವಂಥ ಸಾಮಾಜಿಕ ಕಟ್ಟುಪಾಡುಗಳು ಚಲನಶೀಲವಾಗಿರುತ್ತವೆ. ವಸತಿ, ಶಾಲೆ, ಕಾಲೇಜು, ಉದ್ಯೋಗಸ್ಥ ಕ್ಷೇತ್ರಗಳಲ್ಲಿ ದಲಿತರು ಮಾನಸಿಕವಾಗಿ ಸವರ್ಣೀಯರ 'ವರ್ತನೆ'ಗಳಿಗೆ 'ಪರಕೀಯ'ರಾಗಿ ಹೆಜ್ಜೆ ಹೆಜ್ಜೆಗೂ ಬಾಳುವಂತಾಗಿದ್ದಾರೆ. ಆ ಪರಕೀಯತೆಯಿಂದ ಪಾರಾಗಲು ಸ್ಪೃಶ್ಯ ಜಾತಿ ಹೆಸರಿನೊಂದಿಗೆ, ಮಾರಮ್ಮ, ಚೌಡಮ್ಮ, ಗಂಗಮ್ಮನಂಥ ದೇವತೆಗಳನ್ನು ದೂರತಳ್ಳಿ, ವೈದಿಕ ದೈವವನ್ನು, ಅಲ್ಲಿಯ ಆಚರಣೆಯನ್ನು ಪಾಲಿಸುತ್ತಿದ್ದಾರೆ. ಈ ಕೃತಕ ತ್ರಿಶಂಕುಸ್ಥಿತಿಯು ದಲಿತರನ್ನು ಬಹುಕಾಲ ಕಾಪಾಡದು. ಅವಮಾನಗೊಂಡ ಸಂದರ್ಭದಲ್ಲಿ ಹಿಂದುಜಾತಿಗಳ ಅಲೆಗಳಿಗೆ ಸಿಕ್ಕ ದಲಿತ ಕೇರಿಗಳಿಗೆ ಎಸೆಯಲ್ಪಡುತ್ತಾರೆ. ಅಥವಾ ಮತಾಂತರಗೊಳ್ಳುತ್ತಾರೆ. ಮೀಸಲಾತಿ ವಿರುದ್ಧದ ಚಳುವಳಿಯಲ್ಲಿ ಮೇಲ್ಜಾತಿಗಳು... ಆರ್ಥಿಕ ಬಲ ಇರುವ ದಡ್ಡ ಜಾತಿವಾದಿಗಳು ಕೂಡ ಪ್ರತಿಭೆ, ಅರ್ಹತೆಗಳ ಹೆಸರಿನಲ್ಲಿ ದೇಶಾದ್ಯಂತ ಚಳುವಳಿ ರೂಪಿಸಬಲ್ಲರು. ಪ್ರಭಾವಿ ಮಾಧ್ಯಮಗಳು ವ್ಯವಸ್ಥಿತವಾಗಿ, ನೇರವಾಗಿ ಮೇಲ್ಜಾತಿಗಳ ಪರ ನಿಲ್ಲಬಲ್ಲವು. ದಲಿತರ ಶಿಕ್ಷಣ ಹಾಗೂ ಉದ್ಯೋಗ ಮೀಸಲಾತಿಯನ್ನು ಬಗ್ಗು ಬಡಿಯಲು 'ಏಕಲವ್ಯ ಪ್ರತಿಭೆ'ಯನ್ನು ಕೊಂದ ಹಿಂದುತ್ವವು ಮನುಸ್ಮೃತಿಯನ್ನು, ಖಾಸಗೀಕರಣವನ್ನು ಬೆಂಬಲಿಸುತ್ತಿದೆ. ಹಾಗೆ ಮೀಸಲಾತಿಯನ್ನು ದುರ್ಬಲಗೊಳಿಸಲು ನೂರಾರು ಕೆಳ ಸ್ಪೃಶ್ಯಜಾತಿಗಳನ್ನು ಅಸ್ಪೃಶ್ಯರ ಗುಡಿಸಲಿಗೆ ನುಗ್ಗಿಸಿಬಿಟ್ಟಿದೆ! ನಾಳೆ ಏನಾಗಬಹುದು?

* * *

ಅಮೆರಿಕಾದ ನೀಗ್ರೊ ಜನಾಂಗವನ್ನು ಅವರ ಬಣ್ಣ, ಶರೀರ ಲಕ್ಷಣಗಳಿಂದ, ಸ್ವಲ್ಪ ಬೆಳ್ಳಗಿದ್ದರೂ ಗುರ್ತಿಸಬಹುದಾಗಿದೆ. ನೀಗ್ರೊಗಳು ಹೊಂದಿರುವಂತಹ ಲಕ್ಷಣಗಳನ್ನು ಭಾರತದ ಅಸ್ಪೃಶ್ಯರು ಹೊಂದಿದ್ದಲ್ಲಿ; ಮೇಲ್ಜಾತಿಯ, ಮಧ್ಯಮ ಜಾತಿಯ ಹಿಂದುಗಳು ಇವರನ್ನು ಒಪ್ಪುವ, ನಿರಾಕರಿಸುವ ಕ್ರಿಯೆ ನೇರವಾಗಿರುತ್ತಿತ್ತು. ದಲಿತರ ಒಗ್ಗೂಡುವಿಕೆಯು ಸುಲಭವಾಗಿರುತ್ತಿತ್ತು. ಹಿಂದುಗಳಿಂದ ನಿತ್ಯವೂ ಬಹುಮುಖಿ ಶೋಷಿತರಾಗಿ ಪರಕೀಯರಾಗಿ ಬದುಕುವ ದಲಿತರ ಮೆದುಳಿನಲ್ಲಿ; ನೀಗ್ರೊಗಳ ಚೆಲುವು ಹಾರಾಡುತ್ತಿದೆ...

ಅಸ್ಪೃಶ್ಯರ ಬಗ್ಗೆ ಪ್ರಾಯಶ್ಚಿತ್ತಭಾವ, ಪಾಪಪ್ರಜ್ಞೆ ಮೂಡಲು ಗಾಂಧೀಜಿ ಕಾರಣ ಎನ್ನುವ ಪೇಜಾವರರಂಥ ಬಾಯಿಪಾಠದ ಧರ್ಮಗುರುಗಳು ದಲಿತ ಕೇರಿಗಳ ಮೇಲೆ ರಣಹದ್ದುಗಳಾಗಿ ಹಾರಾಡುತ್ತಾ ಕಬಳಿಸುತ್ತಿದ್ದಾರೆಯೇ ವಿನಾ ಪಾರಿವಾಳಗಳಾಗಿ ಇಳಿದು ಅವರೊಂದಿಗೆ ಬೆರೆತು ಒಡನಾಡಿದವರಲ್ಲ.

ಕರಿಯರನ್ನು ಕ್ರೂರವಾಗಿ ಶೋಷಿಸಿದ್ದರ ಬಗ್ಗೆ ಬಿಳಿಯರಿಗೆ ಪಾಪಪ್ರಜ್ಞೆ ಇತ್ತು. ಅದನ್ನು ನೀಗಿಕೊಳ್ಳಲು ಕರಿಯರ ಒಳಿತಿಗಾಗಿ ದುಡಿದರು. ಕ್ರೈಸ್ತಧರ್ಮ ಗುಲಾಮಗಿರಿಯನ್ನು ಸಮರ್ಥಿಸಲಿಲ್ಲ. ಹಿಂದುಧರ್ಮ ಅಸ್ಪೃಶ್ಯತೆಯನ್ನು ಸಮರ್ಥಿಸಿಕೊಂಡಿದೆ. ತಮ್ಮ ಆರ್ಥಿಕ ಉನ್ನತಿಗಾಗಿ ಕರಿಯರನ್ನು ಬಳಸಿಕೊಂಡ ಬಿಳಿಯರು ತಮ್ಮ ಸಾಮಾಜಿಕ ಬದುಕಿನಲ್ಲಿ ಕರಿಯರನ್ನು ಅಸ್ಪೃಶ್ಯರನ್ನಾಗಿ ನಡೆಸಿಕೊಳ್ಳಲಿಲ್ಲ. ಅವರೊಂದಿಗೆ ಉಣ್ಣುತ್ತಿದ್ದರು. ಅವರನ್ನು ಮುಟ್ಟುತ್ತಿದ್ದರು. ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವು ನೀಡುತ್ತಿದ್ದರು. ಒಡನಾಡುತ್ತಿದ್ದರು.

ಬಹಳಷ್ಟು ಚಿಂತಕರ, ಸಂಶೋಧಕರ, ಸಮಾಜಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಜಾತಿಪದ್ಧತಿಯ ಸಂಕೋಲೆಯಿಂದ ಹಿಂದುಧರ್ಮ ಸುರಕ್ಷಿತವಾಗಿ ಉಳಿದುಕೊಂಡಿದೆ. ಅಸಮಾನತೆ, ಜಾತಿಭೇದ, ಮೇಲು ಕೀಳು, ಧಾರ್ಮಿಕ ಕಂದಾಚಾರಗಳು ಹಿಂದುಧರ್ಮಕ್ಕೆ ತಾಯಿಬೇರಿನಂಥ ಭದ್ರ ಅಡಿಪಾಯ ಒದಗಿಸಿವೆ. ಈ ಅಡಿಪಾಯ ಎಂದು ಕುಸಿಯುತ್ತದೆಯೊ ಆ ಕಾಲಕ್ಕೆ ಹಿಂದುಧರ್ಮ ಏನಾಗಿರುತ್ತದೋ!

ಹೆದರಿ ಕಂಗಾಲಾದ ಇಲಿ ತನ್ನ ಜೀವ ಉಳಿಸಿಕೊಳ್ಳಲು ಪರದಾಡುವುದು ಬೆಕ್ಕು ಹಸಿದು ಸಾಯಲಿ ಎಂದಲ್ಲ. ಅಸ್ಪೃಶ್ಯರು ಕೂಡ ಮೇಲ್ಜಾತಿಯ ದೌರ್ಜನ್ಯಕ್ಕೆ ಹೆದರಿ ಕಂಗಾಲಾಗುವುದು; ಜಾತಿ ಕ್ರೌರ್ಯದಿಂದ ಬಿಡಿಸಿಕೊಳ್ಳಲು 'ಹೆಣ'ಗಾಡುವುದು; ಹಿಂದುಧರ್ಮ ಹಸಿದು ಸಾಯಲಿ ಎಂದಲ್ಲ, ದ್ರೋಹ ಬಗೆಯಲೆಂದಲ್ಲ. ಕೇವಲ ವಿಮೋಚನೆಗಾಗಿ! ಅಂದರೆ ಸಮಾನತೆ, ಸ್ವಾಭಿಮಾನ, ಜಾತ್ಯತೀತ ಮೌಲ್ಯಗಳನ್ನು ಪಡೆದುಕೊಳ್ಳಲು! ಆದರೆ –

ಇಂತಹ ಮಾನವೀಯ ಪ್ರಯತ್ನ; ಅಮಾನವೀಯ ಮನಃಸ್ಥಿತಿಯ ಎದುರು ನಿರರ್ಥಕಗೊಂಡಾಗ ಮಾನವೀಯ ಮೌಲ್ಯಗಳನ್ನು ಆದರಿಸುವಂಥ ಧರ್ಮಗಳಿಗೆ ದಲಿತರು ಸಾಮೂಹಿವಾಗಿ ಮತಾಂತರಗೊಳ್ಳುತ್ತಾರೆ. ಪ್ರಕೃತಿಯ ನಿಯಮದಲ್ಲಿ ಪ್ರಾಣಿ ಪಕ್ಷಿಗಳು ನೀರಿಗಾಗಿ, ಆಹಾರಕ್ಕಾಗಿ, ಸುರಕ್ಷತೆಗಾಗಿ ಅಂತಹ ಸ್ಥಳಗಳನ್ನು ಹುಡುಕಿಕೊಳ್ಳುತ್ತವೆ. ದಲಿತರು ಕೂಡ ಅಂತಹ ನೆಲೆಗಳನ್ನು ಇಸ್ಲಾಂ, ಕ್ರೈಸ್ತ, ಬೌದ್ಧ, ಸಿಖ್ ಧರ್ಮಗಳಲ್ಲಿ ಕಂಡುಕೊಳ್ಳುತ್ತಿದ್ದಾರೆ. ಹೊಟ್ಟೆಗೆ ಅನ್ನ ಉಣ್ಣುವವರು ಇದನ್ನು ಖಂಡಿತಾ ತಪ್ಪೆನ್ನಲಾರರು. ಆದರೆ ಅಲ್ಲೂ ಅವರ ಪಾಡೇನು?

* * *

ಬ್ರಾಹ್ಮಣಪುರಂನಲ್ಲಿ ಹುಟ್ಟಿದ ಕೆಟ್ಟ ಜಾತಿ ನೀರು; ಜಾತಿ ಶ್ರೇಣಿಗೆ ಅನುಗುಣವಾಗಿ ಬಳಸಿ, ಇನ್ನಷ್ಟು ಮಲಿನಗೊಂಡ

ವೈಚಾರಿಕ ದೃಷ್ಟಿಕೋನಕ್ಕೆ ಪುರೋಹಿತಶಾಹಿ ಚಿಂತನೆಯನ್ನು ಸಿಕ್ಕಿಸಿದರೆ, ಅಲ್ಲಿಂದ ಉದುರುವುದು ಬೇರೆ ಬೇರೆ ಮಧ್ಯಮ ಜಾತಿಗಳನ್ನು ಅದು ಹೇಗೆ ಬಳಸಿ ಶೋಷಿಸಿತೆಂಬ ವಿವರಗಳು. ಹಾಗೆ ಶೂದ್ರ ಜಮೀನ್ದಾರಿ ವರ್ಗವನ್ನು ಸಿಕ್ಕಿಸಿದರೆ ಸಿಗುವುದು, ಆರ್ಥಿಕ ಹಾಗೂ ಜಾತಿ ಶೋಷಣೆಯ ಹಸಿ ಹಸಿ ವಿವರಗಳು. ಇವರ ಹೊಲ ಗದ್ದೆ, ತೋಟಗಳಲ್ಲಿ ಜೀತದಾಳುಗಳಾಗಿ, ಕೂಲಿ ಕಾರ್ಮಿಕರಾಗಿ ದುಡಿಯುವಂತಹ ಹೊಲೆ ಮಾದಿಗರೆಂಬ ದಲಿತರು ಹೊಂದುವ ಜಾತಿ ಅವಮಾನ, ಸಾಮಾಜಿಕ ಬಹಿಷ್ಕಾರ, ಆರ್ಥಿಕ ಶೋಷಣೆ ಅತ್ಯಾಚಾರ, ಕೊಲೆ, ಭೂಸಂಬಂಧ, ರಾಜಕೀಯ ಸವಲತ್ತುಗಳನ್ನು ಕಿತ್ತುಕೊಳ್ಳುವುದು ಎಲ್ಲವೂ ಈಗಲೂ ಚಾಲ್ತಿಯಲ್ಲಿವೆ.

ಸಿ.ರಾಮಸ್ವಾಮಿ

ನೀರು ಶೂದ್ರಕೇರಿ ದಾಟಿ ದಲಿತ ಕೇರಿಗೆ ನುಗ್ಗಿದಾಗ ಬಳಸಲು ಸಾಧ್ಯವೇ ಇಲ್ಲದಷ್ಟು ಹದಗೆಟ್ಟಿರುತ್ತದೆ. ಶೇಕಡ ೮೦ರಷ್ಟು ಹಳ್ಳಿಗಳ ದಕ್ಷಿಣ ಹೊರಭಾಗದ ತಗ್ಗಿನಲ್ಲಿರುವ, ನಗರದ ಅಂಚಿನಲ್ಲಿರುವ ಅಸ್ಪೃಶ್ಯರ ಕೇರಿಯಲ್ಲಿ ಇದೇ ಕೊಚ್ಚೆನೀರು ನಿಂತಿರುತ್ತದೆ, ಅಸಾಧ್ಯ ವಾಸನೆಯೊಂದಿಗೆ!

'ಇದನ್ನು ನಿವಾರಿಸಿ' ಎನ್ನುವ ದಲಿತರ ಸೊಲ್ಲಿಗೆ ಪ್ರತಿಯಾಗಿ ವೈದಿಕ ಜಗದ್ಗುರುಗಳು, ಧರ್ಮಗುರುಗಳು, ರಾಜಕಾರಣಿಗಳು, ಜ್ಞಾನಪೀಠಗಳು, ಸಾಹಿತಿಗಳು, ಸಂಶೋಧಕರು, ಪತ್ರಕರ್ತರು, ಚಲನಚಿತ್ರ ನಿರ್ಮಾಪಕರು, ಬಿ.ಜೆ.ಪಿ. ಆರೆಸ್ಸೆಸ್‌ಗಳು ದಲಿತಕೇರಿಯ ಮಲಿನತೆಯನ್ನು ನಿವಾರಿಸಿದರೆ ಸಾಕು ಎಂದು ನಿರ್ಧರಿಸಿದ್ದಾರೆ.

ವಸ್ತುಸ್ಥಿತಿ ಏನೆಂದರೆ ಕೆಟ್ಟ ನೀರು ಹುಟ್ಟುವ ಮೂಲ ಕೇಂದ್ರ ಇರುವುದೇ ಅಗ್ರಹಾರದಲ್ಲಿ! ಇದರ ಹುಟ್ಟು, ಹರಿಯುವಿಕೆಗಳನ್ನು ನಿಲ್ಲಿಸಬೇಕಿದೆ. ಬ್ರಾಹ್ಮಣ ತುದಿಯಿಂದ ಅಸ್ಪೃಶ್ಯತೆಯ ತಳದ ತನಕವೂ ಒಂದೇ ಗುಣಮಟ್ಟದ ಜಲವು ಹರಿಯಬೇಕಿದೆ. ಇಂತಹ ತಿಳಿಜಲದ ವ್ಯವಸ್ಥೆಯು ಬುದ್ಧನ ಚಿಂತನೆಯಲ್ಲಿದೆ. ಬೌದ್ಧಧರ್ಮದಲ್ಲಿದೆ.

''ಕೊಳಚೆ ಜಾತಿ ನೀರನ್ನು ನಿಲ್ಲಿಸಿ; ಪರ್ಯಾಯ 'ತಿಳಿಜಲ ಹುಟ್ಟ'ನ್ನು ಕಂಡುಕೊಳ್ಳಿ ಎಂದು ಚಾರ್ವಾಕ, ಬೃಹಸ್ಪತಿ, ವೇನ, ಬುದ್ಧ, ಅಲ್ಲಮಪ್ರಭು, ಬಸವಣ್ಣ, ಮಂಟೇಸ್ವಾಮಿ, ಅಂಬೇಡ್ಕರ್, ವಿವೇಕಾನಂದ, ಜ್ಯೋತಿ ಬಾ ಫುಲೆ, ಲೋಹಿಯಾ, ಕುವೆಂಪು, ನಾಮ್‌ದೇವ್, ಢಸಾಳ, ದೇವನೂರ ಮಹಾದೇವರಂಥ ಮಾನವೀಯ ಮನಸ್ಸುಗಳು, ಅಸಂಖ್ಯಾತ ದಲಿತರು, ಪ್ರಗತಿಪರ - ಜಾತ್ಯತೀತ ಚಿಂತಕರು ಕಾಲಕಾಲಕ್ಕೂ ಹೇಳುತ್ತಾ ಬಂದರೂ ಜಾತಿಭೇದವು ಆಧುನಿಕ ವೇಷ ಧರಿಸಿ, ಬಹುಮುಖಿ ನೆಲೆಯಲ್ಲಿ ವಿಸ್ತರಿಸುತ್ತಿದೆ. ಅಸ್ಪೃಶ್ಯತೆಯೆಂಬ ನರಕ ಸ್ಥಿತಿಗೆ ಮೂಲ ಜನಕರು ತಾವೆಂಬ ಸತ್ಯಕ್ಕೆ ಪುರೋಹಿತಶಾಹಿ ವರ್ಗ ಪೂರ್ಣ ಕುರುಡಾಗಿದೆ. ತುಳಿತಕ್ಕೆ ಒಳಗಾಗಿದ್ದ ಶೂದ್ರ ಜಾತಿಗಳಾದ ಒಕ್ಕಲಿಗ, ಲಿಂಗಾಯತ, ಕುರುಬ, ದೇವಾಂಗ, ಉಪ್ಪಾರ, ಈಡಿಗ, ಆಚಾರಿ... ಮುಂತಾದ ಜಾತಿಯವರು ಜಾತಿ ಪದ್ಧತಿಯನ್ನು ಕುರುಡಾಗಿ ಉತ್ತೇಜಿಸುತ್ತಿದ್ದಾರೆ, ಮತ್ತು ಹಿಂಸೆ ಮೂಲಕ ಸಿಂಗರಿಸುತ್ತಿದ್ದಾರೆ, ದಲಿತರನ್ನು ತುಳಿಯುತ್ತಾ ಮೇಲರಿಮೆ ಪಡೆದುಕೊಳ್ಳುತ್ತಿದ್ದಾರೆ. ಜಾತಿಯ ಕ್ರೌರ್ಯ ಯಾವ ಮಟ್ಟದ್ದೆಂದರೆ, ಕೆಲವು ವರ್ಷಗಳ ಹಿಂದೆ ಕ್ಷೌರಿಕ ಜನಾಂಗದವರು ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕಿದ್ದರು. ಇಂತಹ ಅಸ್ತ್ರಗಳನ್ನು ಪ್ರಯೋಗಿಸಲು ಹಿಂದುಧರ್ಮದ ಒಪ್ಪಿಗೆ ಇದೆ.

ಜಾತಿ ಪದ್ಧತಿ ಅದೆಷ್ಟು ಆಳವಾಗಿ ಇಳಿದು ಹರಡಿ ಕೊಂಡಿದೆಯೆಂದರೆ, ಹಳ್ಳಿಗಳು ಮತ್ತು ದೇವಸ್ಥಾನಗಳು ಜಾತಿ ಶ್ರೇಷ್ಠತೆಯನ್ನು ಭದ್ರಗೊಳಿಸುವ ಕೇಂದ್ರಗಳಾಗಿವೆ. ದೇಶಾದ್ಯಂತ ಇರುವ ಎರಡು ಲಕ್ಷಕ್ಕೂ ಮೇಲ್ಪಟ್ಟ ದೇವಸ್ಥಾನಗಳು, ಹಲವು ಸಾವಿರ ಮಠಗಳ ಪೂಜಾ ಭಾಷೆ ಸಂಸ್ಕೃತ! ಪೌರೋಹಿತ್ಯ, ಜ್ಯೋತಿಷ್ಯ, ಮದುವೆ, ಶ್ರಾದ್ಧ, ಜಾತಕ, ಶುಭಕಾರ್ಯಗಳ ಅಧಿಕೃತ ಭಾಷೆ ಸಂಸ್ಕೃತ! ಸಂಸ್ಕೃತವನ್ನು ಕಲಿತು ಪೌರೋಹಿತ್ಯದ ಮೂಲಕ ಹಣ ಸಂಪಾದಿಸುವ ಅರ್ಹತೆ ಹಾಗೂ ಪ್ರತಿಭೆ ಇರುವುದು ಬ್ರಾಹ್ಮಣರಿಗೆ ಮಾತ್ರ. ಕನಿಷ್ಠ ಒಂದು ಕೋಟಿಯಷ್ಟು ಪುರೋಹಿತಶಾಹಿಗಳು ವಿವಿಧ ದೈವದ ಉದ್ಯೋಗಿಗಳು!

ಅವರು ಆರ್ಥಿಕವಾಗಿ ನಿತ್ಯಹರಿದ್ವರ್ಣ ಕ್ಷೇತ್ರಗಳನ್ನು ಆಯ್ದು ಕೊಂಡಿದ್ದಾರೆ!!

ವೈಚಾರಿಕ ದೃಷ್ಟಿಕೋನಕ್ಕೆ ಪುರೋಹಿತಶಾಹಿ ಚಿಂತನೆಯನ್ನು ಸಿಕ್ಕಿಸಿದರೆ, ಅಲ್ಲಿಂದ ಉದುರುವುದು ಬೇರೆ ಬೇರೆ ಮಧ್ಯಮ ಜಾತಿಗಳನ್ನು ಅದು ಹೇಗೆ ಬಳಸಿ ಶೋಷಿಸಿತೆಂಬ ವಿವರಗಳು. ಹಾಗೆ ಶೂದ್ರ ಜಮೀನ್ದಾರಿ ವರ್ಗವನ್ನು ಸಿಕ್ಕಿಸಿದರೆ ಸಿಗುವುದು, ಆರ್ಥಿಕ ಹಾಗೂ ಜಾತಿ ಶೋಷಣೆಯ ಹಸಿ ಹಸಿ ವಿವರಗಳು. ಇವರ ಹೊಲ ಗದ್ದೆ, ತೋಟಗಳಲ್ಲಿ ಜೀತದಾಳುಗಳಾಗಿ, ಕೂಲಿ ಕಾರ್ಮಿಕರಾಗಿ ದುಡಿಯುವಂತಹ ಹೊಲೆ ಮಾದಿಗರೆಂಬ ದಲಿತರು ಹೊಂದುವ ಜಾತಿ ಅವಮಾನ, ಸಾಮಾಜಿಕ ಬಹಿಷ್ಕಾರ, ಆರ್ಥಿಕ ಶೋಷಣೆ, ಅತ್ಯಾಚಾರ, ಕೊಲೆ, ಭೂಸಂಬಂಧ ಕಿರುಕುಳ, ರಾಜಕೀಯ ಸವಲತ್ತುಗಳನ್ನು ಕಿತ್ತುಕೊಳ್ಳುವುದು ಎಲ್ಲವೂ ಈಗಲೂ ಚಾಲ್ತಿಯಲ್ಲಿವೆ.

ಮನುಸ್ಮೃತಿಯ ಕಾಲದಲ್ಲಿ ಶೂದ್ರರಾಗಿದ್ದ ಒಕ್ಕಲಿಗ, ಕುರುಬ, ಲಿಂಗಾಯತ, ಈಡಿಗ, ದೇವಾಂಗಗಳಂಥ ನೂರಾರು ಶೂದ್ರ ಜಾತಿಗಳು ಮಧ್ಯಮ ಜಾತಿಗಳಾಗಿ ಬಡ್ತಿ ಹೊಂದಿವೆ. ಇವರ ಮಠ ಹಾಗೂ ದೇವಸ್ಥಾನಗಳಲ್ಲಿ ಸಂಸ್ಕೃತ ಪಠನ ಹಾಗೂ ವೇದಾಧ್ಯಯನ ಶಾಲೆಗಳಿವೆ. ಸಂಸ್ಕೃತ ಓದುವ, ಕೇಳುವ ಶೂದ್ರರ ಕಿವಿ ನಾಲಗೆಗಳಿಗೆ ಯಾವ ತೊಂದರೆಯೂ ಇಲ್ಲ! ಬ್ರಾಹ್ಮಣೀಕರಣಗೊಂಡ ಮಾಂಸಾಹಾರಿ ಶೂದ್ರಮಠಗಳು, ಲಿಂಗಾಯತ ಮಠಗಳು ಶಾಲಾ ಮಕ್ಕಳಿಗೆ ಮಧ್ಯಾಹ್ನದ ಹೊತ್ತು ಮೊಟ್ಟೆ ನೀಡುವುದನ್ನು ವಿರೋಧಿಸಿದ್ದವು.

ಖ್ಯಾತ ಚಿಂತಕ ರಹಮತ್ ತರೀಕೆರೆ ದಾಖಲಿಸುತ್ತಾರೆ: ''ಬ್ರಾಹ್ಮಣೀಕರಣಗೊಳಿಸುವವರ ಉದ್ದೇಶ ನೇರ ಹಾಗೂ ಸ್ಪಷ್ಟ, ತಮ್ಮ ವಿರುದ್ಧ ಏಳುವ ವಿದ್ರೋಹಗಳನ್ನು ನೇರವಾಗಿ ಯುದ್ಧಮಾಡದೆ ಮಣಿಸುವುದು; ಪ್ರತಿರೋಧಗಳು ಏಳದಂತೆ ರಿಯಾಯಿತಿ ಕೊಟ್ಟು ಪಳಗಿಸಿಬಿಡುವುದು; ತನ್ನಂತೆ ಆಗಗೊಡದೆಯೂ ತನ್ನ ರೀತಿಯಲ್ಲಿ ಆಲೋಚನೆ ಮಾಡುವ ವಿಧೇಯ ತಳಿಯನ್ನು ನಿರ್ಮಿಸುವುದು.''




ಕುರುಬ ಜಾತಿಯ ಕನಕದಾಸನು ಕೆಳಜಾತಿ ಪರಂಪರೆಯ ಎಲ್ಲಮ್ಮ, ಮಾರಮ್ಮ, ದುರ್ಗಿ, ಚೌಡಮ್ಮ, ಮೈಲಾರ, ಮಸಣಿ ಭೈರಪ್ಪ ಇವರಂಥ ಗ್ರಾಮೀಣ ದೈವಗಳನ್ನು ಠಕ್ಕು ದೇವರುಗಳೆಂದು ತಿರಸ್ಕರಿಸಿ ವೇದಶಾಸ್ತ್ರ ಬಲ್ಲ ಕನಕದಾಸನಾಗಿ ವೈದಿಕ ಪರಂಪರೆಯ ಶ್ರೀಕೃಷ್ಣನ ಭಕ್ತನಾಗುತ್ತಾನೆ. ಕೆಳಜಾತಿಯ ಕನಕನಿಗೆ ಉಡುಪಿ ಕೃಷ್ಣ ದೇವಾಲಯದೊಳಗೆ ಪ್ರವೇಶ ಸಿಗಲಿಲ್ಲ. 'ಕನಕನ ಕಿಂಡಿ' ಬಳಿ ಹೊರಗೆ ನಿಲ್ಲಬೇಕಾಯಿತು. ತನ್ನ ಸಂಸ್ಕೃತಿಯ ಧಾರ್ಮಿಕ ನಂಬಿಕೆಗಳನ್ನು ಕನಿಷ್ಠವೆಂದು ಧಿಕ್ಕರಿಸಿದ ಕನಕದಾಸನನ್ನು ಪ್ರತಿಷ್ಠಿತ ಯಜಮಾನ ಸಂಸ್ಕೃತಿ ಒಳಕ್ಕೂ ಬಿಡದೆ ಹೊರಗಡೆಯೇ ನಿಲ್ಲಿಸಿಬಿಟ್ಟಿತು. 'ಶೂದ್ರರಿಗೆ ದೇವಸ್ಥಾನದೊಳಕ್ಕೆ ಪ್ರವೇಶವಿಲ್ಲ' ಎನ್ನುತ್ತವೆ ಹಿಂದು ಧರ್ಮದ ವೇದ ಶಾಸ್ತ್ರ ಪುರಾಣಗಳು.

ಕ್ರಿ. ಶ. ೧೫೦೮ - ೧೬೦೬ರ ಅವಧಿಯಲ್ಲಿ ಜಾರಿಯಲ್ಲಿದ್ದ ಈ ಸಾಮಾಜಿಕ ಅವಮಾನವನ್ನು, ಕೆಲವು ವರ್ಷಗಳ ಹಿಂದೆ ಧ್ವಂಸಗೊಂಡ ಕನಕಗೋಪುರದ ಅವಮಾನವನ್ನು ಕುರುಬ ಸಮುದಾಯವು ಕನಕದಾಸನಿಗೆ ಮಾತ್ರ ಸೀಮಿತಗೊಳಿಸಿದಂತೆ ತಣ್ಣಗೆ ಪ್ರತಿಕ್ರಿಯಿಸಿತು. ಸಾಮಾಜಿಕ ಎಚ್ಚರದೊಂದಿಗೆ ಪ್ರಶ್ನಿಸುವ ವೈಚಾರಿಕ ಹಕ್ಕನ್ನೂ ಕಾಯ್ದಿಟ್ಟುಕೊಂಡಲ್ಲಿ, ಪ್ರತಿಭಟನೆಯ ಕಾವು ತಣ್ಣಗಾಗಿ ಶರಣಾಗತಿ ಸ್ಥಿತಿಗೆ ತಲುಪಲಾರದು.

* * *

ಬ್ರಿಟಿಷರ ಆಳ್ವಿಕೆಯಿಂದ, ಮುಖ್ಯವಾಗಿ ದಲಿತರಲ್ಲಿ ನಂತರ ಶೂದ್ರರಲ್ಲಿ, ಸಾಮಾಜಿಕ ಎಚ್ಚರದ ಹೋರಾಟದ ಕಿಚ್ಚು ಬಹುಮುಖಿ ನೆಲೆಯಲ್ಲಿ ಮೂಡಿತು. ಬ್ರಿಟಿಷರು ಬಾರದಿದ್ದಲ್ಲಿ ನಾನು ಬ್ರಾಹ್ಮಣ ಹಿತ್ತಲಿನಲ್ಲಿ ಸಗಣಿ ಎತ್ತುವ ಕಾಯಕ ಮಾಡಿಕೊಂಡಿರಬೇಕಾಗಿತ್ತೆಂದು ರಾಷ್ಟ್ರಕವಿ ಕುವೆಂಪು ಅವರು ನುಡಿದಿದ್ದರು. ಇಂತಹ ಎಚ್ಚರ ಹಿಂದು ಹಾಗೂ ಮುಸ್ಲಿಂ ರಾಜರ ಆಳ್ವಿಕೆಯಲ್ಲಿ ಕಂಡುಬರಲಿಲ್ಲ.

ಶೂದ್ರ ಜಾತಿಯ ಬದಲು ಅಸ್ಪೃಶ್ಯರಿಗೆ ದೇವಸ್ಥಾನ ಪ್ರವೇಶವಿಲ್ಲ ಎಂಬ ಧಾರ್ಮಿಕ ನಿಷೇಧವನ್ನು ಹಿಂದು ಧರ್ಮಗುರುಗಳು ಹಿಂದು ಧರ್ಮ ಸಮ್ಮತವಾಗಿ ಜಾರಿಗೊಳಿಸಿದ್ದಾರೆ. ಭಾರತದ ಹಳ್ಳಿಗಳು ರೂಢಿಗತವಾಗಿ ಜಾತಿಪದ್ಧತಿಯ ಕೋಟೆಗಳು. ಇಲ್ಲಿನ ದೇವಾಲಯಕ್ಕೆ ಅಸ್ಪೃಶ್ಯರ ಪ್ರವೇಶವನ್ನು ಸ್ಪಷ್ಟವಾಗಿ ನಿರಾಕರಿಸಲಾಗಿದೆ. ಜಾತಿ ಲಕ್ಷ್ಮಣರೇಖೆಯನ್ನು ಮೀರಿ ದೇವಾಲಯವನ್ನು ಪ್ರವೇಶಿಸುವ ಅಸ್ಪೃಶ್ಯರನ್ನು ಹಿಂಸಾತ್ಮಕವಾಗಿ ದಂಡಿಸುವಂಥ ಹಕ್ಕನ್ನು ಹಿಂದು ಧರ್ಮವು ಶೂದ್ರರಿಗೆ ನೀಡಿದೆ. ಇದನ್ನೇ ಮೇಲ್ಜಾತಿಯ ಮತ್ತು ಭೂಮಾಲಿಕ ವರ್ಗದ ನಾಲಗೆಗಳು... ಅನ್ಯೋನ್ಯತೆ, ಹೊಂದಾಣಿಕೆ... ಎಂಬಂಥ ಸುಳ್ಳುಗಳಿಂದ ದಲಿತರ ಮೇಲಿನ ಸಾಮಾಜಿಕ ಹಾಗೂ ಆರ್ಥಿಕ ಕ್ರೌರ್ಯಗಳನ್ನು ಮುಚ್ಚುತ್ತಿರುತ್ತವೆ.

ಪುರಿ ಶಂಕರಾಚಾರ್ಯರು 'ಹರಿಜನ (ದಲಿತ)ರಿಗೆ ದೇವಸ್ಥಾನ ಪ್ರವೇಶವಿಲ್ಲ' ಎಂದಿದ್ದ ಆಜ್ಞೆಯನ್ನು, ಬಹುಸಂಖ್ಯಾತ ಆಸ್ತಿಕ ಸಮುದಾಯ ಒಪ್ಪಿಕೊಂಡಿತು, ಪ್ರಗತಿಪರ, ಜಾತ್ಯತೀತ ಚಿಂತಕರು ಟೀಕಿಸಿದ್ದರು. ಅಥೆಂಟಿಕ್ಕಾಗಿ ಪುರಿ ಶಂಕರಾಚಾರ್ಯರಂಥವರನ್ನು ತರಾಟೆ ತೆಗೆದುಕೊಳ್ಳಬೇಕಾದ 'ಹಕ್ಕು' ಇರುವುದು ಆಸ್ತಿಕ ಸಮುದಾಯದ ಜಾತಿಗಳಿಗೆ. ಇವರ ಈ ಮೌನ ಏನು ಹೇಳುತ್ತದೆ?

ವೈದಿಕ ಚಿಂತನಾಗಂಗೆಯ ಆಚಾರ್ಯ ಕಲ್ಲುಗಳೂ ಶೂದ್ರಕೇರಿಯೊಳಗಿಂದ ನುಗ್ಗಿ ಬಂದು ದಲಿತಕೇರಿಗಳಿಗೆ ಬಡಿಯಲು ಸ್ವತಃ ಶಂಕರಾಚಾರ್ಯರಂಥವರು ಕಾರಣರಲ್ಲ. ಇವರಂಥವರನ್ನು ಹಾಗೆ ದಲಿತರ ವಿರುದ್ಧ ಅಮಾನವೀಯರನ್ನಾಗಿ ವರ್ತಿಸುವಂತೆ 'ಪಳಗಿಸಿಬಿಟ್ಟ' ಹಿಂದು ಧರ್ಮದ ಕ್ರೂರ ದೈವೀಸ್ವರೂಪದ ಜಾತಿ ಪದ್ಧತಿಯನ್ನು ನೇರ ಹೊಣೆಗಾರನನ್ನಾಗಿಸಬೇಕಿತ್ತು. ಇದನ್ನು ಬಿಟ್ಟು ಪುರಿ ಶಂಕರಾಚಾರ್ಯರನ್ನು ಬೈದರೆ ಏನು ಪ್ರಯೋಜನ ? ಕೊಂಬೆ ರೆಂಬೆಗಳನ್ನು ತಾತ್ಕಾಲಿಕವಾಗಿ ಕತ್ತರಿಸಿದರೆ ಏನು ಲಾಭ ? ಅವು ಮತ್ತೆ ಚಿಗುರಲಾರವೆ ? ವಿಷಯುಕ್ತ ಮೂಲಬೇರನ್ನು ಕತ್ತರಿಸುವಂಥ ಮಾನವೀಯ ಸವಾಲಿನತ್ತ ಚಲಿಸುವುದು ಬಹುಮುಖ್ಯ.

ಈ ಸಾಧ್ಯತೆಯ, ನಿರಂತರ ಶ್ರಮದ, ಬದಲಾವಣೆಯ ದಿಕ್ಕಿನ ಈ ಸವಾಲನ್ನು ಹಿಂದು ಆಸ್ತಿಕ ಸಮುದಾಯ ನಡೆಯಲ್ಲೂ ಮತ್ತು ನುಡಿಯಲ್ಲೂ ಕೈಗೆತ್ತಿಕೊಳ್ಳಬಲ್ಲದೇ ?! ಒಬ್ಬ ವ್ಯಕ್ತಿ ಜಾತಿಕಾರಣದಿಂದ ಪಡೆಯುವ ಅವಮಾನದ ಅತ್ಯಂತ ಕೆಳಮಟ್ಟವೆಂದರೆ ಅಸ್ಪೃಶ್ಯತೆ ಮಾತ್ರ ! ಬಡತನವೂ ಅಲ್ಲ.

ಸನಾತನ ಹಿಂದೂ ಧರ್ಮದಲ್ಲಿ ನಂಬಿಕೆ, ಶ್ರದ್ಧೆ ಇದ್ದ ಗಾಂಧೀಜಿ, ದಲಿತರಿಗೆ ಉಪದೇಶ ನೀಡುತ್ತ, ''ಗ್ರಾಮೀಣ ಸಂಸ್ಕೃತಿ, ಹಳ್ಳಿಯ ಬದುಕು ಅತ್ಯುತ್ತಮ. ಇಲ್ಲಿನ ಭೂಮಾಲಿಕರು ಧರ್ಮದರ್ಶಿಗಳಂತೆ. ಹಳ್ಳಿಗಳಿಗೆ ಹರಿಜನರು ಹಿಂದಿರುಗಬೇಕು. ಅಸ್ಪೃಶ್ಯತೆಯ ಬಗ್ಗೆ ಸವರ್ಣೀಯ ಹಿಂದುಗಳ ಮನಃಪರಿವರ್ತನೆಯಾಗುವ ತನಕ ತಾಳ್ಮೆಯಿಂದ ಕಾಯಬೇಕು'' ಎನ್ನುತ್ತಿದ್ದರು.

ಅಸ್ಪೃಶ್ಯತೆಯ ಕರಾಳತೆಯಲ್ಲಿ ಸ್ವತಃ ಬೆಂದುಹೋಗಿದ್ದ ಬಿ. ಆರ್. ಅಂಬೇಡ್ಕರ್ ''ಗ್ರಾಮೀಣ ಪ್ರದೇಶದ, ಭೂಮಾಲಿಕರ ಕ್ರೌರ್ಯದಿಂದ ಬಿಡುಗಡೆ ಹೊಂದಲು ದಲಿತರಿಗೆ ನಗರ ವಲಸೆ ಸೂಕ್ತವಾಗಿದೆ'' ಎನ್ನುತ್ತಿದ್ದರು. ಹಾಗೆ ''ಅಸ್ಪೃಶ್ಯತೆಯ ವಿರುದ್ಧ ಈ ಸುಧಾರಕರ ಹರಿತರಹಿತ ತೆಳು ಬೋಧನೆಯಿಂದ ಹಿಂದುಗಳಲ್ಲಿ ಪಾಪಪ್ರಜ್ಞೆ ಮೂಡಿ, ನೈತಿಕ ಪರಿವರ್ತನೆ ಉಂಟಾಗಿ, ಅವರಲ್ಲಿ ವಿಮೋಚನಾ ಶಕ್ತಿ ಜಾಗೃತಗೊಳ್ಳುತ್ತದೆ ಎನ್ನುವುದು ಅಸ್ಪೃಶ್ಯರ ಸಮುದಾಯದ ದಾರಿ ತಪ್ಪಿಸಲು ಹಿಂದೂ ಧರ್ಮೀಯರು ಹೆಣೆದ ಕುತಂತ್ರವಾಗಿದೆ'' ಎಂದು ಕಟುವಾಗಿ ವಿಮರ್ಶಿಸಿದ್ದು ಇಂದಿಗೂ ಸತ್ಯವಾಗಿ ನಿಂತಿದೆ.

''ಜಾತಿ ಪದ್ಧತಿಯನ್ನು ಒಡೆದು 'ಜಾತಿವಿನಾಶ' ಮಾಡುವುದು ಅಸ್ಪೃಶ್ಯತೆ ನಿವಾರಣೆಗಿಂತ ಲಕ್ಷ ಪಟ್ಟು ಸುಲಭದ ಹಾದಿ'' ಎನ್ನುವ ಅಂಬೇಡ್ಕರರು ಹಿಂದು ಧರ್ಮವನ್ನು ಉದಾತ್ತ ಧರ್ಮವನ್ನಾಗಿ ಉಳಿಸಲು ಇರುವ ಸುಲಭ ಹಾದಿಯನ್ನು ಹೀಗೆ ಕಟ್ಟಿಕೊಡುತ್ತಾರೆ: ''ಜಾತಿ ವ್ಯವಸ್ಥೆಯನ್ನು ಒಡೆದುಹಾಕುವ ನಿಜವಾದ ವಿಧಾನ ಅಂತರ್ಜಾತಿ ಮದುವೆಯಲ್ಲ, ಸಹಭೋಜನ ವ್ಯವಸ್ಥೆಯಲ್ಲ. ಜಾತೀಯತೆಗೆ ಮೂಲ ಆಧಾರವೆನಿಸಿರುವ ಹಿಂದು ಧಾರ್ಮಿಕ ಕಟ್ಟುಪಾಡುಗಳನ್ನು, ಆ ರೀತಿಯ ಮನೋಧರ್ಮವನ್ನು, ನಾಶಗೊಳಿಸಬೇಕಿದೆ....'' ಎನ್ನುವುದು.

ಬಾಬಾಸಾಹೇಬ್ ಅಂಬೇಡ್ಕರರ ಚಿಂತನೆಯ ಗಂಭೀರತೆಯನ್ನು ವೈದಿಕ ಪರಂಪರೆಯು ಅರ್ಥಮಾಡಿಕೊಳ್ಳಬೇಕಿದೆ. ತಾವು ಪ್ರತಿಪಾದಿಸುವ ಕ್ರೂರ ಜಾತಿವ್ಯವಸ್ಥೆಯ ಪ್ರತ್ಯೇಕತೆಯನ್ನು ತಳದಿಂದ ನಿವಾರಿಸಿಕೊಳ್ಳಬೇಕಿದೆ. ನಿವಾರಿಸಿಕೊಂಡ ಆ ಕಾಲಕ್ಕೆ...;

ಸಾವಿರಾರು ವರ್ಷಗಳಿಂದ ಕಿಟಕಿ ಬಾಗಿಲು ಇಲ್ಲದ ಎಲ್ಲಾ ಜಾತಿಗಳಿಗೂ ಕಿಟಕಿ, ಬಾಗಿಲು, ಮೆಟ್ಟಿಲು, ಸೇತುವೆ ಮೂಡುತ್ತವೆ. ಮಲಿನ ರಹಿತ ನೀರು, ಗಾಳಿ, ಬೆಳಕು, ಆಹಾರ ಎಲ್ಲರಿಗೂ ಲಭ್ಯ. ತನ್ನಷ್ಟಕ್ಕೆ ತಾನೆ ಸ್ವಜಾತಿ ವಿವಾಹ ಕಾನೂನು ಬಾಹಿರ ಹಾಗೂ ಧರ್ಮವಿರೋಧಿ ಕ್ರಮವಾಗಿಬಿಡುತ್ತದೆ. ಎಲ್ಲಾ ಜಾತಿಗಳ ಆಹಾರ ಕ್ರಮವನ್ನು ಗೌರವದಿಂದ ಕಾಣುತ್ತೇವೆ. ದಲಿತರಿಂದ ಬ್ರಾಹ್ಮಣರ ತನಕದ ಎಲ್ಲಾ ಜಾತಿಯ ಅರ್ಚಕರಿಗೆ ಮಾನ್ಯತೆ ಇರುತ್ತದೆ. ಸಹಭೋಜನ ವ್ಯವಸ್ಥೆ ಸಹಜವಾಗಿಬಿಡುತ್ತದೆ.

...ಹೀಗೆ ಆಗಲು ಮೊದಲು, ಸಾವಿರಾರು ವರ್ಷಗಳಿಂದ ಕೋಶಾವಸ್ಥೆಯಲ್ಲೇ ಇರುವ ವೈದಿಕ ಜಾತಿವಾದಿ ಕಂಬಳಿ ಹುಳುಗಳು ಪ್ರಪ್ರಥಮ ಬಾರಿಗೆ ಕೋಶಸೀಳಿ ಚಿಟ್ಟೆಗಳಾಗಬೇಕಿದೆ. ನೇಸರದಂಥ ಬುದ್ಧನ ಮಾನವೀಯತೆಯನ್ನು ಹೀರಿಕೊಳ್ಳಬೇಕಿದೆ. ಮಡಿ ಮೈಲಿಗೆ ಎನ್ನದೆ ಎಲ್ಲಾ ಜಾತಿಗಳ ತೋಟಗಳಲ್ಲಿ ಜಾತಿ ವಿನಾಶವಾಗಬೇಕಿದೆ. ಪರಾಗ ಸ್ಪರ್ಶದಂಥ ಅದ್ಭುತ ಬೆರೆಯುವಿಕೆಯನ್ನು ತಂದುಕೊಡಬೇಕಿದೆ. ಈ ಭವಿಷ್ಯದ ಇಂಡಿಯಾ ಅಪಾರ ಮಾನಸಿಕ ಮಾನವೀಯ ಸಿದ್ಧತೆಯನ್ನು ಶ್ರಮವನ್ನು ನಿರೀಕ್ಷಿಸುತ್ತದೆ.

ಆದರೆ ವೈದಿಕ ಶ್ರೇಷ್ಠತೆಯನ್ನು, ಹಿಂದುತ್ವದ ಹಿಡಿತವನ್ನು ಪ್ರತಿಪಾದಿಸುವ ಆರೆಸ್ಸೆಸ್, ವಿಹಿಂಪ, ಬಿಜೆಪಿಗಳ ನಾಯಕರು, ಧರ್ಮಗುರುಗಳು, ಧಾರ್ಮಿಕ ಮುಖಂಡರು ನಿವಾರಣೆಯಾಗದಂಥ ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ ಕಾರ್ಯಕ್ರಮಗಳಿಗೆ ಆದ್ಯತೆ ನೀಡುತ್ತಿದ್ದಾರೆ. ಜಾತಿಪದ್ಧತಿ ನಿವಾರಣೆಯ ಬಗ್ಗೆ ಬೇಕೆಂದೇ ಮೌನವಾಗಿದ್ದಾರೆ; ಜಾತಿಪದ್ಧತಿಯ ರಕ್ಷಕರಾಗುತ್ತಿದ್ದಾರೆ.

ಕ್ರೈಸ್ತಧರ್ಮದ ಗ್ರಹಾಂ ಸ್ಟೆನ್, ಮದರ್ ತೆರೇಸಾ ತರಹ ಇವರೆಂದೂ ದಲಿತರನ್ನು ಅಸಹಾಯಕರನ್ನು ರೋಗಿಷ್ಠರನ್ನು ಮುಟ್ಟಿ ಅನುಭವಿಸಿದವರಲ್ಲ. ದಲಿತ ಕೇರಿಗಳು ಉಣ್ಣುವ ಆಹಾರವನ್ನು ನೋಡಿ ಅದರ ಪರಿಮಳವನ್ನು ಹೀರಿಕೊಂಡವರಲ್ಲ. 'ಛೀ'... ಎಂದು 'ದೂರ ಸರಿಯುವುದು' ಹಿಂದುತ್ವದ 'ಶ್ರೇಷ್ಠತೆ'ಯಾಗಿದೆ. ದುರಂತವೆಂದರೆ, ವೈದಿಕ ಪರಂಪರೆ ಬಲಾತ್ಕಾರದಿಂದ ಎರಿದ ಅನಿಷ್ಟ ಮೌಢ್ಯಗಳನ್ನು ಕೆಳಜಾತಿಗಳು ಒಪ್ಪಿಕೊಂಡುಬಿಟ್ಟಿವೆ. ಒಂದು ಜಾತಿ ಇನ್ನೊಂದು ಜಾತಿಗಿಂತ ಮೇಲು ಹಾಗೂ ತುಳಿಯಲು ಇನ್ನೊಂದು ಜಾತಿ ಪಾದದ ತಳದಲ್ಲಿ ಇರುವುದು ಹಿಂದುಧರ್ಮದ ಸಿದ್ಧಾಂತವಾಗಿದೆ. ಈ ಕೃತ್ರಿಮ ಶ್ರೇಷ್ಠತೆ ಹಾಗೂ ಕನಿಷ್ಠತೆಯನ್ನು ನಷ್ಟಗೊಳಿಸುವುದಾದರೂ ಹೇಗೆ ? ಪುನಃ 'ಮನುಸ್ಮೃತಿ'ಯನ್ನು ಸಾರ್ವಜನಿಕವಾಗಿ ಸುಟ್ಟು, ೧೯೫೬ರಲ್ಲಿ ಲಕ್ಷಾಂತರ ದಲಿತರೊಂದಿಗೆ ಬೌದ್ಧಧರ್ಮಕ್ಕೆ ಮತಾಂತರಗೊಂಡ ಅಂಬೇಡ್ಕರರ ಮೇಲಿನ ಮಾತುಗಳು ನೆನಪಾಗುತ್ತವೆ.

ಸ್ವಾಮಿ ವಿವೇಕಾನಂದರು ನುಡಿಯುತ್ತಾರೆ: ''ಅಮೆರಿಕಾದಲ್ಲಿ ಕರಿಯರನ್ನು ಶೋಷಿಸುವುದಕ್ಕಿಂತ ಕ್ರೂರವಾಗಿ ಈ ದೇಶದ ಅಸ್ಪೃಶ್ಯರು ಮೇಲ್ಜಾತಿಯವರಿಂದ ಶೋಷಿಸಲ್ಪಟ್ಟಿದ್ದಾರೆ.''

ಖ್ಯಾತ ಸಾಹಿತಿ ದೇವನೂರ ಮಹಾದೇವ ಅವರ 'ಒಡಲಾಳ'ದ ನುಡಿ ಹೀಗಿದೆ: ''ಬ್ರಾಹ್ಮಣಿಕೆಯ ಫಸಲಾದ ಅಸ್ಪೃಶ್ಯತೆಯು ವರ್ಣಭೇದಕ್ಕಿಂತ ಕ್ರೂರ ಹಾಗೂ ಅಮಾನವೀಯ ಪದ್ಧತಿಯಾಗಿದೆ. ಈ ಮೈಲಿಗೆಯನ್ನು ಕಳೆದುಕೊಂಡು ಭಾರತಮಾತೆ ಎಷ್ಟು ಬೇಗ ಶುದ್ಧಿಯಾಗುತ್ತಾಳೋ ಅಷ್ಟು ಒಳ್ಳೆಯದು ದಲಿತರ ಪಾಲಿಗೆ...''

ಸವರ್ಣೀಯರಿಗೆ ಮೀಸಲಾತಿಯ ಬಗ್ಗೆ, ಮುಸ್ಲಿಮರನ್ನು ಕಂಡಷ್ಟೇ ಆಕ್ರೋಶ. ಅಂಬೇಡ್ಕರ್ ಅವರ ಪ್ರತಿಮೆ ಬರಹಗಳನ್ನು ಅವಮಾನಗೊಳಿಸಿ, ನಿಂದಿಸುವಂಥ ದೌರ್ಜನ್ಯ. ಸವರ್ಣೀಯರ ಪ್ರಶ್ನೆ 'ಬಡತನದ ಆಧಾರದ ಮೇಲೆ' ಮೀಸಲಾತಿ ನೀಡಬೇಕೇಂಬುದು. ಇಂತಹ ಪ್ರಶ್ನೆಗಳಿಗೆ ದೇವನೂರ ಮಹಾದೇವ ಅವರು ನೀಡಿದ ಉತ್ತರ: ''ಬಡತನದ ಸಂಕಟ ನಿನಗೆ ಗೊತ್ತಿರಬಹುದು. ಆದರೆ ಅಸ್ಪೃಶ್ಯತೆಯ ನೋವು ಅದರ ಅನುಭವ ನಿನಗೆ ಗೊತ್ತಾ ?'' ಎನ್ನುವಂಥದ್ದು.

ದಲಿತರನ್ನು ತಳಮಟ್ಟದಿಂದ ಹಿಡಿದು ಅವರ ಆರ್ಥಿಕ ಮೇಲ್ಮಟ್ಟದ ತನಕ ಹಿಡಿದು ಅಲ್ಲಾಡಿಸಿ ಕುಗ್ಗಿಸಿಬಿಡುವಂಥದ್ದು ಹಸಿವೆಯಲ್ಲ ಬಡತನವಲ್ಲ. ಮೇಲ್ಜಾತಿಗಳು, ಮಧ್ಯಮಜಾತಿಗಳು ಹಂತ ಹಂತವಾಗಿ ಎಸಗುವ ಅವಮಾನ, ನಿರ್ಲಕ್ಷ್ಯ, ಸಾಮಾಜಿಕ ಬಹಿಷ್ಕಾರ, ಮೂದಲಿಕೆ, ಪ್ರತ್ಯೇಕತೆ ಇಂಥವುಗಳು...

* * *

'ಜಾತಿ ಇಲ್ಲಿನ ವಾಸ್ತವತೆ' ಎಂದಾಕ್ಷಣ ಇದರ ವಿರುದ್ಧ ಧ್ವನಿಯೆತ್ತುವ ಜಾತಿಪದ್ಧತಿಯ ಪೋಷಕರಾದ ಧಾರ್ಮಿಕ ಹಾಗೂ ರಾಜಕೀಯ ಸಂಸ್ಥೆಗಳು ೧೯೧೧ ಹಾಗೂ ೧೯೩೧ರಲ್ಲಿ ಜಾತಿ ಆಧಾರಿತ ಜನಗಣತಿಯನ್ನು ವಿರೋಧಿಸಿದ್ದವು. ಅಸ್ಪೃಶ್ಯತೆ ಇಲ್ಲವೆಂಬುದನ್ನು ಪುರಾವೆ ಸಹಿತ ದಾಖಲು ಮಾಡಲಾಗದೆ ಕಂಗೆಟ್ಟಿದ್ದರು.

೨೦೦೧ರಲ್ಲಿ ದಕ್ಷಿಣ ಆಫ್ರಿಕಾದ ಡರ್ಬನ್ ನಗರದಲ್ಲಿ 'ವಿಶ್ವ ವರ್ಣಭೇದ ವಿರೋಧ ಸಮಾವೇಶ'ವನ್ನು ಏರ್ಪಡಿಸಲಾಗಿತ್ತು. ವಿಶ್ವ ಸಂಸ್ಥೆಯ ಕೋರಿಕೆಗೆ ಪ್ರತಿಯಾಗಿ ಅಂದಿನ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ (ಎನ್.ಡಿ.ಎ) ಸರ್ಕಾರ ''ಭಾರತದಲ್ಲಿ ಯಾವುದೇ ವಿಧದ ಜಾತಿಭೇದಗಳಾಗಲಿ ಅಸ್ಪೃಶ್ಯತೆಯಾಗಲಿ ಇಲ್ಲ. ಇದನ್ನು ೫೦ ವರ್ಷಗಳ ಹಿಂದೆ ತೊಡೆದುಹಾಕಿದ್ದೇವೆ'' ಎನ್ನುವಂತಹ ವರದಿ ನೀಡಿತು.

ತಕ್ಷಣ ಈ ಸುಳ್ಳನ್ನು ದೇಶದ ದಲಿತ ಸಂಘಟನೆಗಳು, ಪ್ರಗತಿಪರ ಚಿಂತಕರು, ಎಡಪಕ್ಷಗಳು, ದಲಿತ ಸಾಹಿತಿಗಳು, ಸಮಾಜ ಶಾಸ್ತ್ರಜ್ಞರು ಬಲವಾಗಿ ಖಂಡಿಸಿದರು. ರಾಷ್ಟ್ರೀಯ ಮಾನವ ಹಕ್ಕು ಆಯೋಗವು ''ಭಾರತದಲ್ಲಿ ಜಾತಿಪದ್ಧತಿ, ಅಸಮಾನತೆ ಹಾಗೂ ಅಸ್ಪೃಶ್ಯತೆ ಇವೆ'' ಎಂದು ಸ್ಪಷ್ಟಪಡಿಸಿತು.

ಯಾಕೆ ಈ ಪುರೋಹಿತಶಾಹಿವರ್ಗದ ರಾಜಕಾರಣಕ್ಕೆ ಅಸ್ಪೃಶ್ಯತೆಯ ಬಗ್ಗೆ ಪಾಪ ಪ್ರಜ್ಞೆಯ ಪ್ರಾಯಶ್ಚಿತ್ತ ಭಾವ ಇನ್ನೂ ಮೂಡಿಲ್ಲ? ಸಾಂಸ್ಕೃತಿಕವಾಗಿ ಉದ್ಧಾರವಾಗಬೇಕಾದವರು ತಾವು; ದಲಿತರಲ್ಲ ಎಂಬುವಂಥ ಸತ್ಯ ಜಾತಿಸಮರ್ಥಕರಿಗೆ ಹೊಳೆಯುವುದಾದರೂ ಎಂದು ? ಜ್ಞಾನೋದಯವಾಗಿ ನಾಗಪುರ, ಮಠಕೇಂದ್ರಗಳು, ಅಗ್ರಹಾರಗಳು 'ಜಾತಿವಿನಾಶ'ದ ಚಳುವಳಿಯನ್ನು ಆರಂಭಿಸುವುದಾದರೂ ಎಂದು ?

ದಲಿತರ ಮತಾಂತರವನ್ನು ತಡೆಯಲು ಅರ್ಥವಾಗದ ಸಂಸ್ಕೃತ ಭಾಷೆಯ ಗೀತೋಪದೇಶ ಅಸ್ತ್ರವನ್ನು ಬಳಸಬೇಕೆನ್ನುವ ಪೇಜಾವರರ ಗುಂಪು ಮೊದಲಿಗೆ ವಿವೇಕಾನಂದ, ನಾರಾಯಣಗುರು, ಅಂಬೇಡ್ಕರ್, ಲೋಹಿಯಾ, ಬಸವಣ್ಣ ಧರೆಗೆ

ದೊಡ್ಡವರೆನಿಸಿದಂಥ ಮಂಟೇಸ್ವಾಮಿಯಂಥವರ ನಾಮದೊಳಗಿರುವ ವಿವೇಕವನ್ನು ಜಪಿಸುತ್ತಾ ಶುದ್ಧಗೊಳ್ಳಬೇಕಿದೆ. ಅಮೇರಿಕಾದಲ್ಲಿ ನೀಗ್ರೋಗಳೆಂಬ ಕರಿಯರನ್ನು ಗುಲಾಮರನ್ನಾಗಿಸಿಕೊಂಡು ಕ್ರೂರವಾಗಿ ನಡೆಸಿಕೊಂಡವರು ಬಿಳಿಯರು. ಇವರಲ್ಲೂ ಕರಿಯರ ಬಗ್ಗೆ ಅನುಕಂಪ, ಪಾಪಪ್ರಜ್ಞೆಗಳನ್ನು ಹೊಂದಿದಂಥ ಬಿಳಿಯರ ದೊಡ್ಡ ಸಮೂಹವೇ ಇತ್ತು. ಅವರೆಲ್ಲರೂ ಗುಲಾಮಗಿರಿ ನಿವಾರಣೆಗಾಗಿ ಕರಿಯರೊಂದಿಗೆ ಕಲೆತು ಹೋರಾಡಿದ್ದರು, ೧೯ನೇ ಶತಮಾನದಲ್ಲಿ. ಈ ನಿಟ್ಟಿನಲ್ಲಿ ಅಬ್ರಹಾಂ ಲಿಂಕನ್ ಅವರನ್ನು ನೆನಪಿಸಿಕೊಳ್ಳಬಹುದಾಗಿದೆ. ಕರಿಯರು ಪಡುತ್ತಿರುವ ಬವಣೆಯ ಕುರಿತು ಬಿಳಿಯರು ಯಾವ ಮಟ್ಟದಲ್ಲಿ ಸ್ಪಂದಿಸಿದ್ದರೆಂದರೆ, ಈ ಕುರಿತು ಬರೆದ ಸಾಹಿತ್ಯದ ವಿಸ್ತಾರ ದಂಗುಬಡಿಸುವ ಮಟ್ಟದಲ್ಲಿತ್ತು! ಇದರ ಪೂರ್ಣ ಗ್ರಂಥಸೂಚಿಯೆ ಹಲವು ಲಕ್ಷದಷ್ಟು!!

ವರ್ಣಭೇದವನ್ನು ವಿರೋಧಿಸಿ ಕರಿಯರಿಗೆ ಶಿಕ್ಷಣ, ವಸತಿ ಸೌಕರ್ಯ, ಉದ್ಯೋಗ, ವೈದ್ಯಕೀಯ, ಮುಂತಾದ ನಾಗರಿಕ ಸೌಲಭ್ಯಗಳನ್ನು ಒದಗಿಸಲು ಅಲ್ಲಿನ ಚರ್ಚ್, ಮಿಷನರಿಗಳು, ಕ್ರೈಸ್ತಧಾರ್ಮಿಕ ಕೇಂದ್ರಗಳು, ಸಂಘ ಸಂಸ್ಥೆಗಳು, ಚಿಂತಕರು, ರಾಜನೀತಿ ತಜ್ಞರು, ರಾಜಕಾರಣಿಗಳು, ಕೈಗಾರಿಕೋದ್ಯಮಿಗಳು, ಸಮಾಜಶಾಸ್ತ್ರಜ್ಞರು ಮತ್ತು ಶ್ರೀಸಾಮಾನ್ಯರು ಪ್ರಾಮಾಣಿಕವಾಗಿ ಸ್ಪಂದಿಸಿದ್ದರು. ಕರಿಯರ ಅಭ್ಯುದಯಕ್ಕಾಗಿ ಬಿಳಿಯರು ಹಲವು ಲಕ್ಷ, ಹಲವು ಕೋಟಿ ಡಾಲರ್ ಮೊತ್ತದ ಉಯಿಲುಗಳನ್ನು ಬರೆದಿಟ್ಟರು. ಇದರ ವಿವರಗಳನ್ನು ೧೯೩೧ರಲ್ಲಿ ಪ್ರಕಟಗೊಂಡ 'ನೀಗ್ರೋ ಯಿಯರ್ ಬುಕ್'ನಲ್ಲಿ ಕಾಣಬಹುದಾಗಿದೆ. ಗಮನಾರ್ಹ ವಿಚಾರವೆಂದರೆ, ಕ್ರೈಸ್ತಧರ್ಮ ಗುಲಾಮಗಿರಿಯನ್ನು ಮಾನ್ಯಮಾಡಿರಲಿಲ್ಲ. ವರ್ಣಭೇದವನ್ನು ನಿರಾಕರಿಸಿತ್ತು. ಆದರೆ ಹಿಂದುಧರ್ಮವು ಅಸ್ಪೃಶ್ಯತೆಯ ಆಚರಣೆಯನ್ನು ಧರ್ಮಬದ್ಧಗೊಳಿಸಿತ್ತು. ಅದನ್ನು ಕಳಂಕವೆಂದು ಭಾವಿಸಿರಲಿಲ್ಲ, ಮನುಸ್ಮೃತಿಯ ಜನವಿರೋಧಿ ಚಿಂತನೆಗಳನ್ನು ಭಾರತದ ಸಂವಿಧಾನವೆಂಬಂತೆ ಸ್ವೀಕರಿಸಿತ್ತು. ಹೀಗಾಗಿ ಅಸ್ಪೃಶ್ಯರ ಸಮಸ್ಯೆಯ ಬಗ್ಗೆ ಮೇಲ್ಜಾತಿಯ ಗಣ್ಯರು ಬರೆದ ಪುಸ್ತಕಗಳ ಸಂಖ್ಯೆ ಬೆರಳೆಣಿಕೆಯಷ್ಟು! ಇದರ ಪರಿಣಾಮ ಕಾಣದಷ್ಟು!!

ಉನ್ನತ ವಿದ್ಯಾಭ್ಯಾಸ ಕ್ಷೇತ್ರಗಳಿಗೆ ಬರುವ ಮುಸ್ಲಿಂ, ಕ್ರೈಸ್ತ ಧರ್ಮೀಯರನ್ನು ಸಹಿಸಿಕೊಳ್ಳುವ ಜಾತಿವಾದಿ ಮನಸ್ಸುಗಳು ದಲಿತರ ಪ್ರವೇಶವನ್ನು ಸಹಿಸಲಾರವು. ಪ್ರತಿಭೆ, ಅರ್ಹತೆಗಳ ಹೆಸರಲ್ಲಿ ಮೀಸಲಾತಿ ವಿರೋಧಿ ಚಳುವಳಿಯನ್ನು ರೂಪಿಸಬಲ್ಲವು. ಕೋಮುಗಲಭೆಯ ಸಂದರ್ಭದಲ್ಲಿ ಇದೇ ದಲಿತರನ್ನು 'ಹಿಂದು'ಗಳನ್ನಾಗಿಸಿ, ಮುಸ್ಲಿಂ ಹಾಗೂ ಕ್ರೈಸ್ತರ ವಿರುದ್ಧ ಆಯುಧಗಳಾಗಿ ಬಳಸಿ ಬಿಸಾಡಬಲ್ಲವು.

ಕರಿಯರ ಬಗ್ಗೆ ಬಹುತೇಕ ಬಿಳಿಯರು ಹೊಂದಿದ್ದ ಮಾನವೀಯತೆಯಿಂದಾಗಿ ಕರಿಯರು ಮೇಲ್ಮುಖಿ ಚಲನೆ ಪಡೆದು ಅಮೆರಿಕಾದ ಸಾಹಿತ್ಯ, ಸಂಗೀತ, ಉದ್ಯೋಗ, ತಂತ್ರಜ್ಞಾನ, ಚಲನಚಿತ್ರ, ಕ್ರೀಡೆ, ಉದ್ಯಮ, ರಾಜಕೀಯ, ಶಿಕ್ಷಣ, ಧಾರ್ಮಿಕ ಸಂಸ್ಥೆಗಳಂತಹ ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿರುವ ರೀತಿ ಆಶ್ಚರ್ಯಮೂಡಿಸು ವಂಥದ್ದು. ಕರಿಯರ ಅಭ್ಯುದಯವನ್ನು ಕಾಣುವಂತೆ ಇಲ್ಲಿ ದಲಿತರ ಅಭ್ಯುದಯ ಚಲನೆಯನ್ನು ಕಾಣಬಲ್ಲೆವೇ ? ಉತ್ತರ ತೀರಾ ನಿರಾಶಾದಾಯಕವಾಗಿದೆ !

ದಲಿತರ ಬಗ್ಗೆ ಪ್ರಾಯಶ್ಚಿತ್ತ ಭಾವನೆ ಇಲ್ಲದ ಜಾತಿವಾದಿ ಮನಸ್ಸುಗಳ ಜಾತಿಪದ್ಧತಿಯನ್ನು, ವೈದಿಕದೇವರನ್ನು, ಬ್ರಾಹ್ಮಣೀಕರಣವನ್ನು, ಧಾರ್ಮಿಕ ಮೂಢನಂಬಿಕೆ ಗಳನ್ನು ಆಧುನಿಕತಂತ್ರಜ್ಞಾನವಾದ ಟಿ.ವಿ.ಯ ನೂರಾರು ಚಾನೆಲ್‌ಗಳ ಮೂಲಕ ಗಟ್ಟಿಗೊಳಿಸುತ್ತಿವೆ. ಈ ಅಡಿಪಾಯ, ನಿರಂತರ ಉಸಿರಾಟದ ಕ್ರಿಯೆಯಂತಾಗಿ ನಡೆಯುತ್ತಿದೆ.

ಒಂದು ಕಾಲದಲ್ಲಿ ಬ್ರಾಹ್ಮಣ ಧರ್ಮದ ಅಡಿಯಾಳುಗಳಾಗಲು ಇಚ್ಛಿಸದೆ, ಅದರ ಶ್ರೇಷ್ಠತೆಯನ್ನು ಪ್ರಶ್ನಿಸಿ 'ದೂರ' ಇಟ್ಟ ಕೆಳಜಾತಿಯ ವೈಚಾರಿಕ ಪ್ರಜ್ಞೆ ಇಂದಿಗೂ ಡಿಸ್ಟರ್ಬ್‌ಗೊಳಿಸುವಂಥದ್ದು, ಕಾಡಿಸುವಂಥದ್ದು. ತಮಿಳುನಾಡಿನ ಪರಯನ (ದಲಿತ) ಸಂಸ್ಕೃತಿಯು ತಮ್ಮ ಕೇರಿಗೆ ಬ್ರಾಹ್ಮಣರ ಪ್ರವೇಶವನ್ನು ಕೆಡುಕೆಂದು ಭಾವಿಸುತ್ತಿತ್ತು. ಬ್ರಾಹ್ಮಣ ಪ್ರವೇಶಿಸಿಬಿಟ್ಟರೆ ಆತನಿಂದ ತಮ್ಮ ಕೇರಿಯ ಅದೃಷ್ಟಕ್ಕೆ ಧಕ್ಕೆ ಉಂಟಾಗಬಹುದೆಂದು ಅವನ ಬಟ್ಟೆ ಹರಿದು, ಉಪ್ಪುಕಟ್ಟಿ ಹೊರಕ್ಕೆ ಅಟ್ಟಿಬಿಡುತ್ತಿದ್ದರು. 'ಸಿಂದ್‌ಮಾದಿಗರ ಸಂಸ್ಕೃತಿ'ಯಲ್ಲಿ ಬ್ರಾಹ್ಮಣರು ಮಾದಿಗರ ಮನೆಯಂಗಳವಿರಲಿ, ಅವರ ಕೇರಿಯ ಒಳಕ್ಕೂ ಕಾಲಿಡುವಂತಿಲ್ಲ. ಬ್ರಾಹ್ಮಣರ ಪ್ರವೇಶ ಅನಿಷ್ಟವೂ ಆಗಿದೆ, ಸರ್ವನಾಶಕ್ಕೂ ಕಾರಣವಾಗುತ್ತದೆ ಎಂಬ ನಂಬಿಕೆಯಿಂದ ಅವರನ್ನು ಪೊರಕೆಯಿಂದ ಹೊಡೆದು, ಸಗಣಿ ನೀರು ಎರಚಿ ಹೊರ ಅಟ್ಟಿ ಬಿಡುತ್ತಿದ್ದರು. ಈ ಮಿತ್ ಅಂಬೇಡ್ಕರ್ ಅವರನ್ನು ತುಂಬಾ ಸೆಳೆದಿತ್ತು.

ದಲಿತ ಸಂಸ್ಕೃತಿಯ ಈ ಪುರಾತನ ಸೊಲ್ಲುಗಳು ತಮ್ಮ ಯಾವ ಅವನತಿಗೆ ಪ್ರತಿಯಾಗಿ ಬ್ರಾಹ್ಮಣರನ್ನು 'ಒಳ' ಬಿಟ್ಟುಕೊಳ್ಳದೆ 'ಹೊರ' ಅಟ್ಟುತ್ತಿದ್ದವು ?

೧೯೧೧ರ ಜಾತಿವಾರು ಜನಗಣತಿಯ ಸಂದರ್ಭದಲ್ಲಿ ಅಸ್ಪೃಶ್ಯರ ಸಂಖ್ಯೆಯನ್ನು ನಿಖರವಾಗಿ ಗುರ್ತಿಸಲು ಬ್ರಿಟಿಷ್ ಜನಗಣತಿ ನಿರ್ದೇಶಕರು ನಡೆಸಿದಂಥ ಸುದೀರ್ಘ ಅಧ್ಯಯನ, ಬಳಸಿದ ಮಾನದಂಡ, ಅನುಸರಿಸಿದ ನಿಯಮ ಕುತೂಹಲಕಾರಿಯಾಗಿದ್ದವು. ಅವು ಹೀಗಿದ್ದವು: (೧) ಬ್ರಾಹ್ಮಣ ಶ್ರೇಷ್ಠತೆಯನ್ನು ನಿರಾಕರಿಸುವವರು (೨) ಬ್ರಾಹ್ಮಣರಿಂದ ಮಂತ್ರ ದೀಕ್ಷೆಯನ್ನು ಸ್ವೀಕರಿಸದವರು (೩) ವೇದ ಪ್ರಮಾಣ ಒಪ್ಪದವರು (೪) ವೈದಿಕ ದೇವರನ್ನು, ಪುರೋಹಿತರನ್ನು ಒಪ್ಪಿಕೊಳ್ಳದವರು (೫) ಬ್ರಾಹ್ಮಣರನ್ನು ನಿರಾಕರಿಸುವವರು (೬) ಹಿಂದೂ ದೇವಾಲಯದ ಒಳ ಪ್ರವೇಶ ಇಲ್ಲದವರು (೭) ಸತ್ತವರನ್ನು ಹೂಳುವವರು (೮) ಗೋವನ್ನು ಪೂಜಿಸದವರು (೯) ಗೋಮಾಂಸ ತಿನ್ನುವವರು.

ಅಂಬೇಡ್ಕರ್ ಅವರನ್ನು ಕಾಡಿಸಿದ್ದು, 'ಕೀಳು' ಎನಿಸಿಕೊಂಡದ್ದು ಮೇಲು (ಶ್ರೇಷ್ಠ) ಎನಿಸಿಕೊಂಡದ್ದನ್ನು ಮುಟ್ಟಿಸಿಕೊಳ್ಳದೆ ದೂರ ಇಟ್ಟಿತ್ತು ಎಂಬುದು.

ತಮ್ಮ ಸಂಸ್ಕೃತಿಯ ನಂಬಿಕೆಯನ್ನು, ದೈವವನ್ನು, ಆಹಾರಕ್ರಮವನ್ನು ಕೀಳೆಂದು



## ಗೋಡಂಬಿ - ಬೆರಳು

ವಿಚಿತ್ರ ಈ ಸೃಷ್ಟಿ
ಬೀಜ ಹಣ್ಣು
ಜೊತೆ ಜೊತೆಗೆ
ಬೆಳೆವ ಪರಿ
ಬೆಸೆವ ರೀತಿ

ಹೊರಗೆ ಕಲ್ಲಿನಂತೆ
ಒಳಗೆ ಬೆಣ್ಣೆಯಂತೆ

ಕಾರ್ಖಾನೆಯಲ್ಲಿ
ಘಮ ಘಮ ಹೊಗೆ
ಮೂಗರಳುವ ಹೊತ್ತಿಗೆ
ಬುತ್ತಿ ಹಿಡಿದು
ಬರುವ ಹೆಣ್ಣುಗಳು

ಉರಿವ ಜ್ವಾಲೆಗೆ
ಮೈಯೊಡ್ಡಿ ಕಾದು
ಬುರಬುರನೆ
ಸೂಸುವ ಎಣ್ಣೆ

ಕೋಮಲ
ಇನ್ನೂ ಸುಕೋಮಲ
ಆ ಗುಲಾಬಿ ಬೆರಳು
ಸಿಪ್ಪೆ ಸುಲಿದು
ಒಳಗಿನ ಮುತ್ತ ಬೇರ್ಪಡಿಸಿ,
ಸವರಿ
ಕವರಿಗೆ ಹಾಕಿ
ಬಾಯಲ್ಲಿ ನೀರೂರಿದರೂ
ನುಂಗಿ

ಕೈಗೂ ಬಾಯಿಗೂ
ನಿರಂತರ ಅಂತರ

ಹೀಗೆ,
ದಣಿಗಳ ಜೇಬು ತುಂಬುವ ಶ್ರೀಮಂತರ
ರುಚಿ ರುಚಿ ಅಡುಗೆ
ಅಲಂಕರಿಸುವ ಗೋಡಂಬಿ
ಕಪ್ಪಗೆ ಕಾದು
ಬೆಳ್ಳಗಾಗುವ ಪ್ರಕ್ರಿಯೆ
ಗುಲಾಬಿ ಬೆರಳುಗಳು
ಕರಟ ವಿಕಾರಗೊಳ್ಳುವ ಕ್ರಿಯೆ

ಹೇಮಾ ವೆಂಕಟ್
ಸಂಖ್ಯೆ ೩.೨೭., ತುಂಗಾನಗರ, ಪಿಕ್ಚರ್‌ಸಿಟಿ ಹಿಂಭಾಗ,
ಬೆಂಗಳೂರು - ೫೬೦ ೦೯೧

ಅವಮಾನಿಸಿಬಿಟ್ಟಾಗ, ಅಲ್ಲಿನ ಸಾಂಸ್ಕೃತಿಕ ವಿವೇಕವನ್ನು ಅನಕ್ಷರಸ್ಥರ ಸೊಲ್ಲೆಂದು ಜರಿದು, ಆ ಬೇರುಗಳನ್ನು ಕತ್ತರಿಸಿದ ಅಕ್ರಮಕ್ಕೆ, ಅದರಿಂದ ಉಂಟಾದ ಅವನತಿಗೆ, ಪರಿಶಿಷ್ಟ ಸಂಸ್ಕೃತಿಯು ಶಿಷ್ಟ ಸಂಸ್ಕೃತಿಯ ಮೌಲ್ಯವನ್ನು ನಿರಾಕರಿಸಿ ಎದುರಾಳಿಯಾಗಿ ನಿಂತಿರಬಹುದೇ ?

* * *

ವೈದಿಕ ಹಿಂದುತ್ವದ ಧಾರ್ಮಿಕ ಆಚಾರ ವಿಚಾರ ಮತ್ತು ಸಂಸ್ಕೃತ ಭಾಷೆಯ ವ್ಯೂಹವು ಅತ್ಯಂತ ಅಪಾಯಕಾರಿಯಾದುವು. ಈ ಹಿಂದುತ್ವವನ್ನು ತಳಜಾತಿಗಳು ತಮ್ಮ ಪೂರ್ವಿಕರ ಸೊಲ್ಲಿನ ಮೂಲಕ, ತಕರಾರಿನ ಮೂಲಕ ಈ ಕಾಲದ ಅರಿವಿನ ಎಚ್ಚರಿಕೆಯ ಮೂಲಕ ಸಮಷ್ಟಿಯಾಗಿ ಎದುರಿಸಬೇಕಿದೆ. ಬಹುಪಾಲು ತಳ ಸಮುದಾಯಗಳು ತಮ್ಮ ಸಂಸ್ಕೃತಿನಿಷ್ಠ ಸೃಜನಶೀಲತೆಗೆ ಬದ್ಧವಾಗಿರುತ್ತವೆಯೇ ವಿನಾ 'ಧರ್ಮದ ಯಾಜಮಾನ್ಯ'ಕ್ಕೆ ಬದ್ಧವಾಗಿರುವುದಿಲ್ಲ.

ಕುತೂಹಲಕ್ಕಾಗಿ ಗಮನಿಸಿ: ಯಾಜಮಾನ್ಯಧರ್ಮವು ಎಮ್ಮೆ, ಕೋಣ, ಕುರಿ, ಕೋಳಿಗಳನ್ನು ದೇವರಿಗೆ ಬಲಿಕೊಡಬೇಡಿ ಎಂದು ಆದೇಶಿಸಿದರೆ, ಸಂಸ್ಕೃತಿನಿಷ್ಠ ತಳಸಮುದಾಯಗಳು ಅದನ್ನು ಪ್ರತಿಭಟಿಸಿ ಮೆಟ್ಟಿ ನಿಲ್ಲುತ್ತವೆ. ಜಾತಿಗಲಭೆ, ಕೋಮುಗಲಭೆಯಲ್ಲಿ ನೂರಾರು ಮಂದಿ ಸಾಯುವುದನ್ನು ಕಂಡು 'ಯಾಜಮಾನ್ಯ ಸಂಸ್ಕೃತಿ' ಚಪ್ಪರಿಸುತ್ತಾ ನಿಂತಿದ್ದರೆ, 'ತಳಸಮುದಾಯ ಸಂಸ್ಕೃತಿ'ಯು ಆ ಅಮಾಯಕರ ಸಾವು ತಪ್ಪೆಂದು ಬೀದಿಗಿಳಿದು ಪ್ರತಿಭಟಿಸುತ್ತದೆ.

ತಳಜಾತಿಯ ಅಕ್ಷರಸ್ಥ ವಿದ್ಯಾವಂತರಲ್ಲೂ, ಅನಕ್ಷರಸ್ಥರಾಗಿದ್ದೂ ಆರ್ಥಿಕ ಶಕ್ತಿ ಪಡೆದ ಇವರಲ್ಲೂ ಹೊಲೆಯ ಮಾದಿಗರೆಂಬ ಭೇದಭಾವವು ಮತ್ತು ಬ್ರಾಹ್ಮಣೀಕರಣಗೊಳ್ಳುವಂಥ ಅವರ ಆಚಾರ ವಿಚಾರಗಳನ್ನು ಅನುಕರಣೆ ಮಾಡುವ ತೆವಲು ಜಾಸ್ತಿಯಾಗುತ್ತಿದೆ. ಈ ತ್ರಿಶಂಕು ಹಾದಿಯಲ್ಲಿರುವ ಇವರು ಕೊನೆಗೆ ಹಿಂದುತ್ವದ ಚಕ್ರವ್ಯೂಹದಲ್ಲಿ ಬಂಧಿಯಾಗಿ ಬಿಡುತ್ತಾರಲ್ಲವೆ ?

ಖ್ಯಾತ ಕತೆಗಾರ ಮೊಗಳ್ಳಿ ಗಣೇಶ್ ಹೇಳುತ್ತಾರೆ: ''ಹಿಂದುತ್ವವನ್ನು ನಾವು ತಳ ಸಮುದಾಯಗಳ ಸಮಷ್ಟಿಗರ್ಭದಲ್ಲಿದ್ದುಕೊಂಡೇ ಎದುರಿಸಬೇಕಾಗುತ್ತದೆ'' ಎಂದು. ಇನ್ನೊಂದು ಕಡೆ ಆತಂಕದಿಂದ ಹೀಗೆ ದಾಖಲಿಸುತ್ತಾರೆ: ಇಂಡಿಯಾದ ಅನೇಕ ಸಮುದಾಯಗಳ ಅರಿವಿನ ಗರ್ಭದಲ್ಲಿ ಮೊಳೆಯುತ್ತಿದ್ದ ತಲೆಮಾರುಗಳಿಗೆ ವೈದಿಕತ್ವವು ತನ್ನ ಧಾರ್ಮಿಕ ಅಮಲನ್ನು ಕುಡಿಸಿದೆ.

ಇಂತಹ ಕಳ್ಳಿ ಹಾಲು ಯಜಮಾನ ಧರ್ಮಕ್ಕೆ ಶಕ್ತಿವರ್ಧಕ ಟಾನಿಕ್ ಆಗಿ ದಕ್ಕಬಹುದು. ಆದರೆ ತಳಸಮುದಾಯ ಸಂಸ್ಕೃತಿಗಳು ಅದನ್ನು ಕುಡಿದರೆ ಜೀರ್ಣಿಸಿಕೊಳ್ಳಲಾರವು, ಸಾವು ನಿಶ್ಚಿತವಾಗಬಲ್ಲದು. ಈ ದುರಂತವನ್ನು ಮತಾಂತರದ ಮೂಲಕ ನೀಗಿಕೊಳ್ಳಬಹುದು. ಅಥವಾ ಮಂಟೇಸ್ವಾಮಿ, ಮಲೆಮಾದೇಸ್ವರ ಪರಂಪರೆಯ ಸಮಷ್ಟಿಗರ್ಭದಲ್ಲಿದ್ದುಕೊಂಡೇ ಎದುರಿಸಬೇಕಿದೆ. ಈ ಸಾಧ್ಯತೆ ಅಥವಾ ಅಸಾಧ್ಯತೆಯ ಕುರಿತು ಸಂವಾದಿಸಲು ಪ್ರತಿಸಂಸ್ಕೃತಿಯ ನೂರಾರು ಸೊಲ್ಲುಗಳು ಒಂದೆಡೆ ಕಲೆತುಕೊಳ್ಳಬೇಕಿದೆ.

''ಬ್ರಾಹ್ಮಣ್ಯವನ್ನು ಉಳಿಸಬೇಕು, ಅಸ್ಪೃಶ್ಯತೆಯನ್ನು ತೊಲಗಿಸಬೇಕು.ಜಾತಿ ಪದ್ಧತಿಯನ್ನು ಉಳಿಸಿಕೊಂಡೇ ಜಾತಿ ಸಾಮರಸ್ಯವನ್ನು ಸಾಧಿಸಬೇಕು'' ಎನ್ನುವ ಈ ವೈದಿಕ ಧರ್ಮಗುರುಗಳ ನುಡಿಗೆ, ನಡೆಗೆ ದಕ್ಕುವುದಿಲ್ಲ. ಇವರೆಲ್ಲರ ಒಂದು ಪಾದ ಮುಂದಕ್ಕೂ ಇನ್ನೊಂದು ಪಾದ ಹಿಂದಕ್ಕೂ ತಿರುಗಿ ಕ್ರಿಯೆಯೇ ಇಲ್ಲದ ಯಥಾಸ್ಥಿತಿಯನ್ನು ಉಳಿಸಿಕೊಳ್ಳುವಂತಿದೆ.

ಉತ್ತಮ ಗುಣ, ನಡತೆ, ಸಂಸ್ಕಾರ, ದೇವರಲ್ಲಿ ಗುರುಹಿರಿಯರಲ್ಲಿ ಭಯಭಕ್ತಿ ದೇವಸ್ಥಾನಗಳ ನಿರ್ಮಾಣ, ಪೌರೋಹಿತ್ಯದ ಶ್ರೇಷ್ಠತೆ, ಸಜ್ಜನಿಕೆ ಇತ್ಯಾದಿಗಳ ಬಗ್ಗೆ ನಿತ್ಯವೂ ಮಣಗಟ್ಟಲೆ ಮಾತಾಡುವ ವೈದಿಕ ಧರ್ಮಗುರುಗಳು, ಧರ್ಮಾಧಿಕಾರಿ ಕೇಂದ್ರಗಳು, ಇವರನ್ನು ಅನುಕರಣೆ ಮಾಡುವ ಶೂದ್ರ ಮಠಾಧಿಪತಿಗಳು ಒಮ್ಮೆಯಾದರೂ ಬಾಯಿತಪ್ಪಿಯಾದರೂ ''ಜಾತಿ ಪದ್ಧತಿ, ಜಾತಿಭೇದ, ಇವುಗಳ ಫಲವಾದ ಅಸ್ಪೃಶ್ಯತೆಯು ಹಿಂದುಧರ್ಮಕ್ಕೆ ಕ್ಯಾನ್ಸರ್‌ನಂತೆ ಅಂಟಿಕೊಂಡಿದೆ. ಕಳಂಕವಾಗಿದೆ. ಇದನ್ನು ನಿರ್ಮೂಲನೆ ಮಾಡುವ ಮೂಲಕ ಮಾತ್ರ ನಾವೆಲ್ಲರೂ ಉತ್ತಮ ಸಂಸ್ಕಾರವಂತರೂ ಸಜ್ಜನರೂ ಜಾತ್ಯತೀತರೂ ಆಗಲು ಸಾಧ್ಯ'' ಎಂದಿದ್ದನ್ನು ನಾವೆಂದಾದರೂ ಕೇಳಿಸಿಕೊಂಡಿದ್ದೇವಾ...? ಅಂತೆಯೇ ''ಬ್ರಾಹ್ಮಣರಂತೆ ಎಲ್ಲ ಜಾತಿಯ ಜನರು ಎಲ್ಲ ವೈದಿಕ ದೇವಸ್ಥಾನಗಳಲ್ಲೂ ಅರ್ಚಕರಾಗಲು ಅರ್ಹರು'' ಎಂದಿದ್ದನ್ನು ಕೇಳಿಸಿಕೊಂಡಿದ್ದೇವಾ ? ಖಂಡಿತಾ ಇಲ್ಲ. ಇಂತಹವರು ಮೊದಲು ತಮ್ಮೊಳಗಿನ ಅಸಂಖ್ಯಾತ ಅಮಾನವೀಯ ನಡೆ ನುಡಿಯ ಕೊಂಕುಗಳನ್ನು ಸರಿಪಡಿಸಿಕೊಳ್ಳಬೇಕಿದೆ, ದೈವತ್ವಕ್ಕೂ ಮೀರಿದ ಅಪಾರ ಮಾನವೀಯ ಕಳಕಳಿಯುಳ್ಳ ಚಿಂತನೆಗಳಿಂದ.

ಸಿ.ರಾಮಸ್ವಾಮಿ
ಸೌಮ್ಯಶ್ರೀ ನಿಲಯ, ಆರ್. ಸಿ. ರಸ್ತೆ ಹೊಸಬಡಾವಣೆ, ಮಡಿಕೇರಿ - ೫೭೧೨೦೧

## ಸಾದರ ಸ್ವೀಕಾರ

**ಬಿಸಿಲು ಕುದುರೆಯನೇರಿ** — *ಡಾ|| ಬಿ. ಎನ್. ಸತ್ಯನಾರಾಯಣ ರಾವ್*
*ಪುಟ : ೧೬೦* — *ಬೆಲೆ : ರೂ. ೧೦೦*
**ಇಂದುಮತಿ ಪ್ರಕಾಶನ**, ೨೮/೧, ೧೭ನೇ ಕ್ರಾಸ್, ೧೦ನೇ 'ಎ' ಮೇಯಿನ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೫೫

**ಇಲ್ಲದ ತೀರದಲ್ಲಿ** (ಅಪ್ಪನ ಬದುಕಿನೊಂದಿಗೆ ಸಂವಾದ) — ಅರವಿಂದ ಚೊಕ್ಕಾಡಿ
*ಪುಟ : ೧೪೮* — *ಬೆಲೆ : ರೂ. ೬೦*
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩೧೦೩

**ಶತಮಾನದ ಕವಿ ಯೇಟ್ಸ್** — ಯು. ಆರ್. ಅನಂತಮೂರ್ತಿ
*ಪುಟ : ೧೨೮* — *ಬೆಲೆ : ರೂ. ೭೫*
**ದೇವರ ಗೊಡವೆ ಕೂಡ ನನಗೆ ಬೇಡ !** (ಗಾಲಿಬ್‌ನ ಜೀವನ ದರ್ಶನ) ಸಂ. : ನ. ರವಿಕುಮಾರ
*ಪುಟ : ೮೮* — *ಬೆಲೆ : ರೂ. ೫೦*
**ಕರೆಯಿತೋ ಕಡಲ ತೀರ** (ಕೇರಳದಲ್ಲಿ ಒಂದು ಸುತ್ತು) — ಜಿ. ಪಿ. ಬಸವರಾಜು
*ಪುಟ : ೧೪೪* — *ಬೆಲೆ : ರೂ. ೭೫*
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಇಂಗ್ಲಿಷ್ ಮಂಗ** (ಕಥಾಸಂಕಲನ) — ಶಾಂತಾರಾಮ ಸೋಮಯಾಜಿ
*ಪುಟ : ೧೯೨* — *ಬೆಲೆ : ರೂ. ೧೦೦*
**ಹೇಮಂತ ಸಾಹಿತ್ಯ**, ನಂ. ೯೭೨, 'ಸಿ' ೪ನೇ 'ಇ' ವಿಭಾಗ, ೧೦-'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ವೆಂಕಿ ಬರ್ಗರ್** (ನ್ಯೂಯಾರ್ಕ್ ನೆನಪುಗಳು) — *ವೆಂಕಟೇಶ್ ರಾಘವೇಂದ್ರ*
*ಪುಟ : ೯೦* — *ಬೆಲೆ : ರೂ. ೮೦*
**ಪ್ಯಾಪಿರಸ್, ಮೇಫ್ಲವರ್ ಮೀಡಿಯಾ ಹೌಸ್**, ೧, ಯಮುನಾಬಾಯಿ ರಸ್ತೆ, ಯೂನಿಟ್ - ೫, ೧ನೇ ಮಹಡಿ, ಮಾಧವನಗರ, ಬೆಂಗಳೂರು - ೫೬೦ ೦೦೧

**ಒಂದು ಪ್ರೀತಿಯ ನೆನಪು** (ಕಥಾಸಂಕಲನ) — *ಎಚ್. ಎಚ್. ಗಂಗಾಧರಾಚಾರ್*
*ಪುಟ : ೧೦೮* — *ಬೆಲೆ : ರೂ. ೫೦*
**ಸಾಹಿತ್ಯ ಚಿಂತನ ಪ್ರಕಾಶನ**, ನಂ. ೧೫೪, ಎಚ್. ಷಡಕ್ಷರ ಮಠದ ಹಿಂಭಾಗ, ರೇವಣ ಸಿದ್ದಪ್ಪ ಬಡಾವಣೆ, ಕಂಚಾಘಟ್ಟ ರಸ್ತೆ, ತಿಪಟೂರು - ೫೭೨ ೨೦೨

**ಯುಗೇ ಯುಗೇ** (ರಾಷ್ಟ್ರೋತ್ಥಾನ ಪುರಸ್ಕೃತ ನಾಟಕ) — *ಜಿ. ಜೆ. 'ಹರಿಜಿತ್'*
*ಪುಟ : ೮೦* — *ಬೆಲೆ : ರೂ. ೫೦*
**ಸಪ್ತಲಾ ಪ್ರಕಾಶನ**, ಪೋಸ್ಟ್ ಬಾಕ್ಸ್ ನಂ. ೮೫೧೭, ಬೆಂಗಳೂರು - ೫೬೦ ೦೮೫

**ಎದೆಯೊಳಗಿನ ತಲ್ಲಣ** (ಕವನ ಸಂಕಲನ) — ಸಂತೆಬೆನ್ನೂರು ಫೈಜ್ನಟ್ರಾಜ್
*ಪುಟ : ೭೦* — *ಬೆಲೆ : ರೂ. ೫೦*
**ರೇಷು ಪ್ರಕಾಶನ**, ಬ್ರಾಹ್ಮಣರ ಬೀದಿ, ಮಿನಿ ಟ್ಯಾಂಕ್ ಹತ್ತಿರ, ಸಂತೆಬೆನ್ನೂರು ಚನ್ನಗಿರಿ ತಾಲೂಕು, ದಾವಣಗೆರೆ ಜಿಲ್ಲೆ - ೫೭೭ ೫೫೨

**ಓ ಈಳಂ LTTE : ವೀರೋಚಿತ ಕದನ – ರಕ್ತಸಿಕ್ತ ಕಥನ** — ಕುಮಾರ್ ಬುರಡಿಕಟ್ಟಿ
*ಪುಟ : ೩೭೬* — *ಬೆಲೆ : ರೂ. ೨೫೦*
**ಲಂಕೇಶ್ ಪ್ರಕಾಶನ**, ನಂ. ೯, ಪೂರ್ವ ಆಂಜನೇಯ ಗುಡಿರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಎಲ್ಲ ಎಡವಟ್ಟು** (ಹಾಸ್ಯಲೇಖನಗಳ ಸಂಕಲನ) — ಸತ್ಯವತಿ ಹರಿಕೃಷ್ಣನ್
*ಪುಟ : ೧೪೦* — *ಬೆಲೆ : ರೂ. ೬೫*
**ಶ್ರೀನಿವಾಸ ಪುಸ್ತಕ ಪ್ರಕಾಶನ**, ನಂ. ೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಹೆಮ್ಮರ** (ಶಾಲಾ ಮಾಸಪತ್ರಿಕೆ)
**ಪ್ರಕಾಶನ : ಸ. ಸಂ. ಪ. ಪೂ. ಕಾಲೇಜು**, ಪ್ರೌಢಶಾಲಾ ವಿಭಾಗ, ಹೆಮ್ಮರಗಾಲ, ನಂಜನಗೂಡು ತಾಲೂಕು, ಮೈಸೂರು ಜಿಲ್ಲೆ - ೫೭೧ ೩೧೨

**ಬಸವನ ಬೇರು ಹುಡುಕುವವರು** (ಕವನ ಸಂಕಲನ) — *ಎಂ. ಡಿ. ಗೋಗೇರಿ*
*ಪುಟ : ೧೧೬* — *ಬೆಲೆ : ರೂ. ೬೦*
**ಸಾಹಿತ್ಯ ಸೌಧ ಪ್ರಕಾಶನ**, ನವ ಅಯೋಧ್ಯಾ ನಗರ, ಹಳೇ ಹುಬ್ಬಳ್ಳಿ, ಹುಬ್ಬಳ್ಳಿ - ೨೪

# ಸರಳ ಬದುಕು



ಪುರಾತನ ಗ್ರೀಸ್, ತತ್ವಜ್ಞಾನಿಗಳ ನೆಲೆವೀಡು. ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲರಂತಹ ಮಹಾ ಚಿಂತಕರು ಒಬ್ಬರ ನಂತರ ಒಬ್ಬರು ಬಂದು ಹೋದರು. ನಂತರದ ಶತಮಾನಗಳಲ್ಲಿ ಅವರ ಪ್ರಭಾವ ಮುಂದುವರಿದುಕೊಂಡುಹೋಗಿ, ಇಂದಿಗೂ ಅವರ ವಿಚಾರಧಾರೆಗಳು ಚರ್ಚೆಯ ವಸ್ತುಗಳಾಗಿ ಉಳಿದು ಕೊಂಡಿವೆ. ಈ ತ್ರಿಮೂರ್ತಿಗಳ ನಂತರದಲ್ಲೂ ಹಲವು ಪ್ರತಿಭಾವಂತ ತತ್ವಜ್ಞಾನಿಗಳನ್ನು ಪಡೆದುಕೊಂಡದ್ದು ಗ್ರೀಸ್‌ನ ಭಾಗ್ಯ. ಅಂಥವರಲ್ಲಿ 'ಸಿನಿಕ್' ಪಂಥದ ಡಯೋಜನೀಸ್ ಒಬ್ಬ. ಅವನ ಜೀವನಶೈಲಿ ಮತ್ತು ಆಲೋಚನೆಗಳು ತುಂಬಾ ಕುತೂಹಲಕಾರಿಯಾಗಿವೆ.

'ಸಿನಿಕ್' ಪಂಥದವರು ಆತ್ಮಶಾಂತಿಗೆ ಹೆಚ್ಚಿನ ಒತ್ತು ಕೊಟ್ಟು, ಇಂದ್ರಿಯ ಸುಖಗಳ ವಿರೋಧಿಯಾಗಿದ್ದರು. ಅವರು ಸುಖ ಜೀವನವನ್ನು ಮಾನವ ವೈರಿಯೆಂದೇ ಭಾವಿಸಿದ್ದರು. ಡಯೋಜನೀಸ್ ಈ ವಾದವನ್ನು ಅದರ ಅತಿರೇಕಕ್ಕೆ ಕೊಂಡೊಯ್ಯುವ ರೀತಿಯಲ್ಲಿ ತನ್ನ ಬದುಕನ್ನು ಬಾಳುತ್ತಾನೆ. ಅವನ ಈ ಅತಿರೇಕದ ಬದುಕಿನ ಸುತ್ತ ಹಲವು ಕಥೆಗಳು ಹಬ್ಬಿಕೊಂಡಿವೆ.

ಸಮಾಜವು ಭ್ರಷ್ಟತೆಯಿಂದ ತುಂಬಿಹೋಗಿದೆ ಎಂದು ಭಾವಿಸಿದ ಡಯೋಜನೀಸ್, ಸತ್ಯವಂತರನ್ನು ಹುಡುಕುವ ಸಲುವಾಗಿ ಹಾಡುಹಗಲಲ್ಲೇ ದೀವಿಗೆಯನ್ನು ಹಚ್ಚಿಕೊಂಡು ನಗರವನ್ನೆಲ್ಲಾ ಸುತ್ತಾಡುತ್ತಾನೆ. ಈ ಸಮಾಜ ಪೂರ್ತಿಯಾಗಿ ಕೆಟ್ಟುಹೋಗಿದೆ ಎಂಬ ತೀರ್ಮಾನಕ್ಕೆ ಬಂದ ಡಯೋಜನೀಸ್, ನಂತರದಲ್ಲಿ ತೊಟ್ಟಿಯೊಂದರಲ್ಲಿ ವಾಸಿಸತೊಡಗುತ್ತಾನೆ.

ಡಯೋಜನೀಸ್ ಬದುಕಿದ್ದು ಗ್ರೀಸ್‌ನ ಚಕ್ರವರ್ತಿ ಅಲೆಕ್ಸಾಂಡರನ ಕಾಲದಲ್ಲಿ. ಅವನ ಪ್ರಖ್ಯಾತಿಯನ್ನು ಕೇಳಿದ್ದ ಅಲೆಕ್ಸಾಂಡರ್ ಒಮ್ಮೆ ಡಯೋಜನೀಸನನ್ನು ನೋಡಲು ಹೋಗುತ್ತಾನೆ. ಆ ಸಮಯದಲ್ಲಿ ಡಯೋಜನೀಸ್ ಒಂದು ಮರದ ತೊಟ್ಟಿಯಲ್ಲಿ ಕುಳಿತು ಬಿಸಿಲು ಕಾಯಿಸಿಕೊಳ್ಳುತ್ತಿರುತ್ತಾನೆ. ಇಡಿಯ ಜಗತ್ತನ್ನು ಗೆದ್ದುಬಂದ ಸಾರ್ವಭೌಮ ಚಕ್ರವರ್ತಿ ತನ್ನ ಎದುರಿಗೆ ನಿಂತಿದ್ದರೂ ಡಯೋಜನೀಸ್ ಅವನನ್ನು ಗಮನಕ್ಕೆ ತೆಗೆದುಕೊಳ್ಳುವುದೇ ಇಲ್ಲ. ಕೊನೆಗೆ ಅಲೆಕ್ಸಾಂಡರನೇ ತನ್ನ ಪರಿಚಯವನ್ನು ಹೇಳಿಕೊಂಡು, "ನಿನಗೆ ಏನು ಬೇಕು ಕೇಳು, ಅದನ್ನು ನಿನಗೆ ಸಂತೋಷದಿಂದ ಕೊಡುತ್ತೇನೆ" ಎಂದು ಹೇಳುತ್ತಾನೆ. ಈ ಹೊತ್ತಿನಲ್ಲಿ ಅಲೆಕ್ಸಾಂಡರ್ ಡಯೋಜನೀಸ್‌ನ ಮೇಲೆ ಬೀಳುತ್ತಿದ್ದ ಸೂರ್ಯನ ಬಿಸಿಲಿಗೆ ಅಡ್ಡವಾಗಿ ನಿಂತಿರುತ್ತಾನೆ. ಅಲೆಕ್ಸಾಂಡರನ ಸಹಾಯಹಸ್ತಕ್ಕೆ ಡಯೋಜನೀಸನ ಪ್ರತಿಕ್ರಿಯೆ ನಮ್ಮಂಥ ಸಾಮಾನ್ಯರಿಗೆ ಆಶ್ಚರ್ಯವನ್ನುಂಟುಮಾಡುವಂತಿದೆ.

"ನಿನ್ನಿಂದ ಕೊಡಲಾಗದ ವಸ್ತುವನ್ನು ನನ್ನಿಂದ ಕಿತ್ತುಕೊಳ್ಳಬೇಡ. ನೀನು ನನ್ನ ಬಿಸಿಲಿಗೆ ಅಡ್ಡವಾಗಿ ನಿಂತಿದ್ದೀಯ. ನೀನು ಆಚೆ ಸರಿಯುವುದಷ್ಟೇ ನನಗೆ ಬೇಕಿದೆ" ಎನ್ನುತ್ತಾನೆ ಡಯೋಜನೀಸ್. ಆ ನಂತರದಲ್ಲಿ ಅಲೆಕ್ಸಾಂಡರ್ ತನ್ನ ಜೊತೆಯವರಿಗೆ ಹೇಳಿದನಂತೆ, "ನಾನು ಅಲೆಕ್ಸಾಂಡರ್ ಆಗಿರದಿದ್ದರೆ, ಡಯೋಜನೀಸ್ ಆಗಲು ಆಯ್ಕೆ ಮಾಡಿಕೊಳ್ಳುತ್ತಿದ್ದೆ" ಎಂಬುದಾಗಿ.

ಡಯೋಜನೀಸನ ಬಗ್ಗೆ ಇರುವ ಇನ್ನೊಂದು ಕಥೆಯೂ ಅಷ್ಟೇ ಸ್ವಾರಸ್ಯಕರವಾಗಿದೆ. ಚಿಕ್ಕ ಬಾಲಕನೊಬ್ಬ ನದಿಯಲ್ಲಿ ತನ್ನ ಕೈಗಳಿಂದ ಬೊಗಸೆ ಬೊಗಸೆಯಾಗಿ ನೀರನ್ನು ಕುಡಿಯುತ್ತಿರುತ್ತಾನೆ. ಅದನ್ನು ನೋಡಿದ ಡಯೋಜನೀಸ್, ಈ ಬಾಲಕ ಸರಳತೆಯಲ್ಲಿ ನನ್ನನ್ನೂ ಮೀರಿಸುತ್ತಾನೆ ಎಂದುಕೊಂಡು, ತಾನು ಕುಡಿಯಲು ಬಳಸುತ್ತಿದ್ದ ಲೋಟವನ್ನು ತೆಗೆದು ಎಸೆದುದಾಗಿ ಹೇಳಲಾಗಿದೆ.

ಡಯೋಜನೀಸ್ ರೀತಿಯಲ್ಲಿ ಬದುಕುವುದು ಅವಾಸ್ತವ ಎನಿಸಬಹುದು; ಹಾಗೆ ಬದುಕುವುದು ಸಾಮಾನ್ಯರಿಗೆ ಸಾಧ್ಯವಾಗದೆಯೂ ಇರಬಹುದು. ಅವನು ಒಂದು ವಾದವನ್ನು ಅದರ ವಿಪರೀತ ಹಂತಕ್ಕೆ ಕೊಂಡೊಯ್ಯುತ್ತಿದ್ದಾನೆ ಎನ್ನುವುದು ನಿರ್ವಿವಾದ. ಹಾಗಾದರೂ ಸರಳ ಜೀವನದ ಪ್ರತೀಕವಾಗಿದ್ದ ಡಯೋಜನೀಸ್ ಬೇರೊಂದು ಬದುಕುವ ಮಾರ್ಗವನ್ನು ಸೂಚಿಸುತ್ತಾನೆ ಎನ್ನುವುದು ಕೂಡ ಅಷ್ಟೇ ಸತ್ಯ.

ಡಯೋಜನೀಸ್ ಬದುಕು ಒಂದು ಕಟ್ಟುಕತೆಯಂತೆ ಕಂಡರೂ, ಅದರಲ್ಲಿ ಸರಳ ಬದುಕಿನ ಒಂದು ತತ್ವ ಅಡಕವಾಗಿದೆ. ನಮ್ಮ ಬದುಕು ನಮ್ಮದು; ಅದನ್ನು ನಮಗಾಗಿ ಬದುಕಬೇಕು. ಬೇರೆಯವರಂತೆ ಬದುಕಲು ಹೋಗಿ ಪರದಾಡುವುದರಲ್ಲಿ ಯಾವುದೇ ಅರ್ಥ ಇರುವುದಿಲ್ಲ. ಹಾಸಿಗೆ ಇರುವಷ್ಟು ಕಾಲು ಚಾಚುವುದು ಬುದ್ಧಿವಂತಿಕೆಯ ಲಕ್ಷಣ. ಸರಳತೆಯ ಮೂಲಕ ಆತ್ಮತೃಪ್ತಿ ಪಡೆದುಕೊಳ್ಳುವುದು ಸಾಧ್ಯ ಎನ್ನುವುದಕ್ಕೆ ಡಯೋಜನೀಸನ ಬದುಕು ಒಂದು ಉತ್ತಮ ನಿದರ್ಶನ.

(ಸೌಜನ್ಯ: ಆಕಾಶವಾಣಿ)

**ಡಾ॥ ಎಚ್. ಎಸ್. ಈಶ್ವರ್**
ಎಚ್.ಐ.ಜಿ.–೧೧, ಕೆ.ಹೆಚ್.ಬಿ.ಕಾಲೋನಿ, ೧ನೇ ಹಂತ,
ಬಸವೇಶ್ವರ ನಗರ, ಬೆಂಗಳೂರು - ೫೬೦೦೭೯



ಅಲೆಕ್ಸಾಂಡರನೇ ತನ್ನ ಪರಿಚಯವನ್ನು ಹೇಳಿಕೊಂಡು, "ನಿನಗೆ ಏನು ಬೇಕು ಕೇಳು, ಅದನ್ನು ನಿನಗೆ ಸಂತೋಷದಿಂದ ಕೊಡುತ್ತೇನೆ" ಎಂದು ಹೇಳುತ್ತಾನೆ. ಈ ಹೊತ್ತಿನಲ್ಲಿ ಅಲೆಕ್ಸಾಂಡರ್ ಡಯೋಜನೀಸ್‌ನ ಮೇಲೆ ಬೀಳುತ್ತಿದ್ದ ಸೂರ್ಯನ ಬಿಸಿಲಿಗೆ ಅಡ್ಡವಾಗಿ ನಿಂತಿರುತ್ತಾನೆ. ಅಲೆಕ್ಸಾಂಡರನ ಸಹಾಯಹಸ್ತಕ್ಕೆ ಡಯೋಜನೀಸನ ಪ್ರತಿಕ್ರಿಯೆ ನಮ್ಮಂಥ ಸಾಮಾನ್ಯರಿಗೆ ಆಶ್ಚರ್ಯವನ್ನುಂಟುಮಾಡುವಂತಿದೆ. "ನಿನ್ನಿಂದ ಕೊಡಲಾಗದ ವಸ್ತುವನ್ನು ನನ್ನಿಂದ ಕಿತ್ತುಕೊಳ್ಳಬೇಡ. ನೀನು ನನ್ನ ಬಿಸಿಲಿಗೆ ಅಡ್ಡವಾಗಿ ನಿಂತಿದ್ದೀಯ. ನೀನು ಆಚೆ ಸರಿಯುವುದಷ್ಟೇ ನನಗೆ ಬೇಕಿದೆ" ಎನ್ನುತ್ತಾನೆ ಡಯೋಜನೀಸ್. ಆ ನಂತರದಲ್ಲಿ ಅಲೆಕ್ಸಾಂಡರ್ ತನ್ನ ಜೊತೆಯವರಿಗೆ ಹೇಳಿದನಂತೆ, "ನಾನು ಅಲೆಕ್ಸಾಂಡರ್ ಆಗಿರದಿದ್ದರೆ, ಡಯೋಜನೀಸ್ ಆಗಲು ಆಯ್ಕೆ ಮಾಡಿಕೊಳ್ಳುತ್ತಿದ್ದೆ" ಎಂಬುದಾಗಿ.

# ಹುಸೇನಿಯವರ ಜಾದು !







ಸಾಂಜ್ಞಿ ಕಲೆ ಪುರಾತನವಾದುದು. ಅನೇಕ ಸಾಂಪ್ರದಾಯಿಕ ಆಚರಣೆಗಳಲ್ಲಿ ಇಂದಿಗೂ ಇದು ಪ್ರಯೋಗದಲ್ಲಿದೆ. ೧೯೭೬ರಲ್ಲಿ ಶಿವನಸಮುದ್ರದಲ್ಲಿ ಹುಟ್ಟಿದ ಸಯ್ಯದ್ ಫಕ್ರೂದ್ದೀನ್ ಹುಸೇನಿ ಈ ಕಲೆಯಲ್ಲಿ ಅತಿನಿಷ್ಣಾತರು. ಕಾಗದ – ಕತ್ತರಿ ಇದ್ದರೆ ಸಾಕು, ಕೆಲವೇ ನಿಮಿಷಗಳಲ್ಲಿ ಸಂಕೀರ್ಣವಾದ ಚಿತ್ರಗಳನ್ನು ಬಿಡಿಸಿ ಬಿಡುವ ಚಾತುರ್ಯ ಮತ್ತು ಕೌಶಲ್ಯ ಅವರದು. ಗೆರೆಗಳಲ್ಲಿ ಚಿತ್ರ ಬಿಡಿಸುವುದು ಹಾಗೂ ಚಿತ್ರಕಲೆ ಸಹ ಅವರಿಗೆ ಕರಗತವಾಗಿವೆ. ಚಿತ್ರಕಲೆಯಲ್ಲಿ ಡಿಪ್ಲೊಮಾ ಹಾಗೂ ಎ.ಎಂ. ಪದವಿ ಪಡೆದಿರುವ ಶ್ರೀ ಹುಸೇನಿಯವರು ನೂರಾರು ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ ಮತ್ತು ಹತ್ತಾರು ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಹಳ್ಳಿಗಳ ಶಾಲೆಗಳಿಗೆ ಹೋಗಿ ಮಕ್ಕಳಿಗೆ ತಮ್ಮ ಕಲೆಯನ್ನು ಕಲಿಸುವುದು ಇವರ ಅಪೂರ್ವವಾದ ಹವ್ಯಾಸ.

(ವಿಳಾಸ : ೧೫೨ ಮಹಡಿ, ೫ನೇ ಮುಖ್ಯರಸ್ತೆ
ಜಯನಗರ ೧ನೇ ಬ್ಲಾಕ್, ಪೂರ್ವ, ಬೈರಸಂದ್ರ
ಬೆಂಗಳೂರು - ೫೬೦ ೦೧೧. ದೂ.: ೯೮೪೫೧ ೫೬.೨೭೭)













Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna
© All rights reserved. Reproduction in whole or in part without permission is prohibited.

**HOSATHU** Kannada Monthly /OCTOBER 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614


# "ಅಮ್ಮನೋ ಅಥವಾ ಕಾಲೇಜು ಹುಡುಗಿಯೊ?"






ಹೊಸ ಸಂತೂರ್ ವೈಟ್, ಚಂದನ ಹಾಗೂ ಬಾದಾಮಿ ಹಾಲಿನ ಮ್ಯಾಶ್ಚರೈಸಿಂಗ್ ಗುಣಯುಕ್ತ




ಹೊಸ ಸಂತೂರ್, ಅರಿಶಿಣ ಹಾಗೂ ಚಂದನದ ಪೋಷಣೆಯುಕ್ತ

# ಉಚಿತ!* Reynolds ಪೆನ್

worth Rs.7/-

ಈಗ ಎಲ್ಲರೂ ಪಡೆಯಬಲ್ಲರು ನೋಡುವವರನ್ನು ಚಕಿತಗೊಳಿಸುವಂತಹ ತ್ವಚೆ. ಪ್ರಸ್ತುತವಿದೆ ಸಂತೂರ್, ಎರಡು ಆಕರ್ಷ ಹೊಸ ರೂಪಗಳಲ್ಲಿ. ನಿಮ್ಮ ತ್ವಚೆಯನ್ನು ವರ್ಷಾನುವರ್ಷ ತಾರುಣ್ಯಪೂರ್ಣವಾಗಿ ಇರಿಸುವ ರಹಸ್ಯವನ್ನು ಕಂಡುಕೊ ಮತ್ತು ಎಲ್ಲರೂ ಉದ್ಗರಿಸಲಿ, ನಿಜವಾದ ಸ್ಟಾರ್ ಎಂದರೆ ಈ ಸಂತೂರ್ ಮಮ್ಮಿ.

ಹೊಸ ಸಂತೂರ್